ಜಯತು ಭಗವಾ಼ೕ

**ಬಾಲಸರಸ್ವತೀ ಗ್ರಂಥಮಾಲಾ**

---

# ಚಿತ್ರಗುಪ್ತನ ೨ನೆಯ ದಪ್ತರ

## ಇ

# ಕಮಲಾಕಾಂತನ ಉಯಿಲು




ವಿದ್ವಾ಼ೕ

**ವಿದ್ಯಾಭೂಷಣ ಬಾಲಸರಸ್ವತಿಯವರಿಂದ**

ವಿರಚಿತವಾದುದು


---


ಬೆಂಗಳೂರು

**ವಿ. ಸ್ನೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ**

ಮುದ್ರಿಸಲ್ಪಟ್ಟಿತು.

Price 12 As.] **1931** **[ಬೆಲೆ ೧೨ ಆಣೆ.**



ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

ಜಯತು ಭಗವಾ‌ನ್

ಬಾಲಸರಸ್ವತೀ ಗ್ರಂಥಮಾಲಾ

# ಚಿತ್ರಗುಪ್ತನ ೨ನೆಯ ದಪ್ತರ

# ೩

# ಕಮಲಾಕಾಂತನ ಉಯಿಲು

## ಪ್ರಥಮ ಖಂಡ

### ಮೊದಲನೆಯ ಸಂಧಿ

ಮಾರ್ಗಾವರೋಧನ

"ಸತ್ಯವೋ?"
"ಸತ್ಯ."
"ಸತ್ಯವೋ?"
"ಸತ್ಯ."
"ಸತ್ಯವೋ?"
"ಸತ್ಯ."

"ಮೂರು ಸಲ ಸತ್ಯ ಮಾಡಿರುವೆ. ನೀನು ಕೊಟ್ಟ ಮಾತಿಗೆ ತಪ್ಪಿ ನಡೆವುದಾದರೆ, ನರಕವಾಸವು ನಿನಗೆ ಎಂದೆಂದಿಗೂ ತಪ್ಪದು; ಎಚ್ಚರಿಕೆ!" ಎಂದು ಭೂತನಾಥನು ಹೇಳಿ, ಅದಕ್ಕೆ ಉತ್ತರವನ್ನು ನಿರೀಕ್ಷಿಸುವುದಕ್ಕಾಗಿ ಕಾಲರುದ್ರನ ಕಡೆಗೆ ತನ್ನ ದೃಷ್ಟಿಯನ್ನು ಪ್ರಸರಿಸಿದನು.

---

ವಿದ್ವಾನ್ ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ ವಿರಚಿತವಾದುದು.

ಕಾಲರುದ್ರನು ಅತಿ ಭಯಂಕರ ಸ್ವಭಾವದವನು. ದರೋಡೆಗಳ್ಳತನವೇ ಅವನ ನಿತ್ಯಜೀವಿಕೆಯು. ಹಣವನ್ನು ಸಂಪಾದಿಸುವುದಕ್ಕಾಗಿ ಲೋಕದಲ್ಲಿ ಈತನು ಮಾಡದ ಕೆಲಸವಿಲ್ಲ. ಈತನು ಭೂತನಾಥನಾಡಿದ ಮಾತನ್ನು ಕೇಳಿ ಮುಗುಳು ನಗೆಯನ್ನು ನಕ್ಕು—"ಮಿತ್ರನೇ! ನನಗೂ ನರಕವೆಂಬುದರಲ್ಲಿ ಸ್ಥಳವುಂಟೇ? ಈಗಣ ಕಾಲದಲ್ಲಿ ಎಂತೆಂತಹವರೋ ಮಾಡಬಾರದ ದುಷ್ಕೃತ್ಯಗಳನ್ನೆಸಗಿ ನರಕಕ್ಕೆ ಅತಿಥಿಗಳಾಗಿ ತೆರಳುತ್ತಿರುವಲ್ಲಿ, ಅಲ್ಲಿ ನಮ್ಮಂತಹವರನ್ನು ಕೇಳುವವರಾರು? ಈ ಮಾತು ಅದಂತಿರಲಿ. ವಿಶೇಷ ಸಂಗತಿಯೇನಾದರೂ ಇರುವುದಾದರೆ ತಿಳಿಸು," ಎಂದು ನುಡಿದನು.

ಭೂತನಾಥ—ಕಾಲರುದ್ರ! ಈ ಸರಹದ್ದಿನಲ್ಲಿ ಕಮಲಾಕಾಂತ ಚಕ್ರವರ್ತಿ ಎಂಬ ಒಬ್ಬ ಕೊಬ್ಬಿದ ಜಮೀನುದಾರನು ವಾಸವಾಗಿರುವನು. ಅವನ ಸಂಪತ್ತಾದರೋ ಅಪಾರವಾಗಿರುವುದು. ಪ್ರಕೃತದಲ್ಲಿ ಅವನ ಹೆಂಡಿತಿ ಮಗಳು ಇತ್ತಕಡೆಯೇ ಬರುವವರಾಗಿರುವರು. ಅವರು ಕಾತ್ಯಾಯನೀ ದರ್ಶನಕ್ಕಾಗಿ ಹೋಗಿದ್ದರೆಂದು ತೋರುವುದು. ಅವರಲ್ಲಿ ಮತ್ತೇನಿಲ್ಲದಿದ್ದರೂ, ಅವರ ಮೈ ಮೇಲೆ ಅಮೂಲ್ಯವಾದ ಆಭರಣಗಳಿಗೇನೂ ಕೊರತೆಯಿಲ್ಲ.

ಕಾಲರುದ್ರ—ಅವರು ಎಷ್ಟು ಮಂದಿ?

ಭೂತ—ಮೂವರು; ಎಲ್ಲರೂ ಹೆಂಗುಸರು.

ಕಾಲ—ಒಬ್ಬನಾದರೂ ಗಂಡಸಿಲ್ಲವೇ? ಹಾಗಾದರೆ ಒಳ್ಳೆಯದೇ ಆಯಿತು. ಒಬ್ಬೊಬ್ಬನು ಒಂದೊಂದು ಮರೆಯಲ್ಲಿ ಅವಿತುಕೊಂಡು ಕಾದಿರಬೇಕು, ಆದರೆ ಒಬ್ಬೊಬ್ಬನೂ ಮತ್ತೊಬ್ಬನ ಧ್ವನಿಯನ್ನು ಕೇಳುವಷ್ಟು ಹತ್ತಿರದಲ್ಲಿಯೇ ಇರುವುದು ಒಳ್ಳೆಯದು.

ಭೂತ—ನ್ಯಾಯವಾದ ಮಾತು. ನೀವಿಬ್ಬರೂ ಇಬ್ಬರು ಯುವತಿಯರನ್ನು ಆಕ್ರಮಿಸಿರಿ. ನಾನು ಹುಡುಗಿಯನ್ನು ನೋಡಿಕೊಳ್ಳುವೆನು. ನೀವು ಹುಡುಗಿಯ ಗೋಜಿಗೆ ಬರಬೇಡಿರಿ, ಕಂಡಿರಾ?

ಭೂತನಾಥನು ಈ ರೀತಿಯಾಗಿ ಕಟ್ಟುಮಾಡಿ ಸಮೀಪದಲ್ಲಿದ್ದ ಒಂದು ದೊಡ್ಡ ಮರದ ಹಿಂಗಡೆಯಲ್ಲಿ ಅವಿತುಕೊಂಡನು. ಉಳಿದವರಾದ ಕಾಲರುದ್ರ ವೀರಭದ್ರರೆಂಬುವರು ಬೇರೆಬೇರೆಯಾಗಿ ಅವಿತುಕೊಂಡು ಹೆಂಗುಸರ ಆಗಮನವನ್ನೇ ನಿರೀಕ್ಷಿಸುತ್ತಿದ್ದರು.

ಸೂರ್ಯದೇವನು ಅಸ್ತಂಗತನಾಗಿ ಸಂಧ್ಯಾಕಾಲವು ಎಲ್ಲೆಲ್ಲಿಯೂ ಆವರಿಸಿಕೊಂಡು ಬಂದಿರುವುದು. ಕ್ರಮಕ್ರಮವಾಗಿ ಕ್ಷೀಣಚಂದ್ರನು ತನ್ನ ಅಸ್ಫುಟವಾದ ಕಿರಣವನ್ನು ಭೂಮಿಯ ಮೇಲೆ ಬೀರಲಾರಂಭಿಸಿದನು. ನಾವು ಆವ ಘಟನಾಚಕ್ರವನ್ನು ಅವಲಂಬಿಸಿ ವರ್ಣಿಸಲು ಉದ್ಯುಕ್ತರಾಗಿರುವೆವೋ, ಆ ಸಮಯದಲ್ಲಿ ಜನರು ವಿಶೇಷವಾಗಿ ಆ ಮಾರ್ಗದಲ್ಲಿ ಸಂಚರಿಸುತ್ತಿರಲಿಲ್ಲ.

ಮೇಲೆ ಹೇಳಿದ ಮೂವರು ಹೆಂಗುಸರು ಮಟ್ಟಿಗೆ ಕಾತ್ಯಾಯನೀ ದರ್ಶನಕ್ಕಾಗಿ ಹೋಗಿದ್ದವರು ಆ ಸಮಯದಲ್ಲಿ ಮನೆಗೆ ಹಿಂದಿರುಗಿ ಬರುತ್ತಿದ್ದರು. ಆಗ ಕಮಲಾಕಾಂತನ ಹೆಂಡಿತಿಯು ಹಿಂದೆ ಬರುತ್ತಿದ್ದ ತನ್ನ ಮಗಳನ್ನು ಕುರಿತು—ಕುಂದನಂದಿನಿ! ಹೊತ್ತಾದುದು ಗೊತ್ತಾಗಲಿಲ್ಲವೇ? ಬೇಗ ಬೇಗನೆ ನಮ್ಮ ಜತೆಯಲ್ಲಿಯೇ ನಡೆದು ಬಾ. ನಮ್ಮ ಬಳಿಯಲ್ಲಿ—

ಈ ಮಾತು ಪೂರ್ತಿಯಾಗುವುದರೊಳಗಾಗಿ ಕಾಲರುದ್ರನು ಸಿಂಹದಂತೆ ಹಾರಿಬಂದು ಕಮಲಾಕಾಂತನ ಹೆಂಡಿತಿಯನ್ನು ಆಕ್ರಮಣ ಮಾಡಿದನು. ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ ವೀರಭದ್ರನು ಮತ್ತೊಬ್ಬ ಯುವತಿಯನ್ನೂ, ಭೂತನಾಥನು ಕುಂದನಂದಿನಿಯೆಂಬ ಹುಡುಗಿಯನ್ನೂ ಹಿಡಿದಿದ್ದರು.

ಕಳ್ಳರಿಂದ ಆವರಿಸಲ್ಪಟ್ಟ ಹೆಂಗುಸರು ಭಯದಿಂದ ನಡುಗಿದವರಾಗಿ ಸುಮ್ಮನೆ ನಿಂತುಬಿಟ್ಟರು. ಅವರ ಬಾಯಿಂದ ಆವ ವಿಧವಾದ ಧ್ವನಿಯೂ ಹೊರಡಲೇ ಇಲ್ಲ. ಪ್ರಲಯಾಂತಕರಾದ ಕಾಲರುದ್ರ ವೀರಭದ್ರರ ಬಲಪ್ರಯೋಗದಿಂದ ಯುವತಿಯರಿಬ್ಬರೂ ಅಚೇತನರಾಗಿ ನೆಲದ ಮೇಲೆ ಬಿದ್ದುಬಿಟ್ಟರು.

ಕುಂದನಂದಿನಿಯು ಆತ್ಮರಕ್ಷಣೆಗಾಗಿ ಭೂತನಾಥನೊಡನೆ ಬಲು ಹೊತ್ತು ಹೋರಾಡಿದಳು. ಆಕೆಯನ್ನು ಹೊಡೆದು ಅಪ್ಪಳಿಸುವುದಕ್ಕೆ ಮನವೊಡಂಬಡದ ಭೂತನಾಥನು ಯುಕ್ತಿಯಿಂದ ಒಡವೆಗಳನ್ನು ಕಸಿದುಕೊಳ್ಳುವುದಕ್ಕೆ ತನ್ನ ಸಾಹಸವೆಲ್ಲವನ್ನೂ ವೆಚ್ಚಮಾಡುವುದರಲ್ಲಿದ್ದನು.

ಈ ಮೂವರೂ ತಮ್ಮ ತಮ್ಮ ಕೆಲಸದಲ್ಲಿ ನಿರತರಾಗಿರುವಲ್ಲಿ, ಕುದುರೆಯೊಂದು ಅತ್ತಕಡೆಗೇ ಓಡಿ ಬರುತ್ತಿರುವ ಶಬ್ದವು ಕಳ್ಳರ ಕಿವಿಯಲ್ಲಿ ತಟ್ಟನೆ ಬಿದ್ದಿತು.

## ಎರಡನೆಯ ಸಂಧಿ

### ಆಶ್ಚರ್ಯೋದ್ಧಾರ

ರಾಜನಗರಕ್ಕೆ ಸೇರಿದ ಹಾಗೆ ಉತ್ತರ ಭಾಗದಲ್ಲ ಕಾಲಾಂಜನವೆಂಬ ಪ್ರದೇಶವೊಂದುಂಟು. ಅಲ್ಲ ಪರಂತಪನೆಂಬ ಯುವಕನೊಬ್ಬನು ವಾಸಮಾಡಿ ಕೊಂಡಿರುತಿದ್ದನು. ವಸ್ತ್ರವ್ಯಾಪಾರದಿಂದ ಅವನ ಜೀವಿಕೆಯು ಶ್ಲಾಘ್ಯವಾದ ರೀತಿಯಲ್ಲಿಯೇ ನಡೆಯುತ್ತಿದ್ದಿತು.

ಪರಂತಪನು ಒಬ್ಬ ಜಸವಡೆದ ಪತ್ತೇದಾರನಾಗಿದ್ದನು. ಆತನು ಪೋಲೀಸು ಇಲಾಖೆಯಲ್ಲಿ ಸಂಬಳಕ್ಕೆ ಸೇರಿಕೊಂಡು ಪತ್ತೇದಾರಿಯ ಕೆಲಸವನ್ನು ನಡೆಯಿಸದಿದ್ದರೂ, ತನ್ನ ಇಚ್ಛೆಯಿಂದಲೇ ಪತ್ತೇದಾರಿಯ ಕಾರ್ಯಭಾರವನ್ನು ವಹಿಸಿದ್ದನು. ಆವ ಕೆಲಸವು ಪೋಲೀಸಿನವರಿಗೆ ಅಸಾಧ್ಯವೋ, ಆವ ಕೆಲಸದಲ್ಲಿ ಸರಕಾರದ ಪತ್ತೇದಾರರಿಗೆ ಬುದ್ಧಿಯೇ ಹಾಯುತ್ತಿರಲಿಲ್ಲವೋ, ಅಂತಹ ಕೆಲಸವನ್ನು ನಮ್ಮ ಪರಂತಪನು ಕೈಕೊಂಡು ಲಾಭಾಲಾಭದ ಕಡೆಗೆ ದೃಷ್ಟಿಯಿಡದೆ ಕೇವಲವಾಗಿ ಖ್ಯಾತಿಯನ್ನು ಪಡೆವುದಕ್ಕಾಗಿಯೇ ಕೆಲಸಮಾಡು ತ್ತಿದ್ದನು.

ಪರಂತಪನಿಗೆ ೨೫ರ ಮೇಲೆ ೩೦ರ ಒಳಗಿನ ವಯಸ್ಸಾಗಿದ್ದಿತು. ಆತನು ನೋಡುವುದಕ್ಕೆ ಗೌರವರ್ಣವುಳ್ಳವನೂ ಸುಂದರನೂ ಬಲಿಷ್ಠನೂ ಆಗಿದ್ದನು. ಆತನ ಸಂಸಾರದಲ್ಲಿ ಮುದುಕಿಯಾದ ಆತನ ತಾಯಿ ಹೊರತಾಗಿ ಮತ್ತಾರೂ ಇರಲಿಲ್ಲ. ಆವ ವೇಳೆಯಲ್ಲ ಕಳ್ಳರು ಹೆಂಗುಸರನ್ನು ಆಕ್ರಮಣ ಮಾಡುವುದಕ್ಕೆ ಮುಂದುವರಿದು ಬಂದಿದ್ದರೋ ಆಗ ಪರಂತಪನು ಕಾರ್ಯಗೌರವದ ಮೇಲೆ ಎಲ್ಲಿಗೋ ಹೋಗಿದ್ದವನು ಕುದುರೆಯನ್ನೇರಿ ಆ ಕಳ್ಳರಿದ್ದ ಮಾರ್ಗವಾಗಿಯೇ ತನ್ನ ಸ್ಥಾನಕ್ಕೆ ಹೊರಟುಬರುತ್ತಿದ್ದನು.

ಚಂದ್ರನ ಅಸ್ಫುಟವಾದ ಬೆಳಕಿನಲ್ಲಿ ಕಳ್ಳರು ಹೆಂಗುಸರನ್ನು ಆಕ್ರಮಣ ಮಾಡುತ್ತಿರುವ ಸಮಯಕ್ಕೆ ಸರಿಯಾಗಿ ಪರಂತಪನು ದೈವಯೋಗದಿಂದ ತನ್ನ ಕುದುರೆಯನ್ನು ವೇಗವಾಗಿ ಬಿಟ್ಟುಕೊಂಡು ಆ ಸ್ಥಲಕ್ಕೆ ಬಂದು ನೋಡಿ ದನು. ಕಳ್ಳನೊಬ್ಬನು ಹುಡುಗಿಯೊಬ್ಬಳನ್ನು ನೆಲದ ಮೇಲೆ ಕೆಡಹುವುದಕ್ಕೆ ಸಾಹಸಪಡುತ್ತಿದ್ದನು. ಇದನ್ನು ನೋಡಿದ ಕೂಡಲೆ ಪರಂತಪನು ಕುದುರೆ ಯಿಂದ ಒಂದೇ ಹಾರು ಹಾರಿ ಕಳ್ಳನ ಮೇಲೆ ಬಿದ್ದು ಅವನ ಹುಬ್ಬಿನ ನಡುವೆ ತನ್ನ ಮುಷ್ಟಿಯಿಂದ ಒಂದು ಬಲವಾದ ಪೆಟ್ಟನ್ನು ಕೊಟ್ಟನು. ಕಳ್ಳನು ಆ

ಪೆಟ್ಟನ್ನು ತಾಳಲಾರದೆ ವಿಲವಿಲನೆ ಒದೆದಾಡಿ ಮೂರ್ಛೆಗೊಂಡು ನೆಲದ ಮೇಲೆ ಸುತ್ತಿಕೊಂಡು ಬಿದ್ದುಬಿಟ್ಟನು.

ಕುಂದನಂದಿನಿಯು ಕಳ್ಳನ ಹಿಡಿತದಿಂದ ಮುಕ್ತಿಲಾಭವನ್ನು ಪಡೆದಳಾದರೂ ಭಯದಿಂದ ಚಕಿತಳಾಗಿ ಬಸವಳಿದು ಪರಂತಪನ ಕಾಲುಗಳ ಮೇಲೆ ಬಿದ್ದುಬಿಟ್ಟಳು.

ಭೂತನಾಥನಿಗೆ ಉಂಟಾದ ದುರವಸ್ಥೆಯನ್ನು ನೋಡಿ ರೇಗಿ ರೇಗಿ ಬಿದ್ದ ವೀರಭದ್ರನು ಹಿಂಗಡೆಯಿಂದ ಓಡಿಬಂದು ಪರಂತಪನ ಬೆನ್ನ ಮೇಲೆ ರಪ್ಪೆಂದು ಅಪ್ಪಳಿಸಿದನು. ಪರಂತಪನು ಅಪ್ರತಿಭನಾದರೂ ನಿಮಿಷಮಾತ್ರದಲ್ಲಿಯೇ ಚೇತರಿಸಿಕೊಂಡು ವೀರಭದ್ರನ ಕೈಗಳನ್ನು ಹಿಡಿದುಕೊಂಡು ಗಿರಗಿರನೆ ತಿರುಗಿಸಿ ದೂರವಾಗಿ ಒಗೆದನು. ಈ ರಭಸಕ್ಕೆ ವೀರಭದ್ರನೂ ಜ್ಞಾನತಪ್ಪಿದವನಾಗಿ ಭೂಮಿಯ ಮೇಲೆ ಕೈಕಾಲುಗಳನ್ನು ಚಾಚಿಕೊಂಡು ಬಿದ್ದುಬಿಟ್ಟನು.

ಇಷ್ಟೆನ್ನುವುದರೊಳಗಾಗಿ ಕಾಲರುದ್ರನು ಪ್ರಲಯಕಾಲದ ರುದ್ರನಂತೆ ಆರ್ಭಟಿಸುತ್ತಾ ಓಡಿ ಬಂದು ಪರಂತಪನ ಮೇಲೆ ದುಡುಪ್ಪೆಂದು ದುಮ್ಮಿಕ್ಕಿದನು. ಇದನ್ನು ನಿರೀಕ್ಷಿಸುತ್ತಲೇ ಇದ್ದ ಪರಂತಪನು ಎವೆಯಿಕ್ಕುವುದರೊಳಗಾಗಿ ಪಕ್ಕಕ್ಕೆ ಸರಿದು ನಿಲ್ಲಲು, ಕಾಲರುದ್ರನು ದಾಯತಪ್ಪಿ ನೆಲದ ಮೇಲೆ ಹೊಟ್ಟೆಕೆಳಗಾಗಿ ಉರುಳಿದನು ಆತನು ಮತ್ತೆ ಚೇತರಿಸಿಕೊಂಡು ಏಳುವುದರೊಳಗಾಗಿ ಪರಂತಪನು ಅವನ ಬೆನ್ನಮೇಲೆ ಕುಳಿತುಕೊಂಡು ಹೆಕ್ಕತ್ತಿನ ಮೇಲೆ ತನ್ನ ಮುಷ್ಟಿಯಿಂದ ಹತ್ತಾರು ಗುದ್ದುಗಳನ್ನು ಗುದ್ದಿದನು. ಇದರ ಯಾತನೆಯನ್ನು ಸಹಿಸಲಾರದೆ ಕಾಲರುದ್ರನು ರಕ್ತವನ್ನು ಕಾರಲಾರಂಭಿಸಿದನು

ಪರಂತಪನು ಮೂವರನ್ನೂ ಈ ರೀತಿಯಾಗಿ ನಿಶ್ಚೇತನರನ್ನಾಗಿ ಮಾಡಿದ ಬಳಿಕ, ತನ್ನಲ್ಲಿದ್ದ ಕುದುರೆಯ ಹಗ್ಗವನ್ನು ತೆಗೆದು ಮೂವರನ್ನೂ ಒಂದು ದೊಡ್ಡ ಮರಕ್ಕೆ ಅಲುಗಾಡದ ಹಾಗೆ ಬಿಗಿದು ಕಟ್ಟಿದನು. ಬಳಿಕ ಹೆಂಗುಸರ ಪಾಡೇನಾಗಿರುವುದೆಂಬುದನ್ನು ತಿಳಿಯುವುದಕ್ಕೋಸ್ಕರ ಇತ್ತ ಕಡೆ ಬಂದು ನೋಡಲಾಗಿ, ಕಮಲಾಕಾಂತನ ಹೆಂಡಿತಿಯು ಪರಲೋಕಕ್ಕೆ ತೆರಳಿಬಿಟ್ಟಿದ್ದಳು. ಉಳಿದವರಿಬ್ಬರಲ್ಲಿಯೂ ಪ್ರಾಣಗಳು ತುಟುಗುಟ್ಟುತ್ತಿದ್ದುದರಿಂದ, ಪರಂತಪನು ಹತ್ತಿರದಲ್ಲಿದ್ದ ನೀರಿನ ಬಳಿಗೆ ಓಡಿಹೋಗಿ ತನ್ನ ವಸ್ತ್ರವನ್ನು ನೀರಿನಲ್ಲಿ ಅದ್ದಿ ಅದನ್ನು ತಂದು ಹೆಂಗುಸರ ತಲೆಯ ಮೇಲೆಯೂ ಎದೆಯ ಮೇಲೆಯೂ ಹಿಂಡಿದನು. ಕೊಂಚ ಹೊತ್ತಿನೊಳಗಾಗಿ ಕುಂದನಂದಿನಿಯು ಚೇತರಿಸಿಕೊಂಡು 'ಅಮ್ಮಾ' ಎಂದು ಕೂಗಿದಳು.

ಪರಂತಪ—ನಿನ್ನ ತಾಯಿಯು ಮೂರ್ಛಿತೆಯಾಗಿರುವಳು. ಅದಕ್ಕಾಗಿ ನೀನು ಭಯಪಡಬೇಕಾದುದಿಲ್ಲ. ನೀನು ಎದ್ದು ನಿನ್ನ ತಾಯಿಯ ಬಳಿಗೆ ಹೋಗ ಬಲ್ಲೆಯಾ ?

ಕುಂದನಂದಿನಿ—ನನ್ನನ್ನು ಕರೆದುಕೊಂಡು ಹೋಗೋಣವಾಗಲಿ, ನಾನು ತುಂಬಾ ದುರ್ಬಲೆಯಾಗಿರುವೆನು. ಅದು ಕಾರಣ ನಾನು ನಿಂತು ನಡೆವು ದಕ್ಕೆ ಶಕ್ತಿಯಿಲ್ಲದವಳಾಗಿರುವೆನು. ನನ್ನ ತಾಯಿಯು ಬದುಕಿರುವಳಷ್ಟೇ ?

ಪರಂ—ಚಿಂತಿಸಬೇಡವಮ್ಮಾ.

ವಯಸ್ಸಾದ ಹೆಂಗುಸೇ ಈಕೆಯ ತಾಯಿಯೆಂದು ಪರಂತಪನು ಅರಿತು ಕೊಂಡನು ; ಆದರೆ ಆಕೆಯು ಮಡಿದಿರುವ ಸುದ್ದಿಯನ್ನು ಮಟ್ಟಿಗೆ ಹುಡುಗಿಗೆ ತಿಳಿಸಲು ಆತನಿಗೆ ಸಾಹಸವುಂಟಾಗಲಿಲ್ಲ. ಆತನು ಹುಡುಗಿಯ ಪ್ರಶ್ನೆಗೆ ಆವ ಉತ್ತರವನ್ನೂ ಕೊಡಲಾರದವನಾಗಿ — ಮಗು, ನಾನೇ ನಿನ್ನನ್ನು ಆಕೆಯ ಬಳಿಗೆ ಕರೆದುಕೊಂಡು ಹೋಗುವೆನು, ಎಂದನು.

ಕುಂದನಂದಿನಿಯು ಪರಂತಪನ ಸಾಹಾಯ್ಯದಿಂದ ತನ್ನ ತಾಯಿಯ ಬಳಿಗೈ ತಂದು ನೋಡಿದಳು. ತಾಯಿಯ ಪ್ರಾಣವಾಯುವು ಹಾರಿಹೋಗಿದ್ದಿತು. ಇದನ್ನು ಅರಿತುಕೊಂಡ ಕೂಡಲೆ ಕುಂದನಂದಿನಿಯು ಗೊಳೋ ಎಂದು ಅಳುವುದಕ್ಕೆ ಮೊದಲು ಮಾಡಿದಳು ; ಈಕೆಯ ರೋದನವನ್ನು ನಿಲ್ಲಿಸುವುದಕ್ಕೆ ಪರಂತಪನು ಮಾಡಿದ ಪ್ರಯತ್ನವು ವರ್ಣನಾತೀತವಾದುದು.

ಪರಂತಪನು ಕುಂದನಂದಿನಿಯನ್ನು ಸಂತೈಸಿದ ಬಳಿಕ ಮತ್ತೊಬ್ಬ ಯುವ ತಿಯ ಹತ್ತಿರಕ್ಕೆ ಬಂದು ಆಕೆಗೆ ಜ್ಞಾನೋದಯವಾಗುವುದಕ್ಕೆ ಬಲು ಹೊತ್ತು ತನ್ನ ಬುದ್ಧಿಯೆಲ್ಲವನ್ನೂ ವೆಚ್ಚಮಾಡಿದನು ; ಆದರೂ ಏನೂ ಪ್ರಯೋಜನವಾಗ ಲಿಲ್ಲ. ಇಲ್ಲಿಯೇ ವ್ಯರ್ಥವಾಗಿ ಕಾಲವಿಲಂಬವಾಗುವುದಾದರೆ, ಅಪಾಯವೇನಾ ದರೂ ಸಂಭವಿಸಬಹುದೆಂದು ತಿಳಿದು ಪರಂತಪನು ಹುಡುಗಿಯನ್ನು ಕುರಿತು— ಮಗು, ನೀವುಗಳು ಎಲ್ಲಿಂದ ಬರುತಿದ್ದಿರಿ? ನಿನ್ನ ತಂದೆಯ ಹೆಸರೇನು ? ಎಂದು ಪ್ರಶ್ನೆಮಾಡಿದನು.

ಕುಂದ—ಮಹಾಶಯ ! ಕಾತ್ಯಾಯನೀದರ್ಶನವನ್ನು ತೆಗೆದುಕೊಂಡು ಮನೆಗೆ ಹಿಂದಿರುಗಿ ಬರುತ್ತಿದ್ದೆವು. ನನ್ನ ತಂದೆಯ ಹೆಸರು ಕಮಲಾಕಾಂತ ಚಕ್ರವರ್ತಿ.

ಪರಂ—ನೀನು ಕಮಲಾಕಾಂತ ಚಕ್ರವರ್ತಿಯವರ ಮಗಳೇ? ಜ್ಞಾನ ತಪ್ಪಿ ಬಿದ್ದಿರುವ ಈ ಯುವತಿ ಯಾರು?

ಕುಂದ—ಈಕೆಯು ನಮಗೆ ದೂರದ ಸಂಬಂಧಿನಿಯು.

ಪರಂ—ಮಗು, ಈಗ ನೀನೊಂದು ಕೆಲಸ ಮಾಡಬೇಕಾಗುವುದು. ನೀನು ಈ ಹೆಂಗುಸರ ಬಳಿಯಲ್ಲಿಯೇ ಕಾದಿರು. ನಾನು ಬೇಗನೆ ಹೋಗಿ ಪೋಲೀಸಿನವರನ್ನು ಇಲ್ಲಿಗೆ ಕರೆದುಕೊಂಡು ಬರುವೆನು. ದೈವಯೋಗದಿಂದ ಮೂವರು ಕಳ್ಳರೂ ನನ್ನ ಕೈಯಲ್ಲಿ ಸಿಕ್ಕಿಕೊಂಡಿರುವರು; ಆದರೂ ಇವರನ್ನು ನಂಬುವುದಕ್ಕಿಲ್ಲ. ಆದುದರಿಂದ ನಾನು ಪೋಲೀಸಿನವರನ್ನು ಇಲ್ಲಿಗೆ ಕರತರಲೇ ಬೇಕು. ನೀನು ಮಟ್ಟಿಗೆ ಎಚ್ಚರಿಕೆಯಿಂದಿರು.

ಕುಂದ—ನಾನೊಬ್ಬಳೇ ಇಲ್ಲಿರಲಾರೆನು.

ಪರಂ—ಮಗು! ನಿನ್ನ ತಾಯಿಯ ಮೃತದೇಹವನ್ನು ಬಿಟ್ಟು ನೀನು ಹೋಗವುದೆಲ್ಲಿಗೆ? ಇಷ್ಟರೊಳಗೆ ನಿನ್ನ ಸಂಬಂಧಿನಿಗೆ ಜ್ಞಾನಬರುವುದಾದರೆ, ಆಗ ನೀನು ಇಲ್ಲಿಲ್ಲದೇ ಹೋದಲ್ಲಿ ಆಕೆಯು ಬಲುವಾಗಿ ನೊಂದುಕೊಂಡಾಳು. ನೀನು ಇಲ್ಲಿಯೇ ಕಾದಿರು; ನಾನು ಬೇಗನೆಯೇ ಹೊರಟು ಬಂದು ಬಿಡುವೆನು.

ಕುಂದ—ನನ್ನನ್ನೂ ಜತೆಯಲ್ಲಿಯೇ ಕರೆದುಕೊಂಡು ತೆರಳೋಣವಾಗಲಿ. ನಾನೊಬ್ಬಳೇ ಇಲ್ಲಿರಲಾರೆನು.

ಪರಂ—ನಾನು ಕುದುರೆಯನ್ನೇರಿ ಹೊರಡುವೆನಾದುದರಿಂದ, ನೀನು ನನ್ನೊಡನೆ ಬರಲು ಹೇಗೆ ಸಾಧ್ಯವು? ನೀನು ಇನ್ನೂ ದುರ್ಬಲೆಯಾಗಿರುವೆ. ನಿನಗಿನ್ನೂ ಸಂಚರಿಸುವುದಕ್ಕೆ ಶಕ್ತಿಸಾಲದು.

ಕುಂದ—ಏನಾದರೂ ಆಗಲಿ, ನಾನೊಬ್ಬಳೇ ಇಲ್ಲಿರಲೊಲ್ಲೆನು. ಹೇಗಾದರೂ ಮಾಡಿ ತಾವು ನನ್ನನ್ನು ಕರೆದುಕೊಂಡು ಹೋಗಬೇಕು.

ಪರಂ—ಹಾಗಾದರೆ ನೀನೂ ನನ್ನೊಡನೆ ಕುದುರೆಯ ಮೇಲೆ ಹತ್ತಿ ಕುಳಿತುಕೊಳ್ಳು. ನನ್ನ ಕುದುರೆಯಾದರೋ ನಮ್ಮಿಬ್ಬರನ್ನೂ ಅನಾಯಾಸವಾಗಿ ಹೊತ್ತುಕೊಂಡು ಹೋಗುವುದು. ಕುದುರೆಯು ನಾಗಾಲು ಓಟದಿಂದ ಓಡುತ್ತಿರುವ ವೇಳೆಯಲ್ಲಿ ನಿನಗೆ ನಿಶ್ಯಕ್ತಿಯಿಂದ ಮತ್ತೆ ಜ್ಞಾನವು ವಿಲೋಪಿಸುವುದಾದರೆ ತುಂಬಾ ಕಷ್ಟಕ್ಕೆ ಈಡಾಗಬೇಕಾದೀತು. ನೀನು ಇನ್ನೂ ಹುಡುಗಿ; ನಿನಗೆ ಹೇಳುವುದಕ್ಕೂ ಇಲ್ಲ, ಬಿಡುವುದಕ್ಕೂ ಇಲ್ಲ.

ಹೊರಡಲೇ ಬೇಕೆಂದು ಹಠ ಹಿಡಿದ ಕುಂದನಂದಿನಿಯು ಮತ್ತಾವ ಮಾತಿಗೂ ಕಿವಿಗೊಡಲೇ ಇಲ್ಲ. ಪರಂತಪನು ಯತ್ನವಿಲ್ಲದೆಯೇ ಹುಡುಗಿಯನ್ನು ಕುದುರೆಯ ಮೇಲೆ ಏರಿಸಿ ಆಕೆಯ ಹಿಂಗಡೆಯಲ್ಲಿ ತಾನೂ ಕುಳಿತುಕೊಂಡು ಕುದುರೆಯನ್ನು ಓಡಿಸುವುದರಲ್ಲಿದ್ದನು. ಆಗ ಪರಂತಪನು ಒಂದು ತಡವೆ ಹಿಂದಿರುಗಿ ನೋಡುವಲ್ಲಿ, ಕಳ್ಳನೊಬ್ಬನಿಗೆ ಜ್ಞಾನೋದಯವಾಗುವುದರಲ್ಲಿದ್ದಿತು. ಇದನ್ನು ನೋಡಿ ಪರಂತಪನಿಗೆ ಭಯವಾಯಿತು, ಆದರೂ ಆತನು ಎದೆಗೆಡದೆ ಕಳ್ಳರನ್ನು ನೋಡಿ—ಹೇಡಿಗಳಿರಾ! ನೀವು ತಪ್ಪಿಸಿಕೊಂಡು ಹೋಗುವುದಕ್ಕೆ ಯತ್ನಮಾಡುವುದಾದರೆ, ನಿಮ್ಮನ್ನು ಈ ಗ್ರಾಮದೇವತೆಗೆ ಬಲಿಕೊಟ್ಟುಬಿಡುವೆನು, ಎಚ್ಚರಿಕೆ! ಎಂದು ಹೆದರಿಸಿ ಬೆದರಿಸಿ ಮುಂದಕ್ಕೆ ತೆರಳಿದನು.

ಪರಂತಪನು ಕುದುರೆಯನ್ನೇರಿ ಹೊರಟ ಕೊಂಚಕಾಲದೊಳಗಾಗಿಯೇ ಕುಂದನಂದಿನಿಗೆ ಜ್ಞಾನತಪ್ಪಿತು. ಪರಂತಪನು ಬಂದುದೆಲ್ಲಾ ಬರಲೆಂದು ಹುಡುಗಿಯನ್ನು ತನ್ನ ಎಡದ ಕೈಯಿಂದ ಬಲವಾಗಿ ಹಿಡಿದುಕೊಂಡು ಬಲದ ಕೈಯಿಂದಲೇ ಕುದುರೆಯನ್ನು ಓಡಿಸಿಕೊಂಡು ಅಂಬಿನ ವೇಗದಿಂದ ತೆರಳಿದನು.

---

## ಮೂರನೆಯ ಸಂಧಿ

### ಹೈಮವತೀ

ಪರಂತಪನು ಹೊರಟು ಹೋದ ನಾಲ್ಕಾರು ನಿಮಿಷಗಳಾದ ಮೇಲೆ ಭೂತನಾಥನು ಕರ್ಣಕಠೋರವಾಗಿರೋಣ ಹೇಗೋ ಹಾಗೆ ಚೀತ್ಕಾರ ಧ್ವನಿಯನ್ನು ಮಾಡಿದನು. ಈ ಧ್ವನಿಯನ್ನು ಕೇಳಿದ ಪ್ರಾಣಿಗಳೆಲ್ಲವೂ ಒಂದು ಕ್ಷಣಕಾಲ ದಿಕ್ಕು ತೋರದವುಗಳಾಗಿ ಸುಮ್ಮನೆ ನಿಂತುಬಿಟ್ಟುವು. ಪರಂತಪನೂ ಈ ವಿಕಟ ಸ್ವರವನ್ನು ಕೇಳಿ ದಿಗಿಲಿನಿಂದ ಒಂದು ಕ್ಷಣಕಾಲದವರೆಗೂ ತಬ್ಬಿಬ್ಬಾಗಿಬಿಟ್ಟನು.

ಆ ರಾತ್ರಿಯಲ್ಲಿ, ಅದರಲ್ಲಿಯೂ ನಿರ್ಜನವಾದ ಪ್ರದೇಶದಲ್ಲಿ ಭೂತನಾಥನ ಚೀತ್ಕಾರ ಧ್ವನಿಯು ಪ್ರಕೃತಿಯ ಶಾಂತತೆಯನ್ನು ಭೇದಿಸಿಕೊಂಡು ಗಗನಮಂಡಲವನ್ನಡರಿತು. ಧ್ವನಿಯು ಬೇಗನೆ ಹೋಗಿ ಕರೆದುಕೊಂಡು ಬಂದಿತೋ ಎಂಬಂತೆ, ಸರ್ವಾಂಗ ಸುಂದರಿಯಾದ ಒಬ್ಬ ತರುಣೀಮಣಿಯು ಆ ಕಳ್ಳರಿದ್ದ ಸ್ಥಲಕ್ಕೆ ತಟ್ಟನೆ ಬಂದು ಸೇರಿದಳು. ಆಕೆಯು ಆವ ದಾರಿಯಿಂದ ಹೇಗೆ ಬಂದಳೆಂಬುದು ಆರಿಗೂ ಗೋಚರವಾಗಲಿಲ್ಲ. ಆ ಸುಂದರಿಯನ್ನು ನೋಡಿದ ಕೂಡಲೇ, ಭೂತನಾಥನು ಮುಗುಳು ನಗೆಯನ್ನು ನಕ್ಕು—ಹೈಮವತಿ! ಏನ ನೋಡುವೆ? ನಿನ್ನ ಬಳಿಯಲ್ಲಿ ಚೂರಿಯಿರುವುದಲ್ಲವೇ? ಎಂದು ದಡಬಡನೆ ಮಾತನಾಡಿದನು.

ಬಾಲಿಕೆಯು ನಗುತ್ತಾ—ನನ್ನಲ್ಲಿ ಚೂರಿಯಿರುವುದು. ಅದರಿಂದ ನಿಮ್ಮ ಬಂಧನವನ್ನು ಕತ್ತರಿಸಿ ಬೀಸಾಡುವೆನು. ನಿಮಗೆ ಈ ದುರವಸ್ಥೆಯು ಆರಿಂದ ಹೇಗೆ ಉಂಟಾದುದು? ಎಂದು ಮೃದುವಾಗಿ ಮಾತನಾಡಿದಳು.

ಆ ಮಾತಿಗೆ ಪ್ರತ್ಯುತ್ತರವಾಗಿ ಭೂತನಾಥನು—ನಮಗೆ ಜ್ಞಾನವು ಶೂನ್ಯ ವಾಗಿರುವುದು. ತಡಮಾಡದೆ ನಮ್ಮನ್ನು ಈ ಬಂಧನದಿಂದ ಪಾರಗಾಣಿಸು. ಕಾಲಹರಣಕ್ಕೆ ಇದು ಸಮಯವಲ್ಲ, ಎಂದನು.

ಬಾಲಿಕೆಯು ಭೂತನಾಥನ ಬಂಧನವನ್ನು ಕತ್ತರಿಸಿಹಾಕಿದಳು. ಬಳಿಕ ಭೂತನಾಥನು ಆ ಚೂರಿಯನ್ನು ತಾನು ತೆಗೆದುಕೊಂಡು ವೀರಭದ್ರನ ಹಾಗೂ ಕಾಲರುದ್ರನ ಬಂಧನಗಳನ್ನು ತುಂಡುತುಂಡು ಮಾಡಿ, ಅವರಿಗೆ ಎಚ್ಚರಿಕೆ ಯಾಗುವುದಕ್ಕೆ ಏನೇನ ಮಾಡಬೇಕೋ ಅದೆಲ್ಲವನ್ನೂ ಕ್ಷಣಕಾಲದಲ್ಲಿಯೇ ನೆರ ವೇರಿಸಿದನು.

ಪ್ರಾಯಿಕವಾಗಿ ಅರ್ಧಘಂಟೆಯಾಗುವುದರೊಳಗಾಗಿ ಅವರಿಬ್ಬರಿಗೂ ಎಚ್ಚ ರಿಕೆಯಾಯಿತು. ಆದರೂ ಅವರಿಬ್ಬರೂ ಪರಂತಪನ ಮರ್ಮಾಘಾತದಿಂದ ಸೊಕ್ಕಿ ಸೊರಗಿ ಹೋಗಿದ್ದರು. ಅಲ್ಲಿಯೇ ಕಾಲಹರಣ ಮಾಡುವುದರಿಂದ ಪ್ರಾಣಕ್ಕೆ ಅಪಾಯವುಂಟೆಂದು ತಿಳಿದು ಭೂತನಾಥನು ತನ್ನ ಮಿತ್ರರಿಬ್ಬರನ್ನೂ ತನ್ನ ಹೆಗಲಿನ ಮೇಲೆ ಒರಗಿಸಿಕೊಂಡು ಹೊರಡುವುದಕ್ಕೆ ಸಿದ್ಧನಾಗಿ ಹೈಮವತಿ ಯನ್ನು ಕುರಿತು—ಹೈಮ! ನಾವು ತೆರಳುವೆವು. ನೀನು ಆ ಹೆಂಗುಸರ ಮೈ ಮೇಲಿರುವ ಆಭರಣಗಳೆಲ್ಲವನ್ನೂ ಸುಲಿದುಕೊಂಡು ಸಾಧ್ಯವಾದಷ್ಟು ಬೇಗನೆ ಹೊರಟು ಬಂದುಬಿಡು, ಎಂದು ಹೇಳುತ್ತಾ ಅಲ್ಲಿ ನಿಲ್ಲದೆ ಹೊರಟೇ ಹೋದನು.

ಕಳ್ಳರು ಹೊರಟುಹೋದ ಮೇಲೆ, ಹೈಮವತಿಯು ಆ ಹೆಂಗುಸರ ಬಳಿಗೆ ಬಂದು ಪರೀಕ್ಷಿಸಿ ನೋಡಿದಳು. ಅವರಿಬ್ಬರಲ್ಲಿ ಒಬ್ಬಾಕೆಯು ಪ್ರಾಣವನ್ನು ಬಿಟ್ಟಿದ್ದಳು, ಮತ್ತೊಬ್ಬಳು ಮೂರ್ಛೆಗೊಂಡಿದ್ದಳು. ಕಾಲರುದ್ರನೇ ಈ ಹೆಂಗುಸನ್ನು ಕೊಂದುಹಾಕಿರಬೇಕೆಂದು ಹೈಮವತಿಯು ನಿಶ್ಚಯಿಸಿಕೊಂಡಳು. ಕಾಲರುದ್ರನ ಬಲಪರಾಕ್ರಮಗಳೆಲ್ಲವೂ ಹೆಂಗುಸರನ್ನು ಕೊಲ್ಲುವುದರಲ್ಲಿ ಉಪ ಯೋಗಿಸಲ್ಪಟ್ಟಿದಕ್ಕಾಗಿ ಹೈಮವತಿಯು ಆತನ ವಿಷಯದಲ್ಲಿ ಅತಿಯಾಗಿ ಕತಿಗೊಂಡಳು.

ಹೈಮವತಿಯು ಆ ಹೆಂಗುಸರ ಬಳಿಯಲ್ಲಿ ನಿಂತುಕೊಂಡು ಆಲೋಚಿಸಿದ ಬಗೆಯೇನೆಂದರೆ :—

"ಈ ಕೊಲೆಯು ಪತ್ತೆಯಾಗದೇ ಹೋಗುವುದಿಲ್ಲ. ನಾನು ಇವರ ಆಭರಣಗಳನ್ನು ತೆಗೆದುಕೊಂಡು ಹೋಗುವುದಾದರೆ, ಎಂದಾದರೊಂದು ದಿನ ನಾನು ಸಿಕ್ಕಿಕೊಂಡು ಕೊಲೆಮಾಡಿದ ಅಪರಾಧಕ್ಕಾಗಲಿ, ಕೊಲೆಮಾಡಿದವರಿಗೆ ಸಾಹಾಯ್ಯಮಾಡಿದ ಅಪರಾಧಕ್ಕಾಗಲಿ ಗುರಿಯಾಗಲೇ ಬೇಕಾದೀತು. ಇದರಿಂದ ನನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. ಒಡವೆಗಳನ್ನು ಕಸಿದುಕೊಳ್ಳಬೇಕೆಂದು ಭೂತನಾಥನು ಹೇಳಿ ಹೊರಟುಹೋದನು. ಅವನು ಗಂಡಸಾದುದರಿಂದ ಹೇಗಾದರೂ ತಪ್ಪಿಸಿಕೊಳ್ಳಬಹುದು. ಹೆಂಗುಸಾದ ನನ್ನ ಪಾಡೇನಾಗಬೇಕು? ನನಗೂ ಆತ್ಮರಕ್ಷಣೆಯೆಂಬುದು ಮುಖ್ಯಕರ್ತವ್ಯವಲ್ಲವೇ? ಹೇಳುವವರು ಬೇಕಾದ ಹಾಗೆ ಹೇಳಬಹುದು; ಮಾಡುವವರಿಗಲ್ಲವೇ ಕಷ್ಟವು ಗೊತ್ತಾಗುವುದು. ನಾನು ಎಂದಿಗೂ ಈ ಆಭರಣಗಳನ್ನು ಮುಟ್ಟುವುದಿಲ್ಲ."

ಹೈಮವತಿಯು ಹೀಗೆಲ್ಲಾ ಆಲೋಚಿಸಿ ಆ ಹೆಂಗುಸರ ಗೋಜಿಗೇ ಹೋಗದೆ, ತಡಮಾಡುವುದಾದರೆ ತನಗೂ ಅಪಾಯವುಂಟೆಂದು ತಿಳಿದು ಆಕೆಯು ಹೊರಟುಹೋದಳು.

---

## ನಾಲ್ಕನೆಯ ಸಂಧಿ

### ಪಲಾಯನ

ಪರಂತಪನು ಮೂರ್ಛೆಗೊಂಡ ಕುಂದನಂದಿನಿಯ ದೇಹವನ್ನು ಹಿಡಿದುಕೊಂಡು ಅತಿ ಪ್ರಯಾಸದಿಂದ ಐದು ಮೈಲಿಗಳ ದಾರಿಯನ್ನು ದಾಟಿ ಬಂದನು. ಅಷ್ಟು ಹೊತ್ತಿಗೆ ಆತನಿಗೂ ಬಲು ಬಳಲಿಕೆಯಾಗಿದ್ದುದರಿಂದ, ಆತನು ತನ್ನ ಕುದುರೆಯ ವೇಗವನ್ನು ಕಡಮೆಮಾಡಿ ಮೆಲ್ಲ ಮೆಲ್ಲನೆ ಮುಂದಕ್ಕೆ ತೆರಳಿದನು.

ಈರೀತಿಯಲ್ಲಿಯೂ ಮತ್ತೊಂದು ಮೈಲಿಯಷ್ಟು ದೂರದ ದಾರಿಯನ್ನು ದಾಟಿ ಒಂದು ಪೋಲೀಸು ಠಾಣ್ಯವನ್ನು ತಲಪಿದನು. ಅಲ್ಲಿ ಕುಂದನಂದಿನಿಯನ್ನು ಮಲಗಿಸಿ ಆಕೆಯ ಶಿಶ್ರೂಷೆಗಾಗಿ ಜನರನ್ನು ನಿಯಮಿಸಿದ ಬಳಿಕ, ಪರಂತಪನು ಠಾಣ್ಯದ ಅಧಿಕಾರಿಗೆ ನಡೆದ ವಿದ್ಯಮಾನವೆಲ್ಲವನ್ನೂ ಮೊದಲಿನಿಂದ ಕೊನೆಯ ವರೆಗೂ ತಿಳಿಸಿದನು.

ಠಾಣ್ಯದ ಅಧಿಕಾರಿಯು ಪರಂತಪನ ಬಾಯಿಂದ ನಡೆದ ಸಂಗತಿಗಳೆಲ್ಲವನ್ನೂ ಕೇಳಿದ ಬಳಿಕ, ಎರಡು ಗಾಡಿಗಳನ್ನೂ ಹತ್ತಾರು ಪೋಲೀಸಿನವರನ್ನೂ ಜತೆಯಲ್ಲಿಯೇ ಕರೆದುಕೊಂಡು ಪರಂತಪನನ್ನು ಹಿಂಬಾಲಿಸಿ ಕೃತ್ಯ ನಡೆದ

ಸ್ಥಳಕ್ಕೆ ಹೊರಟನು. ಕುಂದನಂದಿನಿಯನ್ನು ರಕ್ಷಿಸಿಕೊಂಡಿರುವುದಕ್ಕಾಗಿ ಇಬ್ಬರು ದಾದಿಯರು ನಿಯಮಿಸಲ್ಪಟ್ಟರು.

ಠಾಣ್ಯದ ಅಧಿಕಾರಿಗೂ ಪರಂತಪನಿಗೂ ಮೊದಲಿನಿಂದಲೂ ಪರಿಚಯ ವಿದ್ದಿತು. ಅಧಿಕಾರಿಗೆ ಆಗಿಂದಾಗ ತನ್ನ ಕೆಲಸದಲ್ಲಿ ಪರಂತಪನ ಒತ್ತಾಸೆಯು ಅವಶ್ಯವಾಗಿಯೂ ಬೇಕಾಗಿರುತ್ತಿದ್ದಿತು. ದಾರಿಯಲ್ಲಿ ಹೋಗುತ್ತಿರುವಾಗ ಅಧಿಕಾರಿಯು ಪರಂತಪನನ್ನು ಕುರಿತು—ಮಿತ್ರನೇ! ಎಷ್ಟು ಮಂದಿ ಕೊಲೆ ಯಾಗಿರುವರು? ಎಂದು ಪ್ರಶ್ನೆಮಾಡಿದನು.

ಪರಂ—ಒಬ್ಬಾಕೆಯು ಕೊಲ್ಲಲ್ಪಟ್ಟಿರುವಳು; ಮತ್ತೊಬ್ಬಾಕೆಯು ಜ್ಞಾನತಪ್ಪಿ ಬಿದ್ದಿರುವಳು.

ಅಧಿಕಾರಿ—ಕಳ್ಳರು ಎಷ್ಟು ಮಂದಿ?

ಪರಂ—ಮೂರು ಮಂದಿ.

ಅಧಿ—ಅವರಲ್ಲ ಎಷ್ಟು ಮಂದಿ ಸಿಕ್ಕಿರುವರು?

ಪರಂ—ಮೂವರೂ ಸಿಕ್ಕಿಬಿದ್ದಿರುವರು.

ಅಧಿ—ಮಿತ್ರನೇ! ನೀನೊಬ್ಬನೇ ಮೂವರನ್ನೂ ನಿರ್ಬಂಧಿಸಿದ ಬಗೆ ಹೇಗೆ?

ಪರಂ—ಮಹಾಶಯ! ನೀವೂ ಅನುಭವಶಾಲಿಗಳಾದ ಪತ್ತೇದಾರರೇ ಆಗಿರುವಿರಿ. ಹುಬ್ಬುಗಳ ನಡುವೆ ಒಂದು ನರವಿರುವುದು. ಅದಕ್ಕೆ ಒಂದು ಪೆಟ್ಟು ಕೊಟ್ಟೊಡನೆಯೇ ಮಾನವನು ಬಸವಳಿದು ಬಿದ್ದುಬಿಡುವನು. ನಾನು ಈ ಉಪಾಯದಿಂದಲೂ, ಇತರ ಉಪಾಯಗಳಿಂದಲೂ ಮೂವರನ್ನೂ ಸೋಲಿಸಿ ಕುದುರೆಯ ಹಗ್ಗದಿಂದ ಅವರನ್ನು ಸಮೀಪದ ಮರಕ್ಕೆ ಬಿಗಿದು ಬಂದಿರುವೆನು.

ಈರೀತಿಯಾಗಿ ಮಾತುಕತೆಗಳನ್ನಾಡುತ್ತಾ ಎಲ್ಲರೂ ರಾತ್ರಿಯ ಹತ್ತು ಗಂಟೆಯ ಹೊತ್ತಿಗೆ ಕೃತ್ಯ ನಡೆದ ಸ್ಥಳಕ್ಕೆ ಬಂದು ಸೇರಿದರು. ಅಲ್ಲಿಗೆ ಬಂದ ಕೂಡಲೆ, ಪರಂತಪನು ನೆಲದ ಮೇಲೆ ಬಿದ್ದಿದ್ದ ಹೆಂಗುಸರಿಬ್ಬರನ್ನೂ ಅಧಿಕಾರಿಗೆ ತೋರಿದನು. ಬಳಿಕ ಅಧಿಕಾರಿಯು ಪರಂತಪನ ಕಡೆಗೆ ತಿರುಗಿ—ಕಳ್ಳರೆಲ್ಲಿ? ಎಂದನು.

ಪರಂತಪನು ತಾನು ಕಳ್ಳರನ್ನು ಮರಕ್ಕೆ ಕಟ್ಟಿಹಾಕಿದ್ದ ಸ್ಥಳಕ್ಕೆ ಅಧಿಕಾರಿಯನ್ನು ಕರೆದುಕೊಂಡು ಹೋಗಿ ನೋಡಲಾಗಿ ಅಲ್ಲಿ ಕಳ್ಳರಾರೂ ಇರಲಿಲ್ಲ. ಆದರೆ ಅವರಿದ್ದ ಸ್ಥಾನದಲ್ಲಿ ತುಂಡುತುಂಡಾಗಿ ಕತ್ತರಿಸಲ್ಪಟ್ಟಿದ್ದ ಹಗ್ಗವು ಮಟ್ಟಿಗೆ ಬಿದ್ದಿದ್ದಿತು. ಇದನ್ನು ನೋಡಿದ ಕೂಡಲೆ ಪರಂತಪನ ಮುಖವು ಕಂಗೆಟ್ಟಿತು. ಆತನು ನಾಚುಗೆಯಿಂದ ತಲೆವಾಗಿದವನಾಗಿ—ಮಹಾಶಯ! ನನ್ನ ಪ್ರಯಾಸವೆಲ್ಲವೂ ನಿಷ್ಫಲವಾದುದು. ಕಳ್ಳರೆಲ್ಲರೂ ಪಲಾಯನವಾಗಿರುವರು. ಅವರು ಆವ ರೀತಿಯಲ್ಲಿ ಪಲಾಯನವಾದರೋ ಅದು ಮಟ್ಟಿಗೆ ಗೊತ್ತಾಗಲೊಲ್ಲದು. ನಾನು ಕಟ್ಟಿದ್ದ ಬಂಧನವು ಇತರರಾರಾದರೂ ಬಂದು ಬಿಚ್ಚಿದ ಹೊರತು ಕಳ್ಳರಿಗೆಂದಿಗೂ ಬಿಚ್ಚುವುದಕ್ಕೆ ಸಾಧ್ಯವಾಗುವ ಹಾಗಿರಲಿಲ್ಲ. ಇದರಲ್ಲಿ ಆಚಾತುರ್ಯವೇನೋ ನಡೆದಿರಬೇಕು, ಎಂದು ಕುಗ್ಗಿದ ಸ್ವರದಿಂದ ಮಾತನಾಡಿದನು.

ಅಧಿಕಾರಿಯು ಇದೆಲ್ಲವನ್ನೂ ಸಾವಧಾನದಿಂದ ಕೇಳಿದನು. ಕೇಳಿದ ಕೂಡಲೆ ಅವನ ನಗೆಯು ಒಳಗೆ ಅಡಗಿರಲಾರದೆ ಫಕ್ಕನೆ ಹೊರಗೆ ಬಂದುಬಿಟ್ಟಿತು. ಅನೇಕ ವೇಳೆ ಅಧಿಕಾರಿಯು ಪರಂತಪನಿಂದ ಮಿತಿಮೀರಿದ ಉಪಕಾರವನ್ನು ಪಡೆದಿದ್ದರೂ ಈ ಸಂದರ್ಭದಲ್ಲ ಅದೆಲ್ಲವೂ ಮರೆತುಹೋಗಿ ಪರಿಹಾಸದಲ್ಲಿ ಪರ್ಯವಸಾನವನ್ನಡರಿತು. ಕೊಂಚ ಹೊತ್ತಿನ ಮೇಲೆ ಅಧಿಕಾರಿಯು ಹಾಸ್ಯರಸವನ್ನವಲಂಬಿಸಿ—ಪರಂತಪ! ಕಳ್ಳರು ನಿನ್ನನ್ನು ಹಿಡಿದು ಕೊಡುವುದಕ್ಕಾಗಿ ಇಷ್ಟು ಹೊತ್ತಿಗೆ ಪೋಲೀಸು ಠಾಣೆಗೆ ಹೋಗಿರಬಹುದೆಂದು ತೋರುವುದು, ಎಂದುಸುರಿದನು.

ಅಧಿಕಾರಿಯು ತನ್ನನ್ನು ಪರಿಹಾಸಮಾಡುವನೆಂದು ಪರಂತಪನು ಚೆನ್ನಾಗಿಯೂ ಅರಿತುಕೊಂಡವನಾಗಿ ನಾಚುಗೆಯಿಂದ ತಲೆಯನ್ನು ತಗ್ಗಿಸಿಕೊಂಡು—ಮಹಾಶಯ! ಹಾಗೆಯೇ ಊಹಿಸಬೇಕಾಗಿರುವುದು. ಮಾಡಿದ ಕೆಲಸವು ಕೆಟ್ಟಿತೆಂದರೆ, ಸಂಶಯವು ತೆರತೆರನಾಗಿ ಹೊರಬೀಳುವುದು. ಅದಂತಿರಲಿ. ಈಗ ಹೆಂಗುಸರ ಗತಿಯು ಏನಾಗಿರುವುದೆಂಬುದನ್ನು ಮೊದಲು ಅರಿತುಕೊಳ್ಳತಕ್ಕುದಾಗಿದೆ, ಎಂದು ನುಡಿದನು.

ಅಧಿಕಾರಿಯು ವೈದ್ಯಶಾಸ್ತ್ರವನ್ನೂ ಕೊಂಚ ಮಟ್ಟಿಗೆ ಬಲ್ಲವನಾಗಿದ್ದುದರಿಂದ, ಹೆಂಗುಸರನ್ನು ಪರೀಕ್ಷಿಸುವುದಕ್ಕೆ ತೊಡಗಿದನು. ಹೆಂಗುಸರಿಬ್ಬರಲ್ಲಿ ದೊಡ್ಡವಳು ಪ್ರಾಣವನ್ನು ತ್ಯಾಗಮಾಡಿದ್ದಳು ; ಮತ್ತೊಬ್ಬಳು ಜ್ಞಾನವಿಲ್ಲದವಳಾಗಿ ಬಿದ್ದಿದ್ದಳು. ಅಧಿಕಾರಿಯು ತಡಮಾಡದೆ ಇವರಿಬ್ಬರನ್ನೂ ಎರಡು ಗಾಡಿಗಳ

ಮೇಲೆ ಹಾಕಿಕೊಂಡು ಬಂದ ದಾರಿವಿಡಿದು ತನ್ನ ಠಾಣೆಯ ಕಡೆಗೆ ತೆರಳಿದನು. ಪರಂತಪನೂ ದಿಕ್ಕು ತೋರದವನಾಗಿ ಅವನ ಹಿಂದೆ ಹಿಂದೆಯೇ ಹೊರಟನು.

ಕೊಂಚ ಹೊತ್ತಿನೊಳಗಾಗಿ ಈ ಸುದ್ದಿಯು ಕಮಲಾಕಾಂತ ಚಕ್ರವರ್ತಿಯ ಕಿವಿಗೆ ಬಿದ್ದಿತು. ಆತನು ತನ್ನ ಹೆಂಡಿತಿಯ ಮರಣಕ್ಕಾಗಿ ಅತಿಯಾಗಿ ಸಂಕಟ ಪಟ್ಟವನಾಗಿ ಠಾಣೆಗೆ ಬಂದು ಹೆಂಗುಸರಿಬ್ಬರನ್ನೂ ತನ್ನ ಮನೆಗೆ ಸಾಗಿಸಿಕೊಂಡು ಹೋದನು. ಕುಂದನಂದಿನಿಯೂ ಆತನೊಡನೆಯೇ ಹೊರಟು ಹೋದಳೆಂದು ಇಲ್ಲಿ ತಿಳಿಸಬೇಕಾದುದೇನೂ ಇಲ್ಲ.

ಕಮಲಾಕಾಂತನ ಹೆಂಡಿತಿಗೆ ನಡೆಯ ಬೇಕಾದ ಉತ್ತರ ಕ್ರಿಯಾದಿಗಳೆಲ್ಲವೂ ಯಥಾರೀತಿಯಾಗಿ ನಡೆದೇ ಹೋದುವು. ಮದಯಂತಿ ಎಂಬ ಮತ್ತೊಬ್ಬ ಯುವ ತಿಗೆ ವೈದ್ಯರಿಂದ ಶೈತ್ಯೋಪಚಾರಗಳು ಎಡೆಬಿಡದೆ ನಡೆಯಲಾರಂಭವಾದುವು. ನಾಲ್ಕಾರು ದಿನಗಳೊಳಗಾಗಿ ಮದಯಂತಿಯು ಆರೋಗ್ಯವನ್ನು ಪಡೆದು ಕೊಂಡಳು.

ಕಮಲಾಕಾಂತನ ಮನೆಯಲ್ಲಿ ಎಲ್ಲ ನೋಡಿದರೂ ರೋದನ ಧ್ವನಿಯು ತಾನೇ ತಾನಾಗಿ ಏಕಾಧಿಪತ್ಯ ಮಾಡತೊಡಗಿತು. ಕುಂದನಂದಿನಿಯು ಕಣ್ಣೀರಿ ನಿಂದ ತನ್ನ ಕೈಗಳನ್ನೇ ತೊಳೆಯುತ್ತಿದ್ದಳು. ದಾಸದಾಸಿಯರ ವ್ಯಸನವಂತೂ ಹೇಳಲೇ ಕೆಲಸವಿಲ್ಲ. ಕಮಲಾಕಾಂತನು ತನ್ನ ಅಪರವಯಸ್ಸಿನಲ್ಲಿ ಹೆಂಡಿತಿಯು ಕೈತಪ್ಪಿ ಹೋದುದಕ್ಕಾಗಿ ಬಹಳವಾಗಿ ಪೇಚಾಡಿ ಹೋದನು. ಈ ರೀತಿಯಾಗಿ ಮನೆಯಲ್ಲಿ ಎಲ್ಲರೂ ಸಂಕಟಪಡುತ್ತಿರುವುದಾದರೂ, ಮದಯಂತಿ ಮಟ್ಟಿಗೆ ಕೊಂಚ ವಾದರೂ ವ್ಯಸನಪಡಲಿಲ್ಲ. ಆಕೆಯು ಒಳಗಣ ಸಂತೋಷದಿಂದ ದಿನದಿನಕ್ಕೆ ಮೆಯ್ಯುಬ್ಬುತ್ತಾ ಬಂದಳು. ವಿಚಿತ್ರ ಪ್ರಪಂಚದ ಪರಿಪಾಟಿಯನ್ನು ಬಲ್ಲವರೇ ಬಲ್ಲರು.

ದಿನಗಳು ಆರನ್ನೂ ಲೆಕ್ಕಿಸದೆಯೇ ಒಂದರ ಮೇಲೊಂದು ಕಳೆದು ಹೋ ದುವು. ಮನೆಯಲ್ಲಿ ಜನರ ನಿರುತ್ಸಾಹವು ದಿನದಿನಕ್ಕೆ ಕಡಮೆಯಾಗುತ್ತಾ ಬಂದಿತು. ಲೋಕದಲ್ಲಿ ಆವುದೂ ಸ್ಥಿರವಲ್ಲವೆಂಬುದು ಇದರಿಂದ ಊಹಿಸಬಹುದಾಗಿದೆ.

ಕಮಲಾಕಾಂತನು ಅತ್ಯಾಚಾರಿಗಳಿಗೆ ತಕ್ಕ ದಂಡನೆಯಾಗದಿದ್ದರೆ, ದುಷ್ಟರ ಹಾವಳಿಯು ಮೇರೆದಪ್ಪುವುದೆಂದು ತಿಳಿದು ಕಳ್ಳರನ್ನು ಕಂಡುಹಿಡಿದು ಶಿಕ್ಷಿಸು ವುದಕ್ಕೆ ಸರಿಯಾದ ಜನರನ್ನು ನಿಯಮಿಸಿದನು. ಪರಂತಪನು ಮಾಡಿದ ಉಪ ಕಾರಕ್ಕೆ ಸರಿಯಾದ ಪುರಸ್ಕಾರವೂ ದೊರೆಯಿತು. ಪರಂತಪನು ಕುಂದನಂದಿನಿಯ ಯೋಗಕ್ಷೇಮವನ್ನು ವಿಚಾರಿಸುವುದಕ್ಕಾಗಿ ಆಗಿಂದಾಗ ಕಮಲಾಕಾಂತನ ಮನೆಗೆ

ಹೋಗಿಬರುವುದಕ್ಕೆ ಪ್ರಾರಂಭಮಾಡಿದನು. ಇದರಿಂದ ಕಮಲಾಕಾಂತನ ಮನೆಯವರೊಡನೆ ಪರಂತಪನ ಸ್ನೇಹವು ಬಳೆಯಲಾರಂಭಿಸಿತು.

ಕಳ್ಳರನ್ನು ಪತ್ತೆಮಾಡುವುದರಿಂದ ಹೆಚ್ಚಿನ ಪುರಸ್ಕಾರವೇ ದೊರೆವುದೆಂದು ಭಾವಿಸಿ, ಪೋಲೀಸಿನವರು ದುಷ್ಟರ ಅನುಸಂಧಾನದಲ್ಲಿ ತೊಡಗಿದರು ; ಆದರೆ ಕಾಲವನ್ನು ಕಂಡ ಕಳ್ಳರು ಅವರ ಕೈಗೆ ಸುಲಭವಾಗಿ ಸಿಕ್ಕತಕ್ಕವರಾಗಿರಲಿಲ್ಲ.

---

## ಐದನೆಯ ಸಂಧಿ

### ಮದಯಂತಿ

ಕಳ್ಳರ ಕೈಗೆ ಸಿಕ್ಕಿ ಬಹುಕಾಲ ಜ್ಞಾನವಿಲ್ಲದವಳಾಗಿ ಬಿದ್ದಿದ್ದ ಮದಯಂತಿ ಎಂಬ ಯುವತಿಯು ಕಮಲಾಕಾಂತನ ಹೆಂಡಿತಿಗೆ ದೂರದ ಸಂಬಂಧಿನಿಯು. ಮದಯಂತಿಯು ಇಪ್ಪತ್ತೆರಡು ವಯಸ್ಸಿನ ಯುವತಿಯಾಗಿದ್ದಳು. ಆಕೆಯ ದೇಹವು ಬಂಗಾರದ ವರ್ಣವುಳ್ಳದಾಗಿದ್ದು ನೋಡುವುದಕ್ಕೆ ಬಲು ಸುಂದರ ವಾಗಿದ್ದಿತು. ಆಕೆಯ ನಗೆಮೊಗದಲ್ಲಿನ ಮೃದುಮಧುರವಾದ ಮಂದಹಾಸವೂ, ಚಂಚಲವಾದ ಕಡೆಗಣ್ಣ ನೋಟವೂ ಎಂಥವರನ್ನಾದರೂ ಎದೆಗೆಡಿಸಿ ಅಕ್ರೀತ ದಾಸರನ್ನಾಗಿ ಮಾಡಿಬಿಡುತಿದ್ದುವು. ಈಕೆಯ ಹಾವಭಾವಗಳಿಗೆ ಬೆರಗಾಗದವನು ಮಣ್ಣ ಬೊಂಬೆಯಾಗಿರಬೇಕು - ಇಲ್ಲವೇ, ಜಗದೀಶ್ವರನೇ ಆಗಿರಬೇಕು. ಹೀಗಿರುವಲ್ಲ ಇತರರ ಪಾಡೇನು ?

ಇಂತಹ ಮದಯಂತಿಯು ತನ್ನ ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾಗಿ ಬಿಟ್ಟಿದ್ದಳು. ಆಕೆಯ ಗಂಡನ ಆಸ್ತಿಪಾಸ್ತಿಗಳೆಲ್ಲವೂ ಕೊಂಚ ಕಾಲದೊಳಗಾ ಗಿಯೇ ವೆಚ್ಚವಾಗಿ ಹೋದುವು. ಬಳಿಕ ಮದಯಂತಿಯು ತಿನ್ನುವುದಕ್ಕೆ ಮಾರ್ಗ ವಿಲ್ಲದೆ, ದಾರಿದ್ರ್ಯದ ದುಃಖಕ್ಕೆ ಪಕ್ಕಾದಳು. ಆಕೆಗೆ ಜೀವನಕ್ಕೆ ಮಾರ್ಗವಿರ ಲಿಲ್ಲವೇ ಹೊರತು, ಯೌವನಕ್ಕೂ ಸೌಂದರ್ಯಕ್ಕೂ ಅಭಾವವೇನೂ ಇರಲಿಲ್ಲ. ಆಕೆಯ ನೋಟದಲ್ಲಿ ಪುರುಷವಶೀಕಾರವಿದ್ಯೆಯು ಅಡಗಿದ್ದಿತು. ಈ ವಿದ್ಯೆಯು ಆಕೆಯಲ್ಲಿ ಸಂಪೂರ್ಣವಾಗಿದ್ದುದರಿಂದಲೇ, ಆಕೆಯು ಬಹುಕಾಲ ಅನ್ನಾಭಾವ ದಿಂದ ಕೊರಗಬೇಕಾದುದೇನೂ ಇರಲಿಲ್ಲ.

ಪಾಪಕಾರ್ಯವು ಆರಲ್ಲಿಯೂ ಚಿರಕಾಲ ಅಡಗಿರಲೊಲ್ಲದು. ಮದಯಂತಿಯ ಅಸದ್ವರ್ತನವು ಅಲ್ಲಲ್ಲಿ ಹರಡುತ್ತಾ ಬಂದು ಕೊನೆಗೆ ಕಮಲಾಕಾಂತನ ಹೆಂಡಿತಿಯ ಕಿವಿಯೊಳಗೂ ಪ್ರವೇಶಮಾಡಿತು. ಬಳಿಕ ಆಕೆಯು ದಯೆಯಿಂದ ಮರುಗಿದವ

ಳಾಗಿ, ಹೊಟ್ಟೆಗಿಲ್ಲದ ಮೇಲೆ ಆರಾದರೂ ದುರ್ಮಾರ್ಗದಲ್ಲಿ ಬೀಳುವುದು ಸಹಜವೇ ಆಗಿರುವುದೆಂದು ತತ್ತ್ವವನ್ನು ಅರಿತುಕೊಂಡು ತನ್ನ ಗಂಡನ ಅನುಮತಿಯಿಂದ ಮದಯಂತಿಯನ್ನು ತನ್ನ ಮನೆಯಲ್ಲಿ ಕರೆತಂದಿಟ್ಟುಕೊಂಡಳು. ಅಂದು ಮೊದಲು ಮದಯಂತಿಯು ಕಮಲಾಕಾಂತನ ಸಂಸಾರಕ್ಕೆ ಸೇರಿದವಳಾಗಿಯೇ ವಾಸಮಾಡಿಕೊಂಡಿರುತಿದ್ದಳು. ಸಮಯವೊದಗಿ ಬಂದಾಗಲೆಲ್ಲಾ ಮದಯಂತಿಯು ಕಮಲಾಕಾಂತನ ಮೇಲೆ ತನ್ನ ಸಮ್ಮೋಹನಾಸ್ತ್ರವನ್ನು ಬೀರದೇ ಇರುತ್ತಿರಲಿಲ್ಲ. ಕಮಲಾಕಾಂತನು ಈ ಸಮ್ಮೋಹನಾಸ್ತ್ರದ ಪ್ರಭಾವವನ್ನು ಅರಿತವನಾದರೂ ಹೆಂಡಿತಿಯ ಭಯದಿಂದ ಬಾಯಿ ಮುಚ್ಚಿಕೊಂಡು ಕಾಲವನ್ನು ಕಳೆಯುತ್ತಿದ್ದನು.

ಯಥಾಸಮಯದಲ್ಲಿ ಕಮಲಾಕಾಂತನ ಹೆಂಡಿತಿಯ ಉತ್ತರ ಕ್ರಿಯಾದಿಗಳೆಲ್ಲವೂ ಸಾಂಗವಾಗಿ ನೆರವೇರಿಹೋದುವು. ಮದಯಂತಿಯ ಮಾರ್ಗವು ನಿಷ್ಕಂಟಕವಾಗಿ, ಆಕೆಯ ರೊಟ್ಟಿಯು ಜಾರಿ ತುಪ್ಪದಲ್ಲಿ ಬಿದ್ದಂತಾದುದು. ಮನೆಯಲ್ಲಿ ತನಗಿದ್ದ ಪ್ರತಿಬಂಧಕ ಸಾಮಗ್ರಿಯು ಕಳೆದುಹೋದಮೇಲೆ, ಮದಯಂತಿಯು ತನ್ನ ಮನೋರಥವು ಸುಮುಖವಾಗಿ ಈಡೇರುವ ಬಗೆಗೆ ಕಾರ್ಯಸಾಧನೋಪಾಯಗಳನ್ನು ಹುಡುಕುವುದಕ್ಕೆ ಮೊದಲು ಮಾಡಿದಳು.

ಇದೇ ರೀತಿಯಲ್ಲಿಯೇ ಒಂದೆರಡು ತಿಂಗಳುಗಳ ಕಾಲವು ಕಳೆದು ಹೋದುದು. ಕಮಲಾಕಾಂತನ ಸಂಸಾರದಲ್ಲಿ ಮದಯಂತಿಯ ಅಧಿಕಾರವು ದಿನದಿನಕ್ಕೆ ಅಧಿಕವಾಗುತ್ತಾ ಬಂದಿತು. ಮೊದ ಮೊದಲು ಕುಂದನಂದಿನಿಯು ತಿನ್ನುವುದಕ್ಕೆ ಗತಿಯಿಲ್ಲದೆ ತನ್ನ ಮನೆಗೆ ಬಂದು ಸೇರಿಕೊಂಡಿದ್ದ ಮದಯಂತಿಯನ್ನು ಒಂದು ತೆರನಾಗಿ ಪ್ರೀತಿಸುತ್ತಿದ್ದಳು. ಕಾಲಕ್ರಮದಲ್ಲಿ ಮದಯಂತಿಯು ಮನೆಗೆ ಯಜಮಾನಿಯಾಗಿ ಅಧಿಕಾರದರ್ಪವನ್ನು ತೋರಿಸುವುದಕ್ಕೆ ಪ್ರಾರಂಭಮಾಡಿದಂದಿನಿಂದಲೂ, ಕುಂದನಂದಿನಿಗೆ ಆಕೆಯಲ್ಲಿ ಅಪರಾಗವೇರ್ಪಟ್ಟಿತು. ಇದಕ್ಕೆ ಕಾರಣವೇನಿರಬಹುದೆಂದು ಕುಂದನಂದಿನಿಯು ತತ್ತ್ವಾನ್ವೇಷಣದಲ್ಲಿ ತೊಡಗಿದಳು. ಅಲ್ಪಕಾಲದೊಳಗಾಗಿಯೇ ಮದಯಂತಿಯ ಮಾಯಾಜಾಲವು ಬಯಲಾಗುತ್ತಾ ಬಂದಿತು.

ಕಮಲಾಕಾಂತನ ಸಂಸಾರದಲ್ಲಿ ಮಾರಕುಮಾರನೆಂಬ ಮಗನ ಮಗನೂ, ನಂದಕುಮಾರನೆಂಬ ಮಗಳ ಮಗನೂ ಪೋಷಿಸಲ್ಪಡುತ್ತಿದ್ದರು. ಇವರಿಬ್ಬರೂ ಪ್ರಾಯಿಕವಾಗಿ ಸಮಾನ ವಯಸ್ಕರಾದ ಯುವಕರಾಗಿದ್ದರು. ಇವರಿಬ್ಬರಿಗೂ ತಂದೆತಾಯಿಗಳಿರಲಿಲ್ಲ. ಇವರಿಬ್ಬರೂ ಅವಿವಾಹಿತರು.

ಈ ಯುವಕರಿಬ್ಬರಲ್ಲಿ ಮಾರಕುಮಾರನೆಂಬುವನು ಕೆಟ್ಟ ನಡತೆಯುಳ್ಳವನಾಗಿದ್ದನು. ಇವನು ಆವಾಗಲೂ ಮದ್ಯಸೇವನೆಯ ದೋಷದಿಂದ ದೂಷಿತನಾಗಿರುತ್ತಿದ್ದನು. ಕಮಲಾಕಾಂತನು ತಬ್ಬಲಿ ಮಕ್ಕಳೆಂದು ಇಬ್ಬರಿಗೂ ತಿಂಗಳೊಂದಕ್ಕೆ ಐವತ್ತುರೂಪಾಯಿಗಳಂತೆ ವೆಚ್ಚಕ್ಕೆ ಕೊಡುತ್ತಿದ್ದನು. ಮಾರಕುಮಾರನು ತನ್ನ ಪಾಲಿನ ಐವತ್ತುರೂಪಾಯಿಗಳನ್ನೂ ಒಂದು ವಾರದೊಳಗಾಗಿ ಪಾನಕ್ಕೋಸ್ಕರ ವೆಚ್ಚಮಾಡಿ ಉಳಿದ ದಿನಗಳ ವೆಚ್ಚಕ್ಕಾಗಿ ಕಂಡಕಂಡವರಲ್ಲಿ ಸಾಲಮಾಡಿ ಕುಡಿದುಬಿಡುತ್ತಿದ್ದನು. ಕಮಲಾಕಾಂತನು ಮಾರಕುಮಾರನ ಅತ್ಯಾಚಾರವನ್ನು ನೋಡಿ ಸಹಿಸಲಾರದೆ, ತನ್ನ ಮುಮ್ಮಗನಿಗೆ ಅಡಿಗಡಿಗೂ ಬುದ್ಧಿಗಲಿಸುತ್ತಿದ್ದನು ; ಆದರೂ ಮಾರಕುಮಾರನು ತಾತನ ಮಾತಿಗೆ ಗಮನಕೊಡದೆ ತನಗೆ ತೋರಿಬಂದಂತೆಯೇ ನಡೆದುಕೊಳ್ಳುತ್ತಿದ್ದನು.

ನಂದಕುಮಾರನ ಸ್ವಭಾವವು ಇದಕ್ಕೆ ವಿಪರೀತವಾಗಿದ್ದಿತು. ನಂದಕುಮಾರನು ಆವಾಗಲೂ ತನ್ನ ತಾತನ ಮಾತಿಗೆ ಪ್ರತಿಯಾಗಿ ಹೇಳದೆ, ಆತನ ಇಷ್ಟದಂತೆಯೇ ಇರುತ್ತಿದ್ದನು. ನಂದಕುಮಾರನು ತನ್ನ ಪಾಲಿಗೆ ಬಂದ ಐವತ್ತುರೂಪಾಯಿಗಳನ್ನು ಭದ್ರಪಡಿಸಿ ಸಮಯವರಿತು ಮಿತವಾಗಿ ವೆಚ್ಚಮಾಡುತ್ತಾ ಉಳಿದುದನ್ನು ಒಂದೆಡೆಯಲ್ಲಿ ಕೂಡಿಹಾಕುತ್ತಿದ್ದನು. ನಂದಕುಮಾರನು ಒಳ್ಳೆಯ ನಡತೆಯುವನಾಗಿದ್ದುದರಿಂದ, ಬಂದ ಬಡಬಗ್ಗರಿಗೆ ಯಥೋಚಿತವಾಗಿ ಉಪಕರಿಸುತ್ತಾ ಎಲ್ಲರ ಪ್ರೀತಿಗೂ ಪಾತ್ರವಾಗಿರುತ್ತಿದ್ದನು.

ಮಾರಕುಮಾರನು ಮನೆಯಲ್ಲಿದ್ದುಕೊಂಡು ಸಮಯವು ದೊರೆತಾಗಲೆಲ್ಲಾ ಮದಯಂತಿಯನ್ನು ಓರೆಗಣ್ಣಿನಿಂದ ನೋಡುತ್ತಲೂ, ಆಗಿಂದಾಗ ಪ್ರೇಮಪೂರಿತವಾದ ಸರಸಾಲಾಪಗಳನ್ನಾಡುತ್ತಲೂ ಆಕೆಗೆ ತನ್ನ ಅಭಿಪ್ರಾಯವನ್ನು ತೋರ್ಪಡಿಸಿಕೊಳ್ಳುತ್ತಿದ್ದನು. ಅಲ್ಲದೆಯೂ ಮದಯಂತಿಗೆ ಆವ ಕೆಲಸಮಾಡಿದರೆ ಇಷ್ಟವೋ ಅದನ್ನು ತೃಪ್ತಿಯಿಂದ ನೆರವೇರಿಸುತ್ತಲೂ, ಆಕೆಗೆ ಬೇಕಾದ ಪದಾರ್ಥಗಳನ್ನು ತಂದುಕೊಡುತ್ತಲೂ ಆಕೆಯ ಪ್ರೇಮಭಿಕ್ಷೆಗೆ ಕಾದುಕೊಂಡಿರುತಿದ್ದನು. ಜಾಣೆಯಾದ ಮದಯಂತಿಯು ಮಾರಕುಮಾರನ ಮನೋಗತವನ್ನು ಅರಿತುಕೊಂಡು ಆತನನ್ನು ಪ್ರೀತಿಸುವುದಕ್ಕೆ ಪ್ರತಿಯಾಗಿ ದ್ವೇಷಿಸುವುದಕ್ಕೆ ಮೊದಲುಮಾಡಿದಳು.

ಮದಯಂತಿಯು ಕೆಲವು ಕಾಲದೊಳಗಾಗಿ ಕಮಲಾಕಾಂತನನ್ನು ತನ್ನ ಮಾಯಾಜಾಲದಲ್ಲಿ ಸಿಲುಕಿಸಿಕೊಂಡಳು. ಆದರೂ ಆಕೆಯು ಆ ವೃದ್ಧನನ್ನು ಪ್ರೀತಿಸುತ್ತಿರಲಿಲ್ಲ. ಆಕೆಯ ಪ್ರೇಮರಸದ ಪ್ರವಾಹವೆಲ್ಲವೂ ನಂದಕುಮಾರನ ಕಡೆಗೆ ತಿರುಗಿದ್ದಿತು. ಆದುದರಿಂದ ಮದಯಂತಿಯು ನಂದಕುಮಾರನನ್ನು

ಕಂಡೊಡನೆಯೇ ಹಿಗ್ಗಿ ಹೋಗುತ್ತಿದ್ದಳು. ಆತನೊಡನೆ ಮಾತನಾಡುವುದೆಂದರೆ, ಆಕೆಗೆ ಸ್ವರ್ಗವೇ ದೊರೆತಂತಾಗುತಿದ್ದಿತು. ಭೋಜನೋಪಚಾರಗಳಲ್ಲಿ ಆಕೆಯು ನಂದಕುಮಾರನಿಗೆ ತೋರುತ್ತಿದ್ದ ಆದರವೂ ಅದ್ವಿತೀಯವಾಗಿದ್ದಿತು. ಇಷ್ಟಾದರೂ ನಂದಕುಮಾರನು ಮದಯಂತಿಯನ್ನು ಕಂಡರೆ ಅಸಹ್ಯಪಡುತ್ತಲೂ, ಸಾಧ್ಯವಾದಷ್ಟು ಮಟ್ಟಿಗೆ ಆಕೆಯಿಂದ ದೂರದೂರವಾಗಿಯೇ ಇರುತ್ತಲೂ ಮುಳ್ಳಿನ ಮೇಲಿದ್ದಂತೆ ಮನೆಯಲ್ಲಿ ವಾಸವಾಗಿರುತ್ತಿದ್ದನು.

ವೃದ್ಧನಾದ ಕಮಲಾಕಾಂತನು ಯುವತಿಯಾದ ಮದಯಂತಿಯ ಮೋಹ ಪಾಶಕ್ಕೆ ಸಿಲುಕಿ ಬೆಂಕಿಯಲ್ಲಿ ಬಿದ್ದ ಹುಳದಂತೆ ಒದೆದಾಡಿ ಹೋದನು. ಮದಯಂತಿಯು ಕಮಲಾಕಾಂತನ ಹೃದಯವನ್ನು ಅರಿತುಕೊಂಡವಳಾಗಿ ಆತನನ್ನು ಸೂತ್ರದ ಬೊಂಬೆಯಂತೆ ಕುಣಿಸಲಾರಂಭಿಸಿದಳು. ಆಕೆಗೆ ಸಹಜವಾದ ಪ್ರೇಮವು ನಂದಕುಮಾರನಲ್ಲಿದ್ದಿತು ; ಆಕೆಯು ಕೃತ್ರಿಮದ ಪ್ರೇಮವನ್ನು ಕಮಲಾಕಾಂತನಲ್ಲಿ ನಟಿಸುತ್ತಾ ತನ್ನ ಅಂತರ್ಯದ ಅಭಿಲಾಷೆಯನ್ನು ನೆರವೇರಿಸಿಕೊಳ್ಳುವುದಕ್ಕೆ ಸಿದ್ಧಳಾದಳು.

ಕಮಲಾಕಾಂತನ ಪ್ರೇಮವಿಲಾಸವು ಬಹುಕಾಲ ಏಕಾಂತದಲ್ಲಿ ಅಡಗಿರಲಾರದೇ ಹೋಯಿತು. ಮನೆಯಲ್ಲಿದ್ದ ಕುಂದನಂದಿನಿ, ಮಾರಕುಮಾರ, ನಂದಕುಮಾರ, ದಾಸದಾಸಿಯರು ಇವರೆಲ್ಲರಿಗೂ ಯಜಮಾನನ ಗುಟ್ಟಿನ ಪ್ರೇಮ ಲಾಲಸೆಯು ಕ್ರಮಕ್ರಮವಾಗಿ ಗೋಚರಕ್ಕೆ ಬರಲಾರಂಭವಾಯಿತು. ಎಲ್ಲರೂ ಅಸಂತುಷ್ಟರಾಗಿ, "ಈ ಮುದುಕನಿಗೆ ಸಾಯುವ ಕಾಲದಲ್ಲಿ ಇದೆಂತಹ ಪ್ರೇಮವಿಲಾಸವು! ಮನೆ ತುಂಬಾ ವಿವಾಹಕ್ಕೆ ಯೋಗ್ಯರಾದ ಹುಡುಗರಿರುವರು. ಅವರೆಲ್ಲರಿಗೂ ವಿವಾಹಮಾಡಿ ಸಂಸಾರಭಾರವನ್ನು ಅವರ ತಲೆಯ ಮೇಲೆ ಹೊರಿಸಿ ಪರಮಾತ್ಮನ ಧ್ಯಾನದಿಂದ ಸುಖವಾಗಿ ಜನ್ಮವನ್ನು ನೀಗಿಕೊಳ್ಳುವುದಕ್ಕೆ ಪ್ರತಿಯಾಗಿ ಮತ್ತೆ ಮತ್ತೆ ಸಂಸಾರವೆಂಬ ಬಚ್ಚಲ ರೊಚ್ಚಿನಲ್ಲಿ ಬಿದ್ದು ಹೊರಳಾಡುವುದು ಈತನ ಹಣೆಯಲ್ಲಿ ಬರೆದಿರುವುದಲ್ಲಾ! ವೃದ್ಧರು ಅನೇಕ ಕಾರಣಗಳಿಗೊಳಪಟ್ಟು ವಿವಾಹ ಮಾಡಿಕೊಳ್ಳುವ ಪದ್ಧತಿಯುಂಟು. ಅದನ್ನು ಬೇಡವೆನ್ನುವರಾರು? ಗೌರವದಿಂದ ಬಾಳಿ ಬದುಕಿ ಸಾಯುವ ಕಾಲದಲ್ಲಿ ವಿಧವೆಯನ್ನು ಕೂಡುವುದಾದರೆ, ಇದನ್ನು ಬಲವತ್ತರವಾದ ಪ್ರಾಚೀನ ಕರ್ಮವೆಂದೇ ಹೇಳಬೇಕು. ವೃದ್ಧರಿಗೆ ಬುದ್ಧಿಯಿಲ್ಲವೆಂದು ಬಲ್ಲವರು ಇದಕ್ಕಾಗಿಯೇ ನುಡಿದಿರುವರು. ಇದಕ್ಕಾಗಿ ನಾವು ಪಶ್ಚಾತ್ತಾಪ ಪಡುವುದರಿಂದ ಪ್ರಯೋಜನವೇನು?" ಎಂದು ಹೇಳಿಕೊಳ್ಳುತ್ತಾ ಹೇಗೋ ಹಾಗೆ ಕಾಲವನ್ನು ಕಳೆಯ ತೊಡಗಿದರು.

ಹೀಗಿರಲೊಂದು ದಿನ ಕುಂದನಂದಿನಿಯು ತನ್ನ ಕೋಣೆಯಲ್ಲಿ ಕುಳಿತು ಕೊಂಡು ಕಸೂತಿಯನ್ನು ಹಾಕುತ್ತಿರುವಲ್ಲಿ, ದಾಸಿಯೊಬ್ಬಳು ಅಲ್ಲಿಗೆ ಬಂದು— ಅಮ್ಮಯ್ಯ! ಮನೆಯ ಯಜಮಾನಿಯವರು ಗತಿಸಿಹೋದಂದಿನಿಂದಲೂ ಮನೆಯ ವ್ಯವಹಾರಗಳೆಲ್ಲವೂ ದಿನ ದಿನಕ್ಕೆ ಹಾಳಾಗಿ ಹೋಗುತ್ತಿರುವುವು. ಹೊಟ್ಟೆಗಾಗಿ ಕೆಲಸಕ್ಕೆ ಸೇರಿಕೊಂಡಿರುವ ಬಿಕಾರಿಣಿಯರಾದ ನಾವು ಆವ ಮಾತನ್ನೂ ಆಡು ವುದಕ್ಕಿಲ್ಲ. ಮಾತನಾಡಿದರೆ ಒಂದು ಬಗೆಯ ಕಷ್ಟ; ಸುಮ್ಮನಿದ್ದರೂ ಮತ್ತೊಂದು ಬಗೆಯ ಕಷ್ಟವು ಇದ್ದೇ ಇರುವುದು,—ಎಂದ ಮೇಲೆ, ಇಲ್ಲಿ ನಾವು ಸುಖವಾಗಿ ಬಾಳುವುದೆಂತು? ಅಂತೂ ನಾವುಗಳೆಲ್ಲರೂ ಮಾನವನ್ನು ಕಳೆದುಕೊಂಡು ಇಲ್ಲಿ ಬಾಳಬೇಕಾಗಿರುವುದು. ಇದು ಚಿರಕಾಲ ನಡೆಯತಕ್ಕುದಲ್ಲ. ಇಂದು ನಾಳೆಯೊಳಗಾಗಿ ನಾವುಗಳೆಲ್ಲರೂ ಈ ಮನೆಯನ್ನು ತ್ಯಾಗಮಾಡಿ ಹೊರಟು ಹೋಗುವವರಾಗಿರುವೆವು, ಎಂದು ದುಃಖದಿಂದ ಮಾತನಾಡಿದಳು.

ಕುಂದನಂದಿನಿಯು ದಾಸಿಯ ಮನೋಭಾವವನ್ನು ಅರಿತುಕೊಂಡವ ಳಾದರೂ ಅದನ್ನು ಪ್ರಕಾಶಪಡಿಸದೆಯೇ ದಾಸಿಯನ್ನು ನೋಡಿ— ರಜನೀ! ನೀನು ಹೇಳಿದುದೊಂದೂ ನನಗೆ ಅರ್ಥವೇ ಆಗಲಿಲ್ಲ, ಎಂದಳು.

ರಜನೀ—ಕುಂದ! ಹುಡುಗಿಯರಿಗೆ ಇದೊಂದೂ ಅರ್ಥವಾಗುವ ಹಾಗಿಲ್ಲ. ಬಿಡಿಸಿ ಹೇಳುವೆನು ಕೇಳಮ್ಮಾ? ಈಗಣ ಯಜಮಾನಿಯ ಮನಸ್ಸನ್ನು ಹಿಡಿದು ಕೆಲಸಮಾಡುವುದೇ ಕಷ್ಟವಾಗಿರುವುದು.

ಕುಂದ—ಈಗಣ ಯಜಮಾನಿಯಾರೇ? ನೀನು ದಿನದಿನಕ್ಕೆ ಹುಚ್ಚಿ ಯಾಗುತ್ತಾ ಬಂದಂತಿದೆ.

ರಜನೀ—ಅದೇಕೆ, ತಾಯೇ! ಹೀಗೆ ಮಾತನಾಡುವೆ? ನಿಮ್ಮ ತಾಯಿ ಯು ಪರಲೋಕಕ್ಕೆ ತೆರಳಿದ ಮೇಲೆ, ಮದಯಂತಿಯೇ ಮನೆಯ ಯಜಮಾನಿ ಯಮ್ಮನವರು.

ಕುಂದ—ರಜನೀ! ಈ ಮಾತನಾಡುವುದಕ್ಕೆ ನಮಗೆ ಆವ ಅಧಿಕಾರವೂ ಇಲ್ಲ. ಇದೆಲ್ಲವೂ ಮನೆಯ ಯಜಮಾನನ ಇಷ್ಟವು. ಆತನು ಆರನ್ನು ಬೇಕಾ ದರೂ ಪ್ರೀತಿಸಬಹುದು; ಆವ ಕೆಲಸವನ್ನು ಬೇಕಾದರೂ ಮಾಡಬಹುದು. ಅದನ್ನು ನಿಷೇಧಿಸುವುದು ನಮ್ಮಗಳ ಕರ್ತವ್ಯವಲ್ಲ, ಹಾಗೂ ನಮಗೆ ಮಂಗ ಳವೂ ಅಲ್ಲ.

ರಜನೀ—ಅಮ್ಮಯ್ಯ ! ನೀನು ಹೇಗೆ ಮಾತನಾಡಿದರೂ ಚೆನ್ನಾಗಿಯೇ ಇರುವುದು. ಬಂದಿರುವ ಕಷ್ಟಗಳೆಲ್ಲವೂ ನಮ್ಮಂತಹ ದಾಸಿಯರಿಗೇ ಹೊರತು ಮತ್ತಾರಿಗೂ ಅಲ್ಲ. ಇಲ್ಲಿ ಒಂದು ದಿನ ಕಳೆವುದು ಒಂದು ಯುಗವಾಗಿ ತೋರುತ್ತಿರುವುದು. ನಾವು ಇಲ್ಲಿಯೇ ಇರುವುದಾದರೆ, ನಮಗೆ ಅರ್ಧಚಂದ್ರ ಪ್ರಯೋಗವೇ ಗತಿ.

ಕುಂದ—ರಜನೀ ! ನಾನು ಬದುಕಿರುವ ವರೆಗೂ ನೀನು ಆವುದಕ್ಕೂ ಭಯಪಡಬೇಕಾದುದೇನೂ ಇಲ್ಲ. ಇನ್ನು ಮೇಲಾದರೂ ನೀನು ಈ ಚಿಂತೆಯನ್ನು ಬಿಡು.

ರಜನೀ—ತಾಯೀ ! ನಾನು ಹೇಳುವ ಮಾತು ನಿಜವೋ ಸುಳ್ಳೋ ನೀನೇ ಪರೀಕ್ಷಿಸಿ ನೋಡು. ಯಜಮಾನಿಯ ಹೇಳಾಟ, ಯಜಮಾನನ ಮಾಡಾಟ ; ನಮ್ಮೆಲ್ಲರಿಗೂ ಪರದಾಟ.

ಕುಂದ—ರಜನೀ ! ನನ್ನಿದಿರಿನಲ್ಲಿ ನನ್ನ ಪಾಲಕತಂದೆಯ ಸಂಬಂಧವಾಗಿ ನೀನು ಆವ ಮಾತನ್ನೂ ಆಡಬಾರದು. ಈಗ ಅದನ್ನು ಕಟ್ಟಿಕೊಂಡು ನಮಗಾಗುವುದೇನು ? ನೀನು ನಿನ್ನ ಕೆಲಸವನ್ನು ಮಾಡಿಕೊಂಡಿರು.

ಈ ಮಾತನ್ನು ಕೇಳಿದ ಕೂಡಲೆ, ರಜನಿಯು ತನ್ನ ಕೆಲಸದ ಮೇಲೆ ಹೊರಟು ಹೋದಳು. ಬಳಿಕ ಕುಂದನಂದಿನಿಯು ತನ್ನ ತಾಯಿಯನ್ನು ಜ್ಞಾಪಿಸಿಕೊಂಡು ಗಳಗಳನೆ ಅತ್ತಳು. ಅತ್ತು ಅತ್ತು ಸಾಕಾಗಿ ತನ್ನೊಳಗೆ ತಾನೇ ಸಮಾಧಾನವನ್ನು ತಂದುಕೊಂಡು ಪರಿಪರಿಯಾಗಿ ಚಿಂತಿಸತೊಡಗಿದಳು :—

"ಮನೆಯ ಯಜಮಾನನು ಮಾಡುವ ಕೆಲಸವು ದಾಸದಾಸಿಯರಿಗೆ ತಿಳಿಯುವ ಹಾಗಾಯಿತು. ಇದರಿಂದ ಮನೆಯ ಗುಟ್ಟು ರಟ್ಟಾಗುವುದಕ್ಕೆ ದಾರಿಯಾಯಿತು. ಹೆಂಗುಸರ ಕಿವಿಯಲ್ಲಿ ಬಿದ್ದ ವಿಷಯವು ಅಡಗಿರುವುದೆಂದರೇನು ! ಈ ವಿಷಯವು ಎಲ್ಲೆಲ್ಲಿಯೂ ಹರಡುವುದಾದರೆ, ತಲೆಯೆತ್ತಿಕೊಂಡು ತಿರುಗುವುದು ಹೇಗೆ ? ಮುಖ್ಯವಾಗಿ ನಮ್ಮಗಳ ಪಾಡು ನಾಯ ಪಾಡಾದುದು. ನಾವುಗಳು ಉದಾಸೀನಭಾವವನ್ನು ತಾಳಿಕೊಂಡು ಸುಮ್ಮನಿರುವುದಾದರೆ, ದುಷ್ಕೃತ್ಯವು ತಲೆಮಾರಿ ಹೋಗುವುದು. ಬಳಿಕ ಅನರ್ಥಪರಂಪರೆಯೇ ಉಂಟಾದೀತು. ವಿಷದ ಗಿಡವನ್ನು ಮೊಳಕೆಯಲ್ಲಿಯೇ ಕಿತ್ತು ಬಿಸುಡುವುದು ಎಲ್ಲರಿಗೂ ಕ್ಷೇಮಕರವು. ಆದುದರಿಂದ ನಾನು ನಂದಕುಮಾರನೊಡನೆ ನಾನಾ ರೀತಿಯಲ್ಲಿ ಪರ್ಯಾಲೋಚಿಸಿ ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಲೇ ಬೇಕು. ದೊಡ್ಡವರು ಮಾರ್ಗತಪ್ಪಿ ನಡೆವುದಾದರೆ, ಚಿಕ್ಕವರು ಉಪಾಯದಿಂದ ಅವರಿಗೆ ಬುದ್ಧಿಗಲಿಸ

ಬಹುದೆಂದು ನಾನು ಕೇಳಿರುವೆನು. ಒಳ್ಳೆಯ ಮಾರ್ಗದಲ್ಲಿ ನಡೆಯುವುದು ಆರಿಗೆ ತಾನೇ ಮಂಗಳವನ್ನುಂಟುಮಾಡಲಾರದು ? ''

ಕುಂದನಂದಿನಿಯು ಈ ರೀತಿಯಾಗಿ ಆಲೋಚಿಸಿ ತನ್ನ ಪ್ರಯತ್ನವನ್ನು ಸಫಲಗೊಳಿಸುವುದಕ್ಕೆ ಕಾಲವನ್ನು ನಿರೀಕ್ಷಿಸಿಕೊಂಡಿರುತಿದ್ದಳು.

ಕಮಲಾಕಾಂತ ಚಕ್ರವರ್ತಿಗೆ ಒಬ್ಬನೇ ಗಂಡುಮಗನಿದ್ದನು. ಮಾರ ಕುಮಾರನೆಂಬುವನು ಅವನ ಮಗನು. ಮಾರಕುಮಾರನ ತಂದೆಯು ಸತ್ತ ಕೆಲವು ದಿನಗಳೊಳಗಾಗಿಯೇ ಆತನ ತಾಯಿಯೂ ಪರಲೋಕಕ್ಕೆ ತೆರಳಿಬಿಟ್ಟಳು. ಮಗ ಸೊಸೆ ಇವರಿಬ್ಬರೂ ಅಕಾಲಮೃತ್ಯುವಿಗೆ ತುತ್ತಾದುದಕ್ಕಾಗಿ ಕಮಲಾ ಕಾಂತನ ಹೆಂಡಿತಿಯು ಬಲುವಾಗಿ ಕೊರಗಿದವಳಾಗಿ ಕುಂದನಂದಿನಿಯೆಂಬ ಹುಡುಗಿಯೊಬ್ಬಳನ್ನು ಸಾಕಿಕೊಂಡು ಅವಳನ್ನು ತನ್ನ ಮಗಳಂತೆಯೇ ಕಾಪಿಟ್ಟು ಕೊಂಡು ಬರುತ್ತಿದ್ದಳು.

ಕುಂದನಂದಿನಿಯು ಸ್ತ್ರೀಜಾತಿಯಲ್ಲಿ ಅಪೂರ್ವ ಸುಂದರಿ. ಬ್ರಹ್ಮನು ಆಕೆ ಯನ್ನು ನಿಷ್ಕಲ್ಮಷವಾದ ಹೃದಯದಿಂದ ಸೃಷ್ಟಿಮಾಡಿದ್ದನೆಂದು ಹೇಳಿದರೂ ಹೇಳಬಹುದು. ಸ್ತ್ರೀರೂಪವನ್ನು ನೋಡಿ ಪುರುಷನು ಮೋಹಿಸುವನು ; ಪುರು ಷನ ಅಂಗಸೌಷ್ಠವವನ್ನು ಕಂಡು ಸ್ತ್ರೀಯು ಮೋಹಿಸುವಳು. ಇದು ಕಂಡು ಕೇಳಿದ ವಿಷಯವೇ ಆಗಿರುವುದು. ಆದರೆ ಕುಂದನಂದಿನಿಯನ್ನು—ಪುರುಷರ ಮಾತು ಹಾಗಿರಲಿ—ಸ್ತ್ರೀಯರೇ ಪ್ರೀತಿಸುತ್ತಿದ್ದರೆಂದು ನಾವು ಇಲ್ಲಿ ವರ್ಣಿಸುವು ದಾದರೆ, ಆಕೆಯಲ್ಲಿ ಅದೆಂತಹ ಅನಿರ್ವಚನೀಯವಾದ ಸೌಂದರ್ಯವಿದ್ದಿತೆಂಬು ದನ್ನು ನಮ್ಮ ಪ್ರಿಯಪಾಠಕ ಮಹಾಶಯರೇ ಊಹಿಸಿಕೊಳ್ಳಲಿ.

ಇಂತಹ ಸರ್ವಾಂಗಸುಂದರಿಯಾದ ಕುಂದನಂದಿನಿಗೆ ನಾವು ವರ್ಣಿಸುವ ಕಾಲದಲ್ಲಿ ಹದಿನಾರನೆಯ ವರ್ಷವು ನಡೆಯುತ್ತಿದ್ದಿತು. ಆಕೆಯ ಸ್ವಭಾವ ವಾದರೋ ಆಕೆಯ ದೇಹದಂತೆ ನಿರ್ಮಲವಾಗಿದ್ದಿತು. ಕುಂದನಂದಿನಿಯು ಬಾಲ್ಯದಿಂದಲೂ ನಂದಕುಮಾರನನ್ನು ಪ್ರೀತಿಸುತ್ತಿದ್ದಳು. ನಂದಕುಮಾರನೂ ಆಕೆಯನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಇವರಿಬ್ಬರೂ ಒಬ್ಬರನ್ನೊಬ್ಬರು ಬಿಟ್ಟು ಆವ ಕೆಲಸವನ್ನೂ ಮಾಡುತ್ತಿರಲಿಲ್ಲ. ಸುಖದುಃಖಗಳಲ್ಲಿ ಇವರಿಬ್ಬರೂ ಆವಾಗಲೂ ಭಾಗಿಗಳಾಗಿಯೇ ಇರುತ್ತಿದ್ದರು. ವಯಸ್ಸು ಹೆಚ್ಚುತ್ತಾ ಬಂದ ಹಾಗೆಲ್ಲಾ ಇವರಿಬ್ಬರ ಪ್ರೀತಿಯು ಪ್ರಣಯ ಸ್ವರೂಪವನ್ನು ತಾಳಿತು. ಇದನ್ನು ಮಟ್ಟಿಗೆ ಇವರಿಬ್ಬರೂ ಗೋಪ್ಯವಾಗಿಟ್ಟುಕೊಂಡು ಪ್ರಣಯ ಬೀಜವನ್ನು ರಕ್ಷಿಸಿ ಕೊಂಡು ಬರುತ್ತಿದ್ದರು.

ಮತ್ತೊಂದೆಡೆಯಲ್ಲಿ ಮಾರಕುಮಾರನು ಕುಂದನಂದಿನಿಯನ್ನು ಪ್ರಣಯ ದೃಷ್ಟಿಯಿಂದ ನೋಡಲಾರಂಭಿಸಿದನು. ಕುಂದನಂದಿನಿಯು ಇದನ್ನು ಅರಿತವಳಾಗಿ ಮಾರಕುಮಾರನ ಸಾನ್ನಿಧ್ಯವನ್ನು ಸಾಧ್ಯವಾದಷ್ಟು ಮಟ್ಟಿಗೆ ತಪ್ಪಿಸಿಕೊಂಡು ಬಲು ಎಚ್ಚರಿಕೆಯಿಂದಿರುತ್ತಿದ್ದಳು.

ಕುಂದನಂದಿನಿಯು ಸಮಯವರಿತು ನಂದಕುಮಾರನಿಗೆ ಕಮಲಾಕಾಂತನ ವಿಷಯವನ್ನು ತಿಳಿಯಹೇಳಿ, ಕಮಲಾಕಾಂತನಿಗೆ ಸರಿಯಾಗಿ ಬುದ್ಧಿಗಲಿಸುವುದಕ್ಕೆ ನಂದಕುಮಾರನನ್ನು ಮುಂದೆ ಬಿಟ್ಟಳು. ನಂದಕುಮಾರನು ಆಕೆಯ ಮಾತಿಗೆ ಪ್ರತಿಯಾಡದೆ ತನ್ನ ಕೆಲಸವು ಹೇಗೆ ಸಫಲವಾಗಬೇಕೋ ಹಾಗೆ ಉಪಾಯವನ್ನು ಚಿಂತಿಸತೊಡಗಿದನು. ಆತನು ತನ್ನ ಕಾರ್ಯದ ಸಾಧನೆಗಾಗಿ ಸಮಯವನ್ನು ನಿರೀಕ್ಷಿಸುತ್ತಿದ್ದನು.

ಒಂದು ದಿನ ಸಮಯವು ಒದಗಿಬರಲು, ನಂದಕುಮಾರನು ಹೆದರಿ ಹೆದರಿ ಕಮಲಾಕಾಂತನ ಬಳಿಗೈತಂದು, ವಿನಯದಿಂದ ತಲೆವಾಗಿದವನಾಗಿ ವೃದ್ಧನಿಗೆ ಹೇಳಬೇಕಾದುದೆಲ್ಲವನ್ನೂ ಮೊದಲಿನಿಂದ ಕೊನೆಯ ವರೆಗೂ ಸಕಾರಣವಾಗಿ ತಿಳಿಯ ಹೇಳಿದನು. ನಂದಕುಮಾರನು ವೃದ್ಧನ ಪ್ರೀತಿಗೆ ಪಾತ್ರವಾಗಿದ್ದರೂ, ಮನೆಯ ಮಕ್ಕಳು ಯಜಮಾನನಿಗೆ ಬುದ್ಧಿಗಲಿಸುವುದಕ್ಕೆ ಹೊರಟ ಮೇಲೆ ಯಜಮಾನನು ಬದುಕುವುದಕ್ಕಿಂತಲೂ ಸಾಯುವುದೇ ಮೇಲೆಂದು ಕಮಲಾಕಾಂತನು ತಿಳಿದವನಾಗಿ, ನಂದಕುಮಾರನ ಮಾತಿಗೆ ಕಿವಿಗೊಡದೆ ವೀರಾವೇಶ ಪರವಶನಾಗಿ ಆ ಬಾಲಕನನ್ನು ಮನೆಯಿಂದ ಆ ಕ್ಷಣವೇ ಹೊರಡಿಸಿಬಿಟ್ಟನು.

---

## ಆರನೆಯ ಸಂಧಿ

### ಗೃಹತ್ಯಾಗ

"ಕುಂದನಂದಿನಿ! ನಿನ್ನನ್ನು ಕೊನೆಯ ಸಲ ನೋಡಿಕೊಂಡು ಹೋಗೋಣವೆಂದು ಬಂದೆನು. ನನಗೂ ನಿನಗೂ ಇಂದಿಗೆ ಸಂಬಂಧವು ತೀರಿತು" ಎಂದು ನಂದಕುಮಾರನು ಕುಂದನಂದಿನಿಯ ಕೋಣೆಯಲ್ಲಿ ಕುಳಿತುಕೊಂಡು ಪಿಸುಮಾತಿನಲ್ಲಿ ಮಾತನಾಡಿದನು.

ಕುಂದನಂದಿನಿಯು ಈ ಮಾತನ್ನು ಕೇಳಿದ ಕೂಡಲೆ—ನಂದ! ಹಾಗೆಂದರೇನು ? ಎಂದಳು.

ನಂದಕುಮಾರ—ಕೇಳು ; ನಮ್ಮ ತಾತನು ನನ್ನನ್ನು ಮನೆಯಿಂದ ಹೊರಡಿಸಿಬಿಟ್ಟಿರುವನು. ನಾನು ಈ ರಾತ್ರಿಯೊಳಗಾಗಿ ಈ ಮನೆಯನ್ನು ತ್ಯಾಗ ಮಾಡಿ ಹೊರಟುಹೋಗಬೇಕಾಗಿರುವುದು. ನಿನ್ನನ್ನು ಕೊನೆಯ ಸಲ ನೋಡಿ ಕೊಂಡು ಹೋಗೋಣವೆಂದು ಇಲ್ಲಿಗೆ ಬಂದೆನು.

ಕುಂದ—ಏನ ಹೇಳಿದೆ? ನಡೆದುದೇನು? ನೀನೇನಾದರೂ ಆತನೊಡನೆ ಜಗಳವನ್ನು ಹೂಡಿದೆಯಾ ?

ನಂದ—ನಾನು ನಮ್ಮ ಆಲೋಚನೆಯಂತೆಯೇ ಇದ್ದುದನ್ನು ಇದ್ದ ಹಾಗೆಯೇ ಆತನಿಗೆ ತಿಳಿಸಿಬಿಟ್ಟೆನು. ನಾನು ಹೇಳಿದುದು ಆತನಿಗೆ ಹಿತವಾಗಿ ಕಂಡುಬರಲಿಲ್ಲ. ಅದಕ್ಕಾಗಿಯೇ ಆತನು ನನ್ನ ಮೇಲೆ ಅತಿಯಾಗಿ ಕೋಪಿಸಿ ಕೊಂಡು ಮನೆಯನ್ನು ಬಿಟ್ಟು ಹೊರಟುಹೋಗುವಂತೆ ಕಟ್ಟಪ್ಪಣೆಯನ್ನು ಮಾಡಿದನು.

ಕುಂದ—ಈಗ ನೀನು ಎಲ್ಲಿಗೆ ಹೊರಡುವೆ ?

ನಂದ—ಕುಂದ ! ನನ್ನ ಕಾಲುಗಳು ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವುವೋ ಅಲ್ಲಿಗೆ ಹೋಗುವೆನು. ನಾನು ರಾಜನಗರಕ್ಕಾದರೂ ಹೋಗಿ ಅಲ್ಲಿ ಹಣವನ್ನು ಸಂಪಾದಿಸಿಕೊಂಡು ಜೀವಿಸಬೇಕೆಂದಿರುವೆನು. ನನ್ನ ವಿಷಯವು ಹೇಗಾದರೂ ಆಗುವುದು, ಅದಕ್ಕಾಗಿ ನಾನು ವ್ಯಸನ ಪಡುತ್ತಿಲ್ಲ ; ಆದರೆ—

ಕುಂದ—(ಅಡ್ಡಗಿಸಿ) ನಂದ ! ಗೊತ್ತಾಯಿತು. ನಾನೇನ ಮಾಡಲಿ ? ನನಗಾದರೋ ದಿಕ್ಕೇ ತೋರಲೊಲ್ಲದು. ನಾನು ಕಮಲಾಕಾಂತನಿಗೆ ಔರಸಪುತ್ರಿ ಯಾಗಿದ್ದಿದ್ದರೆ, ಇಷ್ಟು ತಿರಸ್ಕಾರಕ್ಕೆ ಪಾತ್ರವಾಗಬೇಕಾದುದೇ ಇರಲಿಲ್ಲ. ಈಗ ನಾನು ಪಶ್ಚಾತ್ತಾಪಪಟ್ಟು ಪ್ರಯೋಜನವೇನು ?

ನಂದಕುಮಾರ ! ನಿನಗೆ ತುಂಬಾ ಕಷ್ಟವುಂಟಾಯಿತು, ಆದರೂ ನೀನು ಇಂತಹ ಕಷ್ಟಗಳಿಗೆ ಹೆದರಬೇಕಾದುದಿಲ್ಲ. ನ್ಯಾಯಪರಾಯಣನಾದ ನಾರಾ ಯಣನು ನಿನ್ನ ಕಷ್ಟಗಳೆಲ್ಲವನ್ನೂ ಹೋಗಲಾಡಿಸುವನು. ಆಗಿಂದಾಗ ನಿನ್ನಿಂದ ನನಗೆ ಪತ್ರಬರುವುದಾದರೆ, ನನ್ನ ಈ ಅಲ್ಪ ಚೇತನವೂ ಶಾಂತಿಗೊಂಡೀತು.

ನಂದ—ಕುಂದ ! ನನ್ನದೊಂದು ಏಕಾಂತದ ಪ್ರಶ್ನೆ.

ಕುಂದ—ಅದೇನು, ನಂದಕುಮಾರ ?

ನಂದ—ನೀನು ನನ್ನನ್ನು ನಿಜವಾಗಿಯೂ ಪ್ರೀತಿಸುವೆಯಾ ?

ಈ ಮಾತನ್ನು ಕೇಳಿದ ಕೂಡಲೆ, ಕುಂದನಂದಿನಿಯು ನಾಚುಗೆಯಿಂದ ತಲೆಯನ್ನು ತಗ್ಗಿಸಿಬಿಟ್ಟಳು. ಅವಳ ಬಾಯಿಂದ ಆವ ಮಾತೂ ಹೊರಡಲಿಲ್ಲ. ಕುಂದನಂದಿನಿಯು ತನ್ನೊಳಗೆ ತಾನೇ, "ಪ್ರಾಣೇಶ್ವರ! ನಿನ್ನನ್ನು ಬಿಟ್ಟರೆ ಈ ಚರಣದಾಸಿಗೆ ಮತ್ತಾರು ಗತಿ? ನಿನ್ನನ್ನು ಅಗಲಿ ನಾನು ಹೇಗೆ ತಾನೇ ಬದುಕಿರಲಿ? ನೀನು ಮಟ್ಟಿಗೆ ನನ್ನನ್ನು ಆವಾಗಲೂ ಕೈಬಿಡಬೇಡ, ಕಂಡೆಯಾ? ಈ ಭಿಕ್ಷೆಯೊಂದನ್ನು ಮಟ್ಟಿಗೆ ನಾನು ಸೆರಗೊಡ್ಡಿ ಬೇಡುವೆನು," ಎಂದು ಕೊಂಡಳು.

ಕುಂದನಂದಿನಿಯು ಮೌನದಿಂದಿರುವುದನ್ನು ನೋಡಿ ನಂದಕುಮಾರನು ಇಂತೆಂದನು :—

"ಕುಂದ! ನಿನ್ನ ಮೌನಕ್ಕೆ ಅರ್ಥವಾದರೂ ಏನು? ಮೌನದಿಂದ ಅಂಗೀಕಾರ ಸೂಚನೆಯಾಗುವುದು, ಆದರೂ ದಾನ ಪ್ರತಿದಾನಗಳು ಈ ಜಗತ್ತಿನ ಸ್ವಭಾವಸಿದ್ಧವಾದ ಧರ್ಮವು. ನಾನು ನಿನ್ನನ್ನು ಪ್ರೀತಿಸುವ ಹಾಗೆ ಈ ಲೋಕದಲ್ಲಿ ಆವ ಪುರುಷನೂ ಮತ್ತಾವ ಸ್ತ್ರೀಯನ್ನೂ ಪ್ರೀತಿಸಲರಿಯನು. ಈ ಪ್ರೀತಿಯ ಆಧಿಕ್ಯದಿಂದಲೇ ನಾನು ನಿನ್ನನ್ನು ಕೊನೆಯ ಸಲ ನೋಡಿಕೊಂಡು ಹೋಗುವುದಕ್ಕೆ ಬಂದಿರುವೆನು. ನಿನ್ನಿಂದ ಅಪ್ಪಣೆಯನ್ನು ತೆಗೆದುಕೊಂಡು ಹೊರಟುಹೋಗಬೇಕೆಂಬುದೇ ನನ್ನ ಮುಖ್ಯ ಕರ್ತವ್ಯವಾಗಿರುವುದು. ಒಂದು ವೇಳೆ ನೀನು ನನ್ನನ್ನು ಪ್ರೀತಿಸದಿದ್ದರೂ, ನನಗಾಗಿ ಮರುಗದಿದ್ದರೂ, ನನ್ನ ಜನ್ಮವಿದ್ದೂ ಪ್ರಯೋಜನವಿರಲಾರದು. ನಾನು ಏನನ್ನಾದರೂ ಮಾಡುವೆನು, ಹೇಗಾದರೂ ಹೊಟ್ಟೆಯನ್ನು ತುಂಬಿಕೊಳ್ಳುವೆನು. ಇದರಿಂದ ಬಂದ ಭಾಗ್ಯವೇನು? ನಾನು ಆರನ್ನು ನನ್ನ ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸುವೆನೋ, ಆಕೆಯು ನನ್ನನ್ನು ಪ್ರತಿಯಾಗಿ ಪ್ರೀತಿಸದೇ ಹೋಗುವುದಾದರೆ, ನಾನು ಬದುಕಿ ಫಲವೇನು? ಅಂತಹ ಭಾರವಾದ ಪ್ರಾಣಗಳನ್ನು ನೀಗಿಕೊಳ್ಳುವುದೇ ಮೇಲು.

ಕುಂದ! ನೀನು ಮಾತನಾಡು; ನಾನು ನಗುನಗುತೆ ಎಂತಹ ಕಷ್ಟವನ್ನಾದರೂ ಅನಾಯಾಸದಿಂದ ಅನುಭವಿಸುವೆನು. ನನಗಾಗಿ ನೀನು ಆವ ಬಗೆಯಿಂದಲೂ ಕೊರಗಬೇಕಾದುದೇನೂ ಇರುವುದಿಲ್ಲ. ನಿನ್ನ ಒಳಗಣ ಪ್ರೀತಿಯನ್ನು ಒಂದು ಸಲ ಹೊರಗೆ ತೋರಿಸು. ನಾನು ಧನ್ಯನಾಗಿ ನಿನ್ನನ್ನು ಇಷ್ಟರಲ್ಲಿಯೇ ವಿವಾಹವಾಗಲು ತಕ್ಕ ಏರ್ಪಾಡನ್ನು ಮಾಡಿಕೊಳ್ಳುವೆನು.

ಕುಂದ! ನಾನು ಹೊರಡಲೇ ಬೇಕಾಗಿರುವುದು. ನೀನು ನಗೆಮೊಗದಿಂದ ಹೊರಡುವುದಕ್ಕೆ ನನಗೆ ಅಪ್ಪಣೆ ಕೊಡು. ಇದೇನು, ಕುಂದನಂದಿನಿ! ಸಣ್ಣ

ಹುಡುಗರಂತೆ ಕಣ್ಣೀರ ಸುರಿಸುವೆ? ನೀನು ಆವುದಕ್ಕೂ ವ್ಯಸನ ಪಡಬೇಡ. ನೀನು ವ್ಯಸನಪಡುವುದಾದರೆ, ನನ್ನ ಮನಸ್ಸು ಒಡೆದು ಪುಡಿಪುಡಿಯಾಗಿ ಹೋಗುವುದು. ನೀನು ಸಂತೋಷವಾಗಿದ್ದರೆ, ನನ್ನ ಕಾರ್ಯಗಳೆಲ್ಲವೂ ಜಯವನ್ನು ಹೊಂದುವುವು."

ಕುಂದ—ಆಗಿಂದಾಗ ಪತ್ರವನ್ನು ಬರೆಯುವೆಯಾ?

ನಂದ—ಸತ್ಯವಾಗಿಯೂ ಬರೆಯುವೆನು.

ಕುಂದ—ನನ್ನ ದೇಹವು ಮಟ್ಟಿಗೆ ಇಲ್ಲಿಯೇ ಇರಬೇಕಾಗಿದೆ. ಈ ಪಾರ್ಥಿವ ಶರೀರವು ಪರಾಧೀನವಾದುದು. ಅಧೀನದಲ್ಲಿರತಕ್ಕ ನನ್ನ ಮನವೂ ಪ್ರಾಣವೂ ನಿನ್ನೊಡನೆಯೇ ತೆರಳುವುದು.

ನಂದ—ಕುಂದ! ಮನಃಪ್ರಾಣಗಳಿಂದಗಲಿದ ದೇಹವು ಬದುಕಿರಲಾರದು; ಆದುದರಿಂದ ನನ್ನ ಮನಃಪ್ರಾಣಗಳನ್ನು ನಿನ್ನಲ್ಲಿಯೇ ಬಿಟ್ಟು, ನಿನ್ನ ಮನಃಪ್ರಾಣಗಳನ್ನು ನಾನು ಕೊಂಡೊಯ್ವೆನು. ನನಗೆ ಹೊರಟುಹೋಗುವುದಕ್ಕೆ ಅಪ್ಪಣೆಯನ್ನು ಕೊಡು.

ನಂದಕುಮಾರನು ಹೀಗೆ ಹೇಳಿ ಕುಂದನಂದಿನಿಯ ಅಪ್ಪಣೆಯನ್ನು ತೆಗೆದುಕೊಂಡು ಹೊರಗೆ ಬರುತ್ತಿರುವಲ್ಲಿ ಆತನಿಗೆ ಮದಯಂತಿಯ ಸಂದರ್ಶನವಾಯಿತು. ಕೂಡಲೆಯೇ ನಂದಕುಮಾರನು ಅಲ್ಲಿಯೇ ನಿಂತುಬಿಟ್ಟನು.

---

## ಏಳನೆಯ ಸಂಧಿ

### ಭಯಂಕರ ಕೌಶಲ

ಮದಯಂತಿಯು ನಂದಕುಮಾರನನ್ನು ನೋಡಿ—ನಂದಕುಮಾರ! ಇದೇನು ಇಷ್ಟು ಸಡಗರ? ಎಂದು ಕೇಳಿದಳು.

ನಂದ—ಈ ಮನೆಯನ್ನು ಬಿಟ್ಟು ಹೊರಟುಹೋಗುವೆನು. ಮತ್ತೆ ನಾನು ಇಲ್ಲಿಗೆ ಬರುವ ಸಂಭವವಿಲ್ಲ.

ಮದಯಂತಿ—ಅದೇಕೆ? ನಿನಗಾದುದೇನು?

ನಂದ—ನನ್ನ ತಾತಂದಿರು ಮನೆಯನ್ನು ಬಿಟ್ಟು ಹೊರಟುಹೋಗಬೇಕೆಂದು ಅಪ್ಪಣೆಮಾಡಿರುವರು.

ಮದ—ಅದೇಕೆ?

ನಂದ—ಅದೊಂದು ದೊಡ್ಡ ಕತೆ. ಈಗ ಅದನ್ನು ವಿವರಿಸಿ ಹೇಳಲು ಸಮಯವಿಲ್ಲ.

ಮದ—ಈಗ ಸಮಯವಿಲ್ಲವೆನ್ನುವುದಕ್ಕೆ ಕಾರಣವೇನು? ನಾನು ಕೇಳು ವಾಗ, ನನ್ನಿದಿರಿನಲ್ಲಿ ನಿಂತುಕೊಂಡು ಮಾತನಾಡುವುದಕ್ಕೆ ಕೂಡ ನಿನಗೆ ಸಹನೆ ಯಿಲ್ಲವಲ್ಲಾ! ನಡೆದಿರುವ ಸಂಗತಿಯನ್ನು ಬಿಡಿಸಿ ಹೇಳು.

ನಂದ—ನಿನ್ನ ವಿಷಯವಾಗಿ ನಾನು ನನ್ನ ತಾತಂದಿರೊಡನೆ ಘೋರ ವಾದ ವಿವಾದವನ್ನೇ ಮಾಡಿಬಿಟ್ಟೆನು. ಆ ವೃದ್ಧನು ನಿನ್ನನ್ನು ವಿವಾಹ ಮಾಡಿ ಕೊಳ್ಳುವುದು ಆರಿಗೂ ಇಷ್ಟವಿಲ್ಲ. ಮುದುಕನಿಗೆ ಸಾಯುವ ಕಾಲದಲ್ಲಿ ಮದುವೆ ಯೆಂದರೇನು? ಅದರಲ್ಲಿಯೂ ವಿಧವಾ ವಿವಾಹವೇ? ಸತ್ಕುಲ ಪ್ರಸೂತರಿಗೆ ಇದೊಂದೂ ಚೆನ್ನಲ್ಲ.

ಮದ—ಹಾಗಾದರೆ ನೀನು ನನ್ನನ್ನು ಪ್ರೀತಿಸುವೆಯಾ? ನಮ್ಮಿಬ್ಬ ರಿಗೂ ಪ್ರಥಮದರ್ಶನವಾದಂದಿನಿಂದಲೂ, ನನ್ನ ಮನವು ನಿನ್ನಲ್ಲಿ ಲೀನವಾಗಿ ಹೋಗಿರುವುದು. ನಾನು ನಿನ್ನನ್ನು ಅತಿಶಯವಾಗಿ ಪ್ರೀತಿಸುವೆನು.

ನಂದ—ನನಗೆ ಇಂತಹ ಮಾತುಗಳಾವುವೂ ಬೇಕಿಲ್ಲ. ನನಗೆ ಹೊತ್ತಾ ಯಿತು, ಹೊರಡುವೆನು.

ಮದ—ನನ್ನಲ್ಲಿ ಇಷ್ಟೇಕೆ ಕೋಪ, ನಂದಕುಮಾರ? ನಾನು ವಿಧವೆ ಯೇನೋ ಅಹುದು; ಆದರೂ ನನಗಿನ್ನೂ ಹೆಚ್ಚಿನ ವಯಸ್ಸೇನೂ ಆಗಿಲ್ಲ. ಈ ವಯಸ್ಸಿನಲ್ಲಿ ನನ್ನಂಥವರು ಎಷ್ಟೋ ಹೆಂಗುಸರು ವಿವಾಹ ಮಾಡಿಕೊಂಡು ಗಂಡನೊಡನೆ ಸುಖದಿಂದ ಬಾಳಿಕೊಂಡಿರುವರು. ನಾನು ಈ ರೀತಿಯಲ್ಲಿ ಬಾಳಿ ಕೊಂಡಿರಬೇಕೆಂಬುದು ತಪ್ಪಾದುದೇ? ನಂದಕುಮಾರ! ನಾನು ನಿಜವಾಗಿಯೂ ನಿನ್ನನ್ನು ಪ್ರೀತಿಸುತ್ತಿರುವೆನು. ನೀನು ಇಲ್ಲಿಂದ ಹೊರಟು ಹೋಗುವುದಾದರೆ, ನಾನು ಹೇಗೆ ಜೀವದಿಂದಿರಲಿ?

ನಂದ—ನೀನಾಡುವುದು ಅದೆಂತಹ ಮಾತು? ನೀನು ಒಂದು ಕಡೆ ನಮ್ಮ ತಾತಂದಿರನ್ನು ಮದುವೆಯಾಗಬೇಕೆಂದು ಯತ್ನಮಾಡಿರುವೆ. ಮತ್ತೊಂದು ಕಡೆ ನನ್ನನ್ನು ಪ್ರೀತಿಸುವುದಾಗಿ ಚಾತುರ್ಯದ ಮಾತನ್ನಾಡುತ್ತಿರುವೆ. ನಿನ್ನ ಮಾಯೆಯನ್ನು ಬಲ್ಲವರಾರು? ನೀನು ನನ್ನನ್ನೇ ಪ್ರೀತಿಸುವುದಾಗಿ ಸಂಕಲ್ಪ ಮಾಡಿದ್ದರೆ, ಆ ವೃದ್ಧನ ಮೇಲೆ ನಿನ್ನ ಸಮ್ಮೋಹನಾಸ್ತ್ರವೇತಕೆ?

ಮದ—ನಾನು ಹಾಗೆ ಮಾಡುವುದೂ ನಿನಗಾಗಿಯೇ.

ನಂದ—ಅದೆಂತಹ ಮಾತು ?

ಮದ—ನಂದಕುಮಾರ ! ಹುಡುಗನಂತೆ ಮಾತನಾಡಬೇಡ. ತಿಳಿತಿಳಿದೂ ಹೀಗೆ ಮಾತನಾಡುವುದು ತರವಲ್ಲ, ಆದರೂ ಹೇಳುವೆನು, ಕೇಳು. ನಿನ್ನ ತಾತನು ಬದುಕಿರುವ ವರೆಗೂ ನಿನಗೆ ಆವ ಆಸ್ತಿಯೂ ಇಲ್ಲ. ನಾನು ನಿನ್ನನ್ನು ಪ್ರೀತಿಸುವೆನಾದರೂ, ಹಣಕಾಸಿಲ್ಲದ ನಿನ್ನನ್ನು ಮದುವೆಯಾಗಿ ನಾನು ಸುಖಪಡುವುದೇನಿರುವುದು ? ಸುಖವನ್ನು ಅನುಭವಿಸಬೇಕೆಂದು ಆಸೆಯನ್ನಿಟ್ಟುಕೊಂಡಿರುವ ನಾನು, ತಿಳಿತಿಳಿದೂ ನಿರ್ಗತಿಕನಾದ ನಿನ್ನನ್ನು ವರಿಸಿ ಮತ್ತೆ ಮತ್ತೆ ದಾರಿದ್ರ್ಯದ ದುಃಖಕ್ಕೆ ಈಡಾಗಲೊಲ್ಲೆನು. ಅದುಕಾರಣ ನಾನು ಕೌಶಲದಿಂದ ಕಮಲಾಕಾಂತನನ್ನು ವರಿಸಲು ಪ್ರಯತ್ನಪಟ್ಟಿರುವೆನು. ಆತನು ಕೇವಲ ವೃದ್ಧನು ; ಮುಂದೆ ಆತನು ಎಷ್ಟು ದಿನಗಳು ತಾನೇ ಬದುಕಿಯಾನು ? ಆತನು ಮದುವೆಯಾದ ಕೆಲವು ದಿನಗಳೊಳಗಾಗಿಯೇ ದೈವಯೋಗದಿಂದ ಸಾಯಲಾರನೇಕೆ ? ಆತನು ಮಡಿದ ಕೂಡಲೆ ನಾನು ನಿನ್ನನ್ನು ವಿವಾಹಮಾಡಿಕೊಂಡರೆ, ಆತನ ಐಶ್ವರ್ಯದಿಂದ ನಾವಿಬ್ಬರೂ ಯಾವಜ್ಜೀವವೂ ಸುಖವಾಗಿರಬಹುದು. ಈ ಯಭಿಪ್ರಾಯವನ್ನು ನಾನು ಮನದಲ್ಲಿಟ್ಟುಕೊಂಡೇ ವೃದ್ಧನನ್ನು ಬಲೆಯಲ್ಲಿ ಸಿಲುಕಿಸಿಕೊಂಡಿರುವೆನು. ನಂದಕುಮಾರ ! ನನ್ನ ಕುತಂತ್ರದ ಮರ್ಮವು ಈಗಲಾದರೂ ಅರ್ಥವಾಯಿತೇ ?

ನಂದ—ಅರ್ಥವಾಯಿತು. ನಿನ್ನಂತಹ ಭಯಂಕರ ರಮಣಿಯು ಹಿಂದೆ ಹುಟ್ಟಲಿಲ್ಲ, ಈಗ ಹುಟ್ಟುತ್ತಿಲ್ಲ, ಮುಂದೆಯೂ ಹುಟ್ಟುವ ಹಾಗಿಲ್ಲ. ಮದಯಂತಿ! ನನ್ನನ್ನು ಕ್ಷಮಿಸು. ನಿನ್ನ ಮನೋರಥವನ್ನು ನೆರವೇರಿಸುವುದಕ್ಕೆ ನನ್ನಿಂದ ಸಾಧ್ಯವಾಗಲಾರದು.

ಮದ—ಇದೆಯಲ್ಲವೇ ನಿನ್ನ ಪ್ರೇಮವೆಂಬುದು ?

ನಂದ—ಮದಯಂತಿ ! ನಿನ್ನನ್ನು ನಾನು ಪ್ರೀತಿಸುವೆನೆಂದು ನಿನಗೆ ಹೇಳಿದವರಾರು ? ನಿನ್ನಂತಹ ದುರ್ದಾಂತೆಯಾದ ರಮಣಿಯನ್ನು ಕೂಡಿ ಸುಖಪಡುವುದಕ್ಕಿಂತಲೂ ಮದುವೆಯಾಗದೆಯೇ ಏಕಾಕಿಯಾಗಿರುವುದು ಎಷ್ಟೋ ಮೇಲೆನಿಸುವುದು.

ಮದ—ನಂದಕುಮಾರ ! ನಿನ್ನ ಅಭಿಪ್ರಾಯವು ನನಗೆ ಈಗೀಗ ಅರ್ಥವಾಗುತ್ತಿರುವುದು; ನೀನು ಕುಂದನಂದಿನಿಯನ್ನು ಪ್ರೀತಿಸುತ್ತಿರುವೆ. ಅದಕ್ಕಾಗಿಯೇ ನೀನು ಅವಳಲ್ಲಿಗೆ ಹೋಗಿ ಅವಳ ಅಪ್ಪಣೆಯನ್ನು ಪಡೆದುಕೊಂಡು

ಹೊರಟು ಬರುತ್ತಿರುವೆ. ನಂದಕುಮಾರ! ಈಗಳಾದರೂ ಚೆನ್ನಾಗಿ ಪರ್ಯಾಲೋಚಿಸಿ ನನ್ನ ಇಷ್ಟಕ್ಕೆ ಒಡಂಬಡು. ಇಷ್ಟು ಬಗೆಯಲ್ಲಿ ನಾನು ಬೇಡಿಕೊಂಡುದರ ಮೇಲೂ ನೀನು ಹಠಹಿಡಿದು ನನ್ನನ್ನು ತಿರಸ್ಕರಿಸುವುದಾದರೆ, ನಿನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. ನನ್ನ ಆಗ್ರಹಕ್ಕೆ ಪಾತ್ರವೆನಿಸಿದ ಆವನೂ ಲೋಕದಲ್ಲಿ ಸುಖದಿಂದ ಬಾಳಿ ಬದುಕಿ ಹೆಸರ ಹೇಳಿಲ್ಲ, ಎಚ್ಚರಿಕೆ!

ನಂದ—ಮದಯಂತಿ! ನಿನ್ನ ಇಷ್ಟವಿದ್ದಂತೆ ನಡೆದು ಹೋಗಲಿ. ನಾನು ನಿನಗಾಗಿ ಕುಂದನಂದಿನಿಯನ್ನು ಪ್ರೀತಿಸದೇ ಬಿಡುವುದಿಲ್ಲ. ನಾನು ನಿನ್ನನ್ನು ಮನೋವಾಕ್ಕಾಯಕರ್ಮಗಳಿಂದಲೂ ದ್ವೇಷಿಸತಕ್ಕವನಾಗಿರುವೆನು.

ಮದ—ಹಾಗೆಯೇ ಆಗಲಿ. ಇಂದು ಮೊದಲು ನಾನು ನಿನಗೆ ಪರಮ ಶತ್ರುವೆಂದು ಅರಿತುಕೊಳ್ಳು. ನಂದಕುಮಾರ! ರಮಣಿಯ ಪ್ರತಿಹಿಂಸೆಯೆಂಬ ಬೆಂಕಿಯು ಒಂದು ಸಲ ಪ್ರಜ್ವಲಿತವಾಯಿತೆಂದರೆ, ಅದು ಸುಲಭಸಾಧ್ಯವಾಗಿ ಆರಿ ಹೋಗಲಾರದು. ಹುಡುಗನಾದ ನಿನಗೆ ಇನ್ನೂ ಇದರ ಅನುಭವವುಂಟಾಗಿಲ್ಲ. ದುಡುಕಬೇಡ, ದುಡುಕಬೇಡ, ಕಂಡೆಯಾ?

ನಂದ—ಮದಯಂತಿ! ನಿನ್ನ ಪಾಪದ ಮಾತನ್ನು ಸಾಕುಮಾಡು. ಬರಿಯ ಮಾತಿನಿಂದ ಏನೂ ಪ್ರಯೋಜನವಾಗಲಾರದು. ನಿನ್ನಿಂದ ಏನು ಸಾಧ್ಯವೋ ಅದನ್ನು ನೆರವೇರಿಸು, ಬೇಡವೆನ್ನುವರಾರು? ಇದರಿಂದ ನನಗಾಗುವ ಲಾಭನಷ್ಟಗಳಾದರೂ ಅಷ್ಟರಲ್ಲಿಯೇ ಇರುವುವು.

ನಂದಕುಮಾರನು ಹೀಗೆ ಹೇಳುತ್ತಾ ಮುಂದಕ್ಕೆ ಹೊರಟು ಹೋದನು. ಮದಯಂತಿಯು ಈತನನ್ನೇ ನೋಡುತ್ತಾ ಅಲ್ಲಿಯೇ ಕಲ್ಲಿನ ಬೊಂಬೆಯಂತೆ ಬಹು ಕಾಲದ ವರೆಗೂ ನಿಂತುಕೊಂಡಿದ್ದಳು. ಆಕೆಯ ಮುಖದಲ್ಲಿ ನಾನಾ ಭಾವಭಂಗಿಗಳು ನರ್ತನಮಾಡುತಿದ್ದುವು.

---

## ಎಂಟನೆಯ ಸಂಧಿ

### ಪ್ರಣಯ ಪಾಶ

ಮದಯಂತಿಯು ಬಲು ಹೊತ್ತು ನಂದಕುಮಾರನನ್ನು ನೋಡಿದ ಬಳಿಕ ಕಮಲಾಕಾಂತನ ಕೋಣೆಗೆ ಹೋಗಿ ಯಜಮಾನನನ್ನು ನೋಡಿದಳು. ಮದಯಂತಿಯು ಅಕಾಲದಲ್ಲಿ ತನ್ನ ಕೋಣೆಗೆ ಬಂದುದನ್ನು ನೋಡಿ, ಕಮಲಾಕಾಂತನು ಆಕೆಯನ್ನು ಕುರಿತು—ಏನು ಸಂಗತಿ, ಮದಯಂತಿ? ನಿನ್ನ ಮುಖವು ಇಷ್ಟು ಕಂಗೆಟ್ಟಿರುವುದಕ್ಕೆ ಕಾರಣವೇನು? ಎಂದು ಪ್ರಶ್ನೆಮಾಡಿದನು.

ಮದಯಂತಿಯು ಬಿಕ್ಕಿ ಬಿಕ್ಕಿ ಅಳುತ್ತಾ—ಪ್ರಭೂ! ನಾನು ಇಲ್ಲಿ ಒಂದು ಕ್ಷಣಕಾಲವೂ ಇರಲಾರೆನು. ಇಲ್ಲಿಂದ ಹೊರಟುಹೋಗುವುದಕ್ಕೆ ನನಗೆ ಅಪ್ಪಣೆಯನ್ನು ಕೊಡೋಣವಾಗಲಿ, ಎಂದುಸುರಿದಳು.

ವೃದ್ಧನು ಈ ಮಾತನ್ನು ಕೇಳಿ ಬೆಚ್ಚಿ ಬೆದರಿದವನಾಗಿ, ಮದಯಂತಿಯ ಗಲ್ಲವನ್ನು ಹಿಡಿದು—ಏನಾಗಿರುವುದು? ಬೇಗನೆ ತಿಳಿಸು. ನೀನು ಬಿಕ್ಕಿ ಬಿಕ್ಕಿ ಅಳಲು ಕಾರಣವೇನು? ಎಂದು ಕೇಳಿದನು.

ಮದ—ಪ್ರಭೂ! ನಿಮ್ಮ ನಂದಕುಮಾರನು ನನಗೆ ಮಾಡಿದ ಅಪಮಾನವನ್ನು ಸಹಿಸಲಾರೆನು. ನಾನು ಅದನ್ನು ಸ್ಮರಿಸಿಕೊಂಡರೆ, ನನ್ನ ಸರ್ವಾಂಗವೆಲ್ಲವೂ ಥರಥರನೆ ನಡುಗುವುದು. ಈಯಪಮಾನವನ್ನು ಸಹಿಸಿಕೊಂಡು ಬದುಕಿರುವುದಕ್ಕಿಂತಲೂ ಆತ್ಮಹತ್ಯೆಯನ್ನಾದರೂ ಮಾಡಿಕೊಂಡು ಸಾಯುವುದು ಮೇಲು.

ಕಮಲಾ—ಹಾಗೆಂದರೇನು? ನಿನಗೆ ಅಪಮಾನ ಮಾಡುವುದಕ್ಕೆ ಆತನಿಗೆ ಅಧಿಕಾರವೇನಿರುವುದು? ನಾನು ಆತನಿಗೆ ಮನೆಯನ್ನು ಬಿಟ್ಟು ಹೊರಟು ಹೋಗುವಂತೆ ಅಪ್ಪಣೆಮಾಡಿ ಎಷ್ಟೋ ಹೊತ್ತಾಯಿತಲ್ಲವೇ?

ಮದ—ನಾನು ಆತನನ್ನು ಕುರಿತು ಈ ವಿಷಯವನ್ನು ಮಾತನಾಡಿದುದೇ ತಪ್ಪಾಯಿತು. ತಾವು ನನ್ನಲ್ಲಿ ಪೂರ್ಣಕಟಾಕ್ಷವಿಟ್ಟು ನನ್ನನ್ನು ವಿವಾಹ ಮಾಡಿಕೊಳ್ಳುವ ವಿಷಯವನ್ನು ಆತನು ತಾನಾಗಿಯೇ ಎತ್ತಿಕೊಂಡು ನಮ್ಮಿಬ್ಬರನ್ನೂ ಪರಿಪರಿಯಾಗಿ ಹೀಯಾಳಿಸಿದನು. ನಾವಿಬ್ಬರೂ ಪತಿಪತ್ನಿಯರಾಗಿ ಸುಖವಾಗಿ ಬಾಳಿಕೊಂಡಿರುವುದು ಅವರಾರಿಗೂ ಇಷ್ಟವಿಲ್ಲವಂತೆ.

ಕಮಲಾ—ಅವರಿಗೆ ಇಷ್ಟವಿಲ್ಲದಿರಲು ಕಾರಣವೇನು?

ಮದ—ಕಾರಣವಿರುವುದು. ನಂದಕುಮಾರನು ನನ್ನನ್ನು ಮದುವೆಯಾಗಬೇಕಂತೆ, ಅದಕ್ಕಾಗಿ ಸಾಯುವ ಮುದುಕನು ಯುವತಿಯನ್ನು ವಿವಾಹ ಮಾಡಿಕೊಂಡು ಸುಖಪಡುವುದೇನೆಂದು ನನ್ನಿದಿರಿನಲ್ಲಿಯೇ ಬಗುಳಿದನು.

ಕಮಲಾ—ಹಾಗೆಯೇ! ನಾನೇ ಅವನ ಅಹಂಕಾರವನ್ನು ಮುರಿವೆನು. ಈಗಣ ಕಾಲದ ಹುಡುಗರು ತುಟಿ ಮೀರಿದ ಹಲ್ಲಾಗಿ ಹೋಗಿರುವರು. ಮದಯಂತಿ! ಇದಕ್ಕಾಗಿ ನೀನು ಅಳಬೇಡ. ಆ ವಿಷಯಗಳನ್ನು ನಾನೇ ನೋಡಿಕೊಳ್ಳುವೆನು.

ಮದ—ಪ್ರಿಯನೇ! ಎಷ್ಟಾದರೂ ಆತನು ತಮಗೆ ದೌಹಿತ್ರನು. ನಿಮ್ಮಿಬ್ಬರ ಸಂಬಂಧ ಬೇರೆ ತಪ್ಪತಕ್ಕುದಲ್ಲ. ನಾನು ಹೊಟ್ಟೆಗಾಗಿ ನಿಮ್ಮಲ್ಲಿ ಬಂದು ಸೇರಿಕೊಂಡಿರುವ ದೂರದ ಸಂಬಂಧಿನಿಯು. ನನಗಾಗಿ ತಾವು ಆತನನ್ನು ಅಗಡು ಮಾಡಿಕೊಳ್ಳುವುದು ಸರಿಯಲ್ಲ.

ಕಮಲಾ—ಪ್ರಿಯೆ! ಈ ವಿಷಯವಿಚಾರವದಂತಿರಲಿ. ಪ್ರಕೃತದ ಮಾತನಾಡುವ. ನಮ್ಮಿಬ್ಬರ ವಿವಾಹದ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

ಮದ—ನಾಥ! ತಾವು ಇಷ್ಟಪಡುವುದಾದರೆ, ತಮ್ಮ ಪಾದದಾಸಿಯಾದ ನನ್ನದೇನಿರುವುದು? ತಾವು ಆವಾಗಬೇಕಾದರೂ ನನ್ನನ್ನು ಉದ್ಧಾರಮಾಡಬಹುದು.

ಕಮಲಾ—ಪ್ರಿಯೆ! ನನಗೆ ಇಂದೇ ವಿವಾಹವಾಗಲು ಇಷ್ಟವು. ಮದಯಂತಿ! ನಾನಾದರೋ ಮುದುಕನು, ನೀನಿನ್ನೂ ನವನವೋನ್ಮಿಷತ್ತಾರುಣ್ಯದಿಂದ ತಳತಳಿಸುವ ಬೆಡಗಿನ ಯುವತಿ. ನಾನು ನಿನ್ನನ್ನು ಪ್ರೀತಿಸುವ ಹಾಗೆ ನೀನೂ ನನ್ನನ್ನು ಪ್ರೀತಿಸಬಲ್ಲೆಯಾ?

ಮದ—ಇದೆಂತಹ ಮಾತು? ನಾನು ತಮ್ಮನ್ನು ಪ್ರೀತಿಸದೇ ಇದ್ದಿದ್ದರೆ, ತಮ್ಮನ್ನು ವಿವಾಹ ಮಾಡಿಕೊಳ್ಳುವುದಕ್ಕೆ ಇಷ್ಟು ತಹತಹ ಪಡುತ್ತಿದ್ದೆನೇ? ಇದರಿಂದ ತಮ್ಮಲ್ಲಿ ನನ್ನ ಪ್ರೀತಿಯೆಂಬುದು ಎಷ್ಟರ ಮಟ್ಟಿನದೆಂದು ತಾವೇ ಊಹಿಸೋಣವಾಗಲಿ.

ಕಮಲಾಕಾಂತನು ಈ ಮಾತನ್ನು ಕೇಳಿದೊಡನೆಯೇ ಉದ್ದೀಪಿತನಾಗಿ ಸುತ್ತಲೂ ನೋಡಿ ಮದಯಂತಿಯನ್ನು ಅಪ್ಪಿಕೊಂಡು ಆಕೆಯ ಕಪೋಲಗಳನ್ನು ಒಂದೆರಡು ಸಲ ಚುಂಬಿಸಿ ಬಿಟ್ಟನು. ಮದಯಂತಿಯು ತನ್ನ ಕೌಶಲವು ಫಲಿಸಿತೆಂದು ತನ್ನೊಳಗೆ ತಾನೇ ನಕ್ಕುಬಿಟ್ಟಳು.

ಇಷ್ಟು ನಡೆದು ಹೋಗುವುದರೊಳಗಾಗಿ, ಕುಂದನಂದಿನಿಯು ಬಾಗಿಲನ್ನು ತೆರೆದುಕೊಂಡು ಕಮಲಾಕಾಂತನ ಕೋಣೆಯೊಳಗೆ ಪ್ರವೇಶಮಾಡಿದಳು. ಪ್ರವೇಶ ಮಾಡಿದ ಕೂಡಲೆ ಮದಯಂತೀಕಮಲಾಕಾಂತರು ಒಂದೆಡೆಯಲ್ಲಿದ್ದುದನ್ನು ನೋಡಿ ಕುಂದನಂದಿನಿಯು ನಾಚುಗೆಯಿಂದಲೂ ಭಯದಿಂದಲೂ ತಲೆವಾಗಿದವಳಾಗಿ, ಮಾಡಬಾರದ ಕೆಲಸವನ್ನು ಮಾಡಿದುದಕ್ಕಾಗಿ ಪಶ್ಚಾತ್ತಾಪಗೊಂಡು ಒಂದು ಕ್ಷಣಕಾಲವೂ ಅಲ್ಲಿ ನಿಲ್ಲದೆಯೇ ಹೊರಗೆ ಹೊರಟು ಬಂದುಬಿಟ್ಟಳು. ಕಮಲಾಕಾಂತನು ಓಡಿಹೋಗುತ್ತಿದ್ದ ಕುಂದನಂದಿನಿಯನ್ನು ಕರೆದು—ಮಗು

ಏತಕ್ಕೆ ನೀನು ಹೀಗೆ ಓಡಿಹೋಗುವೆ? ನಿನಗೊಂದು ಹೊಸ ಸುದ್ದಿಯನ್ನು ಹೇಳಬೇಕೆಂದಿದ್ದೆನು. ಅಷ್ಟು ಹೊತ್ತಿಗೆ ಸರಿಯಾಗಿ ನೀನೇ ಬಂದೆ. ನೀನು ಬಂದುದು ಒಳ್ಳೆಯದೇ ಆಯಿತು. ಕುಂದ! ನಾನು ಇಷ್ಟರಲ್ಲಿಯೇ ಈ ಮದಯಂತಿಯನ್ನು ವಿವಾಹವಾಗಬೇಕೆಂದು ನಿಶ್ಚಯಮಾಡಿರುವೆನು, ಎಂದನು.

ಕುಂದನಂದಿನಿಯು ಕಾತರ ಸ್ವರದಿಂದ—ಪಿತನೆ! ಈ ವಯಸ್ಸಿನಲ್ಲಿ ವಿವಾಹವೇ? ಎಂದಳು.

ಕಮಲಾ—ಆಗಬಾರದೇತಕೆ? ನಾನು ವಿವಾಹ ಮಾಡಿಕೊಳ್ಳದಿದ್ದರೆ, ಈ ಮುದಿತನದಲ್ಲಿ ನನ್ನ ಯೋಗಕ್ಷೇಮವನ್ನು ನೋಡುವವರಾರು?

ಕುಂದ—ತಮ್ಮ ಸೇವೆಗೆ ನಾನಿರುವೆನು. ತಮ್ಮ ಪೌತ್ರದೌಹಿತ್ರರಿಗೆ ತಾವು ವಿವಾಹಮಾಡುವುದಾದರೆ, ಅವರ ಹೆಂಡಿರೂ ತಮ್ಮ ಸೇವೆಗಾಗಿ ಕಾದುಬಿದ್ದಿರುವರು. ತಮ್ಮ ಸೇವೆಮಾಡುವವರಿಗೆ ಕಡಮೆಯೇನು?

ಕಮಲಾ—ನೀವುಗಳೆಲ್ಲರೂ ಸ್ವಾರ್ಥಪರಾಯಣರು. ನಿಮ್ಮಗಳ ಪ್ರೀತಿ ವಿಶ್ವಾಸಗಳೆಲ್ಲವೂ ನನ್ನ ಹಣದ ಮೇಲೆಯೇ ಹೊರತು ನನ್ನ ಮೇಲಿಲ್ಲ. ನೀವು ನನ್ನನ್ನು ಸೇವಿಸುವುದೆಂಬುದು ಅಭಿಮಾನದ ಮಾತಲ್ಲ, ಅದು ನಿಮ್ಮ ತುದಿ ನಾಲಗೆಯ ಮಾತು. ಆದುದರಿಂದ ನಾನು ನಿಮ್ಮನ್ನು ಎಂದಿಗೂ ನಂಬಲಾರೆನು. ಮದಯಂತಿಯು ಮುದುಕನನ್ನು ಪ್ರೀತಿಸಬೇಕಾದರೆ ಅವಳಿಗೆ ನನ್ನಲ್ಲಿ ಎಷ್ಟು ಪ್ರೀತಿ ವಿಶ್ವಾಸಗಳಿರಬೇಕು! ಇಂತಹ ವಿಶ್ವಾಸಗಳು ಹೇಳಿಕೊಟ್ಟರೆ ಬರತಕ್ಕುವಲ್ಲ. ನಿಷ್ಕಾರಣವಾದ ಇಂತಹ ವಿಶ್ವಾಸಕ್ಕೆ ಗಣೆಯಂತಿರುವ ಮದಯಂತಿಯೆಲ್ಲಿ? ಹಣಕ್ಕಾಗಿ ನನ್ನನ್ನು ಹೊಂದಿಕೊಂಡಿರುವ ಕೃತ್ರಿಮದ ವಿಶ್ವಾಸವನ್ನು ನಟನೆ ಮಾಡುವ ನೀವುಗಳೆಲ್ಲಿ? ಮದಯಂತಿಯು ನನ್ನ ಹಿತಕ್ಕಾಗಿಯೇ ದೇವಲೋಕದಿಂದ ಇಳಿದು ಬಂದಿರುವ ಪರದೇವತೆಯೇ ಆಗಿರುವಳು. ಆಕೆಗೆ ನನ್ನ ಹಣದ ಮೇಲೆ ಕಿಂಚಿತ್ತಾದರೂ ಆಸೆಯೆಂಬುದೇ ಇಲ್ಲ. ಆಕೆಯು ನನ್ನನ್ನು ತನ್ನ ಸರ್ವಸ್ವವೆಂದೇ ತಿಳಿದಿರುವಳು. ಇಂತಹ ಮದಯಂತಿಯನ್ನು ನಾನು ವಿವಾಹ ಮಾಡಿಕೊಂಡು ಸುಖವಾಗಿ ಬಾಳುವುದು ನಿಮಗೆ ಇಷ್ಟವಿಲ್ಲವೆಂದ ಮೇಲೆ, ನೀವುಗಳೆಲ್ಲರೂ ನನ್ನ ಭಾಗಕ್ಕೆ ಶತ್ರುಗಳೇ ಸರಿ. ಒಬ್ಬನು ಈ ಮಾತುಗಳನ್ನಾಡಿ ಮನೆಯನ್ನು ಬಿಟ್ಟು ಹೊರಟುಹೋಗಬೇಕಾಯಿತು. ಕುಂದ! ನೀನು ಎಚ್ಚರಿಕೆಯಿಂದ ಇರು. ಅಡಿಗಡಿಗೂ ನನ್ನ ಕೆಲಸದಲ್ಲಿ ನೀವು ಆಕ್ಷೇಪಣೆಯನ್ನು ಮಾಡುವುದಾದರೆ, ನಿಮ್ಮೆಲ್ಲರನ್ನೂ ಮನೆಯಿಂದ ಒದ್ದೋಡಿಸಿಬಿಡುವೆನು.

ಕುಂದ— ಇದೇನಚ್ಚರಿ! ನಾನು ಆರಾರನ್ನೋ ತಾಯಿಯೆಂದು ಸಂಬೋಧಿಸುತ್ತಾ ಕಾಲಕಳೆವ ಹೊತ್ತು ಬಂದಿತಲ್ಲಾ! ಹಾ ದೈವವೇ! ನಿನಗೆ ಕಣ್ಣಿದೆಯೇ? ಕಣ್ಣಿದ್ದರೂ ವಿವೇಕ ವಿದೆಯೇ?

ಮದಯಂತಿಯು ಕುಂದನಂದಿನಿಯ ಮಾತನ್ನು ಕೇಳಿ ನಕ್ಕವಳಾಗಿ ಯಜಮಾನನನ್ನು ಕುರಿತು—ಪ್ರಾಣಕಾಂತ! ಕುಂದನಂದಿನಿಗೆ ತಾವು ಆವ ಪ್ರತ್ಯುತ್ತರವನ್ನೂ ಕೊಡಬೇಕಾದುದಿಲ್ಲ. ತಾವು ಕೊಂಚ ಹೊತ್ತು ಬೇರೆಯ ಕಡೆಗೆ ತೆರಳೋಣವಾಗಲಿ. ನಾನು ಕುಂದಳನ್ನು ಒಪ್ಪಿಸುವೆನು, ಎಂದು ವಿಲಾಸದಿಂದ ಮಾತನಾಡಿದಳು.

ಅದರಂತೆಯೇ ಕಮಲಾಕಾಂತನು ಆ ಕೋಣೆಯನ್ನು ಬಿಟ್ಟು ಬೇರೆಯ ಕಡೆಗೆ ಹೊರಟುಹೋದನು. ಬಳಿಕ ಮದಯಂತಿಯು ಕುಂದಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಮಾತನಾಡಿದಳು:—

"ಮಗು! ನಿನ್ನ ತಂದೆಯು ನನ್ನನ್ನು ಮದುವೆಯಾಗಬೇಕೆಂದು ಬಯಸಿರುವರು. ನೀನು ಎಷ್ಟು ಬಗೆಯಲ್ಲಿ ಅಡ್ಡಿಯನ್ನು ತಂದೊಡ್ಡಿದರೂ, ಆತನು ಹಿಂದಿರುಗುವ ಹಾಗಿಲ್ಲ. ನನ್ನನ್ನು ಕಂಡರೆ ನಿನಗೆ ಸರಿಬೀಳುವುದಿಲ್ಲವೆಂಬುದನ್ನು ನಾನು ಚೆನ್ನಾಗಿಯೂ ಬಲ್ಲೆನು. ಅದರಿಂದ ನನಗೇನೂ ನಷ್ಟವಿಲ್ಲ. ಯಜಮಾನನು ನನ್ನ ಕೈಹಿಡಿಯುವಾಗ, ನಿಮ್ಮಗಳಿಂದಾಗುವುದೇನು? ನಾನು ಇಷ್ಟರಲ್ಲಿಯೇ ಈ ಮನೆಗೆ ಯಜಮಾನನ ದಯೆಯಿಂದ ಯಜಮಾನಿಯಾದೇನು. ಬಳಿಕ ನೀವುಗಳೆಲ್ಲರೂ ನಾನು ಹೇಳಿದಂತೆ ಕೇಳಿಕೊಂಡು ಇರಬೇಕಾಗುವುದು."

ಕುಂದನಂದಿನಿಯು ಕೋಪಸೂಚಕವಾದ ಸ್ವರದಿಂದ—ಏನ ಹೇಳಿದೆ? ನೀನು ಹೇಳಿದಂತೆ ನಾವುಗಳು ಕೇಳಿಕೊಂಡು ಇಲ್ಲಿರಬೇಕಲ್ಲವೇ? ಅದೆಂದಿಗೂ ಅಸಂಭವವು. ಹಾಗೆ ಬದುಕುವುದಕ್ಕಿಂತಲೂ ನನಗೆ ಮರಣವೇ ಲೇಸು. ನಾನು ಇಷ್ಟು ದಿನಗಳು ಸ್ವತಂತ್ರೆಯಾಗಿದ್ದು, ಇನ್ನು ಮೇಲೆ ನಿನ್ನ ಅಧೀನೆಯಾಗಿರುವುದು ಸಾಧ್ಯವಲ್ಲ, ಎಂದಳು.

ಮದ—ಮಗು! ಕೋಪಮಾಡಬೇಡವಮ್ಮ. ಈ ಮನೆಯಲ್ಲಿ ನಿನಗೆ ಸ್ವಾತಂತ್ರ್ಯವೆಂದರೇನು? ಸ್ವಂತ ಮಗಳಿಗೇ ಅಧಿಕಾರವಿಲ್ಲದಿರುವಾಗ, ಸಾಕು ಮಗಳಿಗೆ ಅಧಿಕಾರವು ಅದೆಲ್ಲಿಂದ ಬರಬೇಕೋ ನಾನು ಕಾಣೆನು.

ಕುಂದ—ಈ ಮನೆಯಲ್ಲಿ ನಿನಗಿಂತಲೂ ನನಗೆ ಹೆಚ್ಚಿನ ಅಧಿಕಾರವೇ ಇರುವುದು. ಇದು ನಿನಗೆ ತಿಳಿದ ವಿಷಯವೇ ಆಗಿರುವುದು.

ಮದ—ಹಿಂದೆ ನಿನಗೆ ಅಧಿಕಾರವಿದ್ದಿತು, ಅದನ್ನು ಇಲ್ಲವೆನ್ನುವರಾರು? ಈಗಳಾದರೋ ನನಗೇ ಸಂಪೂರ್ಣವಾದ ಅಧಿಕಾರವಿರುವುದು. ಅದನ್ನು ತಪ್ಪಿಸುವುದಕ್ಕೆ ಆರಿಂದಲೂ ಸಾಧ್ಯವಿಲ್ಲ. ಕುಂದ! ಈ ಅಧಿಕಾರದ ಮಾತಿನಿಂದ ಪ್ರಯೋಜನವಿಲ್ಲ. ನಾವಿಬ್ಬರೂ ಒಂದಾಗಿ ಸೇರಿಕೊಂಡು ಕಾಲವನ್ನು ಕಳೆಯೋಣ. ನಿನಗೆ ಇದು ಸಮ್ಮತವಿಲ್ಲದಿರುವುದಾದರೆ, ನೀನೂ ನಂದಕುಮಾರನ ಗತಿಯನ್ನೇ ಹೊಂದುವೆ.

ಕುಂದನಂದಿನಿಯು ಈ ಮಾತಿನ ಮರ್ಮವನ್ನು ಕಂಡುಕೊಂಡಳು. ಕೂಡಲೆಯೇ ಅವಳ ಕಣ್ಣುಗಳಿಂದ ಒಂದೆರಡು ತೊಟ್ಟು ನೀರು ಉದುರಿತು. ಆಕೆಯು ಮದಯಂತಿಯ ಮಾತಿಗೆ ಆವ ಉತ್ತರವನ್ನೂ ಕೊಡಲಾರದೇ ಹೋದಳು. ಕುಂದನಂದಿನಿಯ ಈಯವಸ್ಥೆಯನ್ನು ನೋಡಿ, ಮದಯಂತಿಯು ಅತಿವಿನಯದಿಂದ—ಕುಂದ! ನನ್ನ ಮಾತನ್ನು ಕೇಳು, ಯಜಮಾನನು ಮನಬಂದಂತೆ ಮಾಡಿಕೊಳ್ಳಲಿ. ನೀನೂ ಅಂತರ್ಯದಲ್ಲಿ ನನ್ನನ್ನು ಎಷ್ಟು ಬೇಕಾದರೂ ದ್ವೇಷಿಸು, ಆದರೆ ಹೊರಗೆ ಮಟ್ಟಿಗೆ ಪ್ರಕಾಶಪಡಿಸಬೇಡ, ಕಂಡೆಯಾ? ನಮ್ಮಗಳ ಗುಟ್ಟು ರಟ್ಟಾಗದಿರಬೇಕೆಂಬುದೇ ನನ್ನ ಆಸೆ. ಏನ ಹೇಳುವೆ, ಕುಂದನಂದಿನಿ? ಎಂದು ಪ್ರಶ್ನೆಮಾಡಿದಳು.

ಕುಂದನಂದಿನಿಯು ದೂರದ ಆಲೋಚನೆಯನ್ನು ಮಾಡಿದವಳಾಗಿ ತನ್ನ ಕಣ್ಣುಗಳಲ್ಲಿ ನೀರನ್ನು ತಂದುಕೊಂಡು—ಮದಯಂತಿ! ನಾನು ಹೇಳುವುದೇನಿರುವುದು? ನಂದಕುಮಾರನು ಗಂಡಸು. ಹೊರಗೆ ಹೋದರೂ ಆತನಿಗೇನೂ ಭಯವಿಲ್ಲ. ಆತನು ಹೇಗಾದರೂ ಮಾಡಿ ತನ್ನ ಹೊಟ್ಟೆಯನ್ನು ಹೊರೆದುಕೊಳ್ಳಬಲ್ಲನು. ನಾನಾದರೋ ಕಯ್ಯಲ್ಲಾಗದ ಹೆಣ್ಣು ಹೆಂಗುಸು. ನನ್ನನ್ನು ನೀನು ಹೊರಡಿಸಿ ಬಿಡುವುದಾದರೆ, ನನ್ನ ಗತಿಯೇನು? ನನ್ನನ್ನು ಇಂದಿನ ವರೆಗೂ ಲಾಲನ ಪಾಲನ ಮಾಡಿದವರು ಈಗ ಸ್ವರ್ಗದಲ್ಲಿ ಸುಖದಿಂದಿರುವರು. ಅಂತಹವರನ್ನು ಕಳೆದುಕೊಂಡ ಮೇಲೆ ನನಗೆ ಬಲವೆಲ್ಲಿಯದು? ಇದೆಲ್ಲವನ್ನೂ ಪರ್ಯಾಲೋಚಿಸಿ ನೋಡಿದಲ್ಲಿ, ನಾನು ನಿನ್ನಿಷ್ಟದಂತೆಯೇ ನಡೆದುಕೊಳ್ಳಬೇಕಾಗಿರುವುದು, ಬೇರೆಯ ಮಾರ್ಗವಿಲ್ಲ. ನಾನು ತಂದೆಗೆ ಪ್ರತಿಯಾಡಿದುದಕ್ಕಾಗಿ ಆತನ ಕ್ಷಮೆಯನ್ನು ಬೇಡುವೆನು. ನಾನು ನನ್ನ ಯೋಗ್ಯತೆಗೆ ಬಾರದ ಮಾತುಗಳನ್ನಾಡಿದೆನು. ಇದು ಚಿಕ್ಕವರು ಮಾಡತಕ್ಕ ಕೆಲಸವಲ್ಲ. ವಿವೇಕವಿಲ್ಲದೆಯೇ ನಾನು ಇಷ್ಟು ದೂರ ಸರಿದು ಬಂದುದಕ್ಕಾಗಿ, ಮದಯಂತಿ! ನೀನು ಯಜಮಾನನಲ್ಲಿ ನನಗಾಗಿ ಕ್ಷಮೆಯನ್ನು ಪ್ರಾರ್ಥಿಸು; ನಾನು ನಿಶ್ಚಿಂತೆಯಾದೇನು.

---

## ಒಂಬತ್ತನೆಯ ಸಂಧಿ

### ಕಳ್ಳರ ಕಯ್ಯಲ್ಲಿ

ರಾತ್ರಿಯ ಕಾಲ; ಪ್ರಾಯಿಕವಾಗಿ ಎಂಟು ಗಂಟೆಯು ಹೊಡೆಯುವ ಹೊತ್ತಾಗಿರುವುದು. ಅಷ್ಟು ಹೊತ್ತಿಗೆ ಸರಿಯಾಗಿ ಪರಂತಪನು ತನ್ನ ಬಟ್ಟೆಯ ಅಂಗಡಿಗೆ ಬಂದು ಆದಿನದ ಆಯವ್ಯಯವನ್ನು ಲೆಕ್ಕದಲ್ಲಿ ಬರೆದಿಟ್ಟುಕೊಳ್ಳುತ್ತಿದ್ದನು. ಆಗ ಹುಡುಗನೊಬ್ಬನು ಬಂದು, ಒಂದು ಪತ್ರವನ್ನು ಪರಂತಪನ ಕೈಗೆ ಕೊಟ್ಟನು. ಪರಂತಪನು ಆ ಹುಡುಗನಿಗೆ ಪುರಸ್ಕಾರಮಾಡಿ ಕಳುಹಿಸಿ ಪತ್ರವನ್ನು ಬಿಚ್ಚಿ ಓದಲಾರಂಭಿಸಿದನು :—

ಪತ್ರ.

ಪರಂತಪ ಮಹಾಶಯ !

ನಾನು ಭಯಂಕರರಾದ ಕೆಲವು ಕೊಲೆಪಾತಕರ ಅನ್ವೇಷಣದಲ್ಲಿ ಮುಂದುವರಿದಿರುವೆನು. ನನ್ನೊಬ್ಬನಿಂದ ಈ ಕೆಲಸವು ನೆರವೇರುವ ಸಂಭವವಿಲ್ಲ. ನಿನಗೆ ಅವಕಾಶವಿದ್ದು ಪತ್ತೇದಾರಿಯ ವಿಷಯದಲ್ಲಿ ಮೊದಲಿನಂತೆ ಅಭಿಮಾನವಿರುವುದಾದರೆ, ತಡಮಾಡದೆ ಈ ಪತ್ರ ತಲಪಿದ ಕೂಡಲೆ ರಾಮುಗೋಪಾಲ ಗಲ್ಲಿಯ ೩೫ನೆಯ ನಂಬರಿನ ಮನೆಗೆ ಬರತಕ್ಕುದು. ನೀನು ಏಕಾಕಿಯಾಗಿ ಬರುವುದರಿಂದ ತುಂಬಾ ಪ್ರಯೋಜನವುಂಟು. ಪ್ರಸಿದ್ಧನಾದ ಪತ್ತೇದಾರನಿಗೆ ಹೆಚ್ಚಿಗೆ ಹೇಳತಕ್ಕುದೇನಿರುವುದು ?

ಈ ವಿಷಯವು ಗೋಪ್ಯದಲ್ಲಿರಲಿ,

ತಮ್ಮ ವಿಧೇಯ, ಅನಂತರತ್ನ,

ಕಾಲಾಂಜನ.

ಕಾಲಾಂಜನದ ಅನಂತರತ್ನನೆಂಬ ಸರಕಾರದ ಪತ್ತೇದಾರನಿಗೂ ನಮ್ಮ ಪರಂತಪನಿಗೂ ವಿಶೇಷವಾಗಿ ಋಣಾನುಬಂಧವಿದ್ದಿತು. ಅನಂತರತ್ನನು ಆಗಿಂದಾಗ ಪರಂತಪನ ಸಾಹಾಯ್ಯವನ್ನು ಬಯಸಿ ಸರಕಾರದಲ್ಲಿ ಖ್ಯಾತಿಯನ್ನು ಪಡೆದುಕೊಂಡಿದ್ದನು. ಪರಂತಪನು ಅನಂತರತ್ನನ ಪತ್ರವನ್ನು ನೋಡಿದ ಕೂಡಲೆ ತನ್ನ ಮಿತ್ರನಿಗೆ ಅಪಾಯವು ಸಂಭವಿಸಿರಬೇಕೆಂದೆಣಿಸಿ ಮನೆಯಿಂದ ಹೊರ ಹೊರಟನು. ಯಥಾ ಸಮಯದಲ್ಲಿ ಪರಂತಪನು ಕಾಲಾಂಜನದ ರಾಮುಗೋಪಾಲ ಗಲ್ಲಿಯಲ್ಲಿನ ೩೫ನೆಯ ನಂಬರುಳ್ಳ ಮನೆಯ ಬಳಿಗೆ ಬಂದು ನೋಡಿದನು,

ಮನೆಯು ನಾಲ್ಕು ಅಂತಸ್ತುಗಳುಳ್ಳ ದೊಡ್ಡ ಉಪ್ಪರಿಗೆಯ ಮನೆಯಾಗಿದ್ದಿತು. ಪರಂತಪನು ಬಾಗಿಲಲ್ಲಿ ನಿಂತು ನೋಡುತ್ತಿರುವಲ್ಲಿ, ಸೇವಕನೊಬ್ಬನು ಹೊರಗೆ ಬಂದು—ಸ್ವಾಮಿಾ! ಶ್ರೀಯುತ ಪರಂತಪ ಮಹಾಶಯರು ತಾವೆಯಲ್ಲವೇ? ಎಂದು ಪ್ರಶ್ನೆಮಾಡಿದನು.

ಪರಂತಪ—ಅದೇ ನನ್ನ ಹೆಸರು. ಅನಂತರತ್ನ ಮಹಾಶಯರು ಇಲ್ಲಿರುವರೇ?

ಸೇವಕ—ಇಲ್ಲಿಯೇ ಇರುವರು; ಅವರು ತಮ್ಮ ಆಗಮನವನ್ನೇ ನಿರೀಕ್ಷಿಸುತ್ತಿರುವರು.

ಪರಂ—ನನ್ನನ್ನು ಅವರ ಬಳಿಗೆ ಕರೆದುಕೊಂಡು ಹೋಗುವೆಯಾ?

ಸೇವಕ—ಅಪ್ಪಣೆ.

ಸೇವಕನು ಹೀಗೆ ಹೇಳಿ ಮುಂದೆ ಮುಂದೆ ಹೊರಟನು. ಪರಂತಪನು ಆತನ ಹಿಂದೆ ಹಿಂದೆಯೇ ಮೌನದಿಂದ ತೆರಳಿದನು. ಪರಂತಪನು ಮೂರನೆಯ ಅಂತಸ್ತನ್ನು ಸೇರುತ್ತಿರುವಷ್ಟರಲ್ಲಿಯೇ ಹಿಂಗಡೆಯಿಂದ ಇಬ್ಬರು ನಿಶ್ಶಬ್ದವಾಗಿ ಬಂದು ಪರಂತಪನನ್ನು ಆಕ್ರಮಣಮಾಡಿದರು. ಪರಂತಪನು ಬಲಿಷ್ಠನೂ ಅಸಮ ಸಾಹಸಿಯೂ ಆಗಿದ್ದುದರಿಂದ ಅವರಿಬ್ಬರೊಡನೆ ಬಲು ಹೊತ್ತು ಹೋರಾಡಿದನು. ಆದರೂ ಪ್ರಯೋಜನವಾಗದೆ ಕಟ್ಟಕಡೆಗೆ ಅವರಿಬ್ಬರಿಗೆ ಬಂದಿಯಾಗಿಬಿಟ್ಟನು.

ಪರಂತಪನು ಮೊದ ಮೊದಲು ಹೋರಾಟದಲ್ಲಿ ತನ್ನನ್ನು ಆಕ್ರಮಣ ಮಾಡಿದವರಾರೆಂಬುದನ್ನು ಅರಿಯದೇ ಹೋದನು. ಬಳಿಕ ಆ ಅಂತಸ್ತಿನ ಅಸ್ಫುಟವಾದ ಬೆಳಕಿನಲ್ಲಿ ಆ ವ್ಯಕ್ತಿಗಳ ರೂಪವು ಗೋಚರಕ್ಕೆ ಬಂದಿತು. ಕೂಡಲೆಯೇ ಪರಂತಪನು ತನ್ನ ಪ್ರಾಣದ ಮೇಲಣ ಆಸೆಯನ್ನು ತ್ಯಾಗಮಾಡಿಬಿಟ್ಟನು. ಆಗ ಅವನ ಮನದಲ್ಲಿ ಹೊಳೆದುದೇನೆಂದರೆ—

"ಕಳ್ಳರು ತನ್ನನ್ನು ವಿಪತ್ತಿನಲ್ಲಿ ಸಿಲುಕಿಸುವುದಕ್ಕಾಗಿ ಈ ಹೂಟವನ್ನು ಹೂಡಿರುವರು. ಅನಂತರತ್ನನು ನನಗೆ ಮಿತ್ರನೆಂದು ತಿಳಿದು ಆತನು ಬರೆದ ಹಾಗೆಯೇ ಒಂದು ಪತ್ರವನ್ನು ನನಗೆ ಬರೆದಿರುವರು. ಹಿಂದೆ ಆವ ಕಳ್ಳರು ನನ್ನ ಪೆಟ್ಟನಿಂದ ಅಚೇತನರಾಗಿ ಮರಕ್ಕೆ ಬಿಗಿಯಲ್ಪಟ್ಟಿದ್ದರೋ ಅವರೇ ಕೌಶಲದಿಂದ ಮುಯ್ಯಿಗೆ ಮುಯ್ಯಿಮಾಡಬೇಕೆಂದೆಣಿಸಿ ನನ್ನನ್ನು ಬಲೆಯಲ್ಲಿ ಸಿಲುಕಿಸಿಕೊಂಡಿರುವರು. ಇವರಿಂದ ನಾನು ಮುಕ್ತಿಲಾಭವನ್ನು ಪಡೆವುದು ಅಸಾಧ್ಯವು. ನಾನು ಈ ಸಲ ಪ್ರಾಣದಿಂದುಳಿದರೆ, ಮತ್ತೆ ಮಾತೃಗರ್ಭದಿಂದ ಬಂದಂತೆಯೇ

ಸರಿ. ಪ್ರಾಣಾಪತ್ತಿನ ಕಾಲಗಳಲ್ಲಿ ಎದೆಗೆಡುವುದು ಧೀರನ ಲಕ್ಷಣವಲ್ಲ. ಈ ಸಮಯದಲ್ಲಿ ನಾನು ಹೇಡಿಯಂತೆ ವರ್ತಿಸುವುದಾದರೆ, ನನ್ನ ಪರಿಣಾಮವು ಸುಮುಖವಾಗಲಾರದು."

ಪ್ರಿಯಪಾಠಕ ಮಹಾಶಯ! ಈ ಕಳ್ಳರು ನಿಮಗೆ ಪೂರ್ವಪರಿಚಿತರು. ಇವರೇ ಭೂತನಾಥ, ವೀರಭದ್ರ, ಕಾಲರುದ್ರರೆಂಬುವರು. ಈ ಮೂವರೂ ಸೇರಿ ಕೊಂಡು ಪರಂತಪನ ಕೈಕಾಲುಗಳನ್ನು ಅಲುಗಾಡದ ಹಾಗೆ ಹಗ್ಗದಿಂದ ಬಿಗಿದು ಆತನನ್ನು ಒಂದೆಡೆಯಲ್ಲಿ ನೆಲದ ಮೇಲೆ ಉರುಳಿಸಿದರು. ಪರಂತಪನು ಕೇವಲ ಪರಾಧೀನನಾಗಿ ಕಳ್ಳರನ್ನು ಕುರಿತು—ನನ್ನನ್ನು ನೀವು ಹೀಗೆ ಬಂಧಿಸಲು ಕಾರಣ ವೇನು? ನಿಮ್ಮ ಪರಮೋದ್ದೇಶವಾದರೂ ಏನು? ಎಂದು ಗಂಭೀರ ಸ್ವರದಿಂದ ಮಾತನಾಡಿದನು.

ಭೂತನಾಥನು ಮುಗುಳು ನಗೆಯನ್ನು ನಕ್ಕು—ನಮ್ಮ ಉದ್ದೇಶವಾದರೋ ಬಲು ಭಯಂಕರವಾದುದು. ಒಂದು ದಿನ ನೀನು ನಮ್ಮನ್ನು ನಿರ್ಬಂಧ ಪಡಿಸಿದುದಕ್ಕಾಗಿ, ಇಂದು ನೀನು ನಮ್ಮಿಂದ ನಿರ್ಬಂಧ ಪಡಿಸಲ್ಪಟ್ಟಿರುವೆ. ನಾವುಗಳು ನಿನ್ನನ್ನು ಹೆದರಿಸುವುದಕ್ಕಾಗಿ ಹೀಗೆ ಮಾಡಿರಬಹುದೆಂದು ನೀನು ತಿಳಿದಿರಬಹುದು. ಅಂತಹ ತಿಳಿವಳಿಕೆಯು ನಿನಗಿರುವುದಾದರೆ, ಅದು ಶುದ್ಧವಾಗಿ ಯೂ ಸುಳ್ಳಾದುದು. ನಿನಗೆ ಸರ್ವಪ್ರಕಾರದಿಂದಲೂ ಸರ್ವನಾಶವನ್ನುಂಟು ಮಾಡಬೇಕೆಂಬುದೇ ನಮ್ಮ ಪರಮಧ್ಯೇಯವು, ಎಂದುಸುರಿದನು.

ಪರಂತಪನು ಕಳ್ಳರ ಬಾಯಿಂದ ಈಯುತ್ತರವೇ ಬರುವುದೆಂದು ಚೆನ್ನಾಗಿ ಯೂ ಅರಿತುಕೊಂಡಿದ್ದನು. ಆದರೂ ಪರಂತಪನು ಮತ್ತೆ ಅವರನ್ನು ಕುರಿತು— ನೀವುಗಳು ಸತ್ಯವನ್ನೇ ನುಡಿದುದಕ್ಕಾಗಿ ನನಗೆ ಪರಮಾನಂದವಾದುದು. ಈಗ ನನ್ನನ್ನು ನೀವು ಏನ ಮಾಡುವಿರಿ? ಎಂದು ಕೇಳಿದನು.

ಭೂತನಾಥ—ನಿನ್ನನ್ನು ಇಲ್ಲಿಯೇ ಕೊಲ್ಲುವೆವು. ಉಪಾಯದಿಂದ ತಪ್ಪಿಸಿಕೊಂಡು ಹೋಗುವೆನೆಂದು ಮಟ್ಟಿಗೆ ನೀನು ತಿಳಿಯಬೇಡ, ಕಂಡೆಯಾ?

ಪರಂತಪ—ಹಾಗಾದರೆ ಇಷ್ಟು ಪ್ರಯತ್ನವೇತಕೆ? ಕತ್ತಿಯಿಂದ ತಲೆ ಯನ್ನು ಕತ್ತರಿಸಿ ಹಾಕಬಹುದು—ಇಲ್ಲವೇ, ಗುಂಡಿನಿಂದ ಒಂದೇ ಪೆಟ್ಟಿಗೆ ಕೊಂದುಹಾಕಿಬಿಡಬಹುದು. ಅಸಹಾಯನಾದ ನನ್ನನ್ನು ಕೊಲ್ಲುವುದಕ್ಕೆ ಇಷ್ಟು ಅಸಾಧ್ಯವಾದ ಪ್ರಯತ್ನಪಡಬೇಕಾದುದೇನಿರುವುದು?

ಭೂತ—ನಿನ್ನನ್ನು ಕೊಲ್ಲುವುದೇನೋ ಸಿದ್ಧಾಂತವಾದುದು. ನಿನ್ನನ್ನು ಕತ್ತಿಯಿಂದಾಗಲೀ, ಗುಂಡಿನಿಂದಾಗಲೀ ಕೊಲ್ಲುವುದಕ್ಕೆ ನಮಗೆ ಇಷ್ಟವಿಲ್ಲ. ಒಂದೊಂದು ಮರ್ಮಸ್ಥಾನದಲ್ಲಿಯೂ ವರ್ಣನಾತೀತವಾದ ಚಿತ್ರಹಿಂಸೆಯನ್ನು ಮಾಡಿ ನಿನ್ನನ್ನು ದಿನದಿನಕ್ಕೆ ಕೊಂಚ ಕೊಂಚವಾಗಿ ಕೊಲ್ಲಬೇಕೆಂದೆಣಿಸಿರುವೆವು. ನಿನ್ನಂಥವರಿಗೆ ಇಂತಹ ದಂಡನೆಯೇ ತಕ್ಕುದು. ಕೊಂಚಕಾಲದೊಳಗಾಗಿಯೇ ಮರಣಸಂಕಟದ ತತ್ತ್ವವನ್ನಾದರೂ ಅರಿತುಕೊಳ್ಳು.

ಪರಂ—ಈಯುದ್ದೇಶವು ನಿಮಗಿರುವುದಾದರೆ, ಬೇಗಬೇಗನೆ ನೆರವೇರಿಸಿಕೊಳ್ಳಿರಿ. ಕಾಲ ವಿಲಂಬವಾಗುವುದಾದರೆ ನನ್ನ ಕಡೆಯವರಾಗಲಿ, ಸರಕಾರದ ಕಡೆಯವರೇ ಆಗಲಿ ಇಲ್ಲಿಗೆ ಬಂದರೂ ಬರಬಹುದು. ಬಳಿಕ ನಿಮ್ಮ ಉದ್ದೇಶವು ನಿಮ್ಮ ಮೇಲೆಯೇ ಫಲಿಸೀತು.

"ಈತನು ಹೇಳುವುದು ಸುಳ್ಳಲ್ಲ" ಎಂದು ಭೂತನಾಥನು ಕಾಲರುದ್ರನಿಗೆ ಪರಂತಪನ ಬಾಯಿಗೆ ಬಟ್ಟೆ ತುರುಕುವಂತೆ ಅಪ್ಪಣೆ ಮಾಡಿದನು. ಕಾಲರುದ್ರನು ಅದರಂತೆಯೇ ನೆರವೇರಿಸಿ ಬಿಟ್ಟನು. ಪರಂತಪನಿಗೆ ಅಲುಗಾಡುವುದಕ್ಕಾಗಲಿ ಮಾತನಾಡುವುದಕ್ಕೇ ಆಗಲಿ ಶಕ್ತಿಯೇ ಇರಲಿಲ್ಲ. ಬಲು ಮಾತಿನಿಂದೇನು ? ಪರಂತಪನು ಉಸಿರಾಡುವ ಹೆಣದಂತಾಗಿಬಿಟ್ಟನು.

ಬಳಿಕ ಕಳ್ಳರು ಪರಂತಪನನ್ನು ಹೊತ್ತುಕೊಂಡು ಮೇಲಿನ ಅಂತಸ್ತಿಗೆ ಹೋದರು. ಅಲ್ಲಿ ಬಂಧನಕ್ಕೆಂದು ಮೊದಲಿನಿಂದಲೂ ಏರ್ಪಡಿಸಲ್ಪಟ್ಟಿದ್ದ ಒಂದು ದೃಢವಾದ ಸಣ್ಣ ಕೋಣೆಯೊಂದಿದ್ದಿತು. ಅದು ಮೂರಡಿಯಗಲವುಳ್ಳುದಾಗಿಯೂ ಆರಡಿಯುದ್ದವಾಗಿಯೂ ಇದ್ದಿತು. ಗಾಳಿ ಬೆಳಕು ಬರುವುದಕ್ಕೆ ಒಂದು ಸಣ್ಣ ಗವಾಕ್ಷವು ದೂರದಲ್ಲಿ ಕಾಣಿಸುತ್ತಿದ್ದಿತು. ಈ ಕೋಣೆಯೊಳಗೆ ಕಳ್ಳರು ಪರಂತಪನನ್ನು ಮಲಗಿಸಿ ಬಾಗಿಲನ್ನು ಹೊರಗಣಿಂದ ಭದ್ರಪಡಿಸಿಕೊಂಡು ಹೊರಟು ಹೋದರು. ಬಾಯಿಕೈಕಾಲುಗಳು ಬಂಧಿಸಲ್ಪಟ್ಟಿದ್ದುದರಿಂದ ಪರಂತಪನು ತಟ್ಟನೆ ಏನು ಮಾಡುವುದಕ್ಕೂ ಆಗಲಿಲ್ಲ.

---

## ಹತ್ತನೆಯ ಸಂಧಿ

### ಆಶ್ಚರ್ಯ ಮುಕ್ತಿಲಾಭ

ಹಿಂದಣ ಸಂಧಿಯಲ್ಲಿ ಸೂಚಿಸಿದಂತೆ ಬಂಧಿಸಲ್ಪಟ್ಟಿದ್ದ ಪರಂತಪನು ಅಂಗಾಂಗಗಳ ಮೇಲೆ ಕೊಂಚವೂ ಸ್ವಾಧೀನತೆಯಿಲ್ಲದವನಾಗಿ ಪರಿಪರಿಯಾಗಿ

ಚಿಂತಿಸತೊಡಗಿದನು. ಮತ್ತಾರಾದರೂ ಆಗಿದ್ದಿದ್ದರೆ ಭಯದಿಂದ ಇಷ್ಟು ಹೊತ್ತಿಗೆ ಪ್ರಾಣವನ್ನು ಬಿಟ್ಟುಬಿಡುತ್ತಿದ್ದರು. ಪರಂತಪನಿಗಾದರೋ ಇಂತಹ ವಿಪತ್ತುಗಳು ಅಡಿಗಡಿಗೂ ಸಂಭವಿಸುತ್ತಿದ್ದುದರಿಂದ, ಆತನು ಇದಕ್ಕಾಗಿ ಕೊಂಚವೂ ವ್ಯಸನಪಡಲಿಲ್ಲ. ಸುಲಭವಾಗಿ ಪ್ರಾಣಬಿಡುವುದಕ್ಕೂ ಅವನಿಗೆ ಇಷ್ಟವಿರಲಿಲ್ಲ. ಅದುಕಾರಣ ನಮ್ಮ ಪರಂತಪನು ಹೇಗಾದರೂ ಈ ಬಂಧನದಿಂದ ಬಿಡುಗಡೆಯನ್ನು ಹೊಂದಬೇಕೆಂದು ಪರಿಪರಿಯಾಗಿ ಚಿಂತಿಸಲಾರಂಭಿಸಿದನು.

ಪರಂತಪನು ತನ್ನ ಚಿಂತೆಯಲ್ಲಿಯೇ ಕೆಲವು ಕಾಲವನ್ನು ಕಳೆದ ಬಳಿಕ, ಸುತ್ತಲೂ ಆ ಕೋಣೆಯನ್ನು ಚೆನ್ನಾಗಿ ಪರೀಕ್ಷಿಸಲಾರಂಭಿಸಿದನು. ದೈವಯೋಗದಿಂದಲೋ ಎಂಬಂತೆ, ಒಂದು ಕಲ್ಲು ಗೋಡೆಯಿಂದ ಹೊರಗೆ ಚಾಚಿಕೊಂಡಿದ್ದಿತು. ಬಲ್ಲವನಿಗೆ ಹಲ್ಲೇ ಆಯುಧವೆನ್ನುವಂತೆ, ಪರಂತಪನು ಆ ಕಲ್ಲಿನಿಂದ ಪ್ರಯೋಜನವನ್ನು ಹೊಂದಬೇಕೆಂದು ಎಣಿಸಿ ತನ್ನ ಹಸ್ತ ಬಂಧನದ ಹಗ್ಗವನ್ನು ಆ ಕಲ್ಲ ಮೇಲೆ ತಿಕ್ಕುವುದಕ್ಕೆ ಮೊದಲು ಮಾಡಿದನು.

ಪರಂತಪನು ಧೈರ್ಯವನ್ನು ಅವಲಂಬಿಸಿಕೊಂಡು ಅರ್ಧಘಂಟೆಯ ವರೆಗೂ ಉಜ್ಜುತ್ತಿರುವಲ್ಲಿ ಬಂಧನದ ಹಗ್ಗವು ಶಿಥಿಲವಾಯಿತು. ಬಳಿಕ ಆತನು ತನ್ನ ಬಲಪ್ರಯೋಗದಿಂದ ಆ ಹಗ್ಗವನ್ನು ಕಿತ್ತುಬಿಟ್ಟನು. ಕೈಗಳು ಸ್ವಾಧೀನವಾಗಲು, ಆತನು ಅನಾಯಾಸದಿಂದ ಉಳಿದ ಬಂಧನಗಳನ್ನು ಸಡಲಿಸಿಬಿಟ್ಟನು.

ಈರೀತಿಯಾಗಿ ಒಂದು ಬಗೆಯ ಬಂಧನದಿಂದ ವಿಮೋಚನೆಯನ್ನು ಹೊಂದಿದವನಾಗಿ ಆ ಕೋಣೆಯಿಂದ ಪಾರಾಗುವುದು ಹೇಗೆಂದು ಚಿಂತಿಸುತ್ತಾ ಉಪಾಯವನ್ನು ಹುಡುಕಲಾರಂಭಿಸಿದನು. ಆ ಚಾಚಿಕೊಂಡಿದ್ದ ಕಲ್ಲೇ ತನ್ನ ಮುಂದಣ ಉದ್ಧಾರಕ್ಕೂ ಮೂಲ ಸೂತ್ರಸ್ಥಾನವೆಂದು ತಿಳಿದು, ಪರಂತಪನು ಆ ಕಲ್ಲನ್ನು ಅಲುಗಾಡಿಸಿ ಕಿತ್ತುಹಾಕುವುದಕ್ಕೆ ಯತ್ನಮಾಡಿ ನೋಡಿದನು. ಬಲಾಢ್ಯನಾದ ಪರಂತಪನಿಗೆ ಆ ಸಣ್ಣ ಕಲ್ಲು ಅಡ್ಡಲಾಗಿ ನಿಲ್ಲಲಾರದೇ ಹೋದುದು. ಒಂದು ಇಟ್ಟಿಗೆಯ ದಾಯದಲ್ಲಿ ಸಿಲುಕಿಕೊಂಡಿದ್ದ ಆ ಕಲ್ಲು ಸಡಲಿತು. ಬಳಿಕ ಪರಂತಪನು ಆ ಕಲ್ಲಿನ ಸಡಲುವಿಕೆಯಿಂದುಂಟಾದ ಕಿಂಡಿಯನ್ನು ದೊಡ್ಡದನ್ನಾಗಿ ಮಾಡುವುದರಲ್ಲಿ ಹೆಚ್ಚಿನ ಶ್ರಮಪಡಬೇಕಾದುದೇನೂ ಇರಲಿಲ್ಲ. ಕೊಂಚ ಕಾಲದೊಳಗಾಗಿ ಒಬ್ಬ ಮನುಷ್ಯನು ತೂರಿ ಹೊರಗೆ ಬರುವುದಕ್ಕೆ ಸಾಕಾದಷ್ಟು ಕಿಂಡಿಯು ಏರ್ಪಟ್ಟು ಹೋಯಿತು. ಇದನ್ನು ಕಂಡಕೂಡಲೆ ಪರಂತಪನ ಸಂತೋಷಕ್ಕೆ ಪಾರವೇ ಇರಲಿಲ್ಲ. ಆ ಕೂಡಲೆಯೇ ಪರಂತಪನು ಆ ಕಿಂಡಿಯಿಂದ ತಪ್ಪಿಸಿಕೊಂಡು ಹೊರಗೆ ಬಂದು ಬಿಡಬಹುದಾಗಿದ್ದಿತು, ಆದರೆ ಕಳ್ಳರು ಸಮೀಪದಲ್ಲಿಯೇ ಸಂಚರಿಸುತ್ತಿರಬಹುದೆಂಬ ಶಂಕೆಯು ಆತನ ಮನದಲ್ಲಿ ಬಲವಾಗಿ

ನಟ್ಟುದರಿಂದ, ಆತನು ಅರ್ಧರಾತ್ರದ ಸಮಯವನ್ನು ನಿರೀಕ್ಷಿಸುತ್ತಾ ಕುಳಿತಿದ್ದನು.

ಪರಂತಪನು ತಪ್ಪಿಸಿಕೊಂಡು ಹೋಗುವುದಕ್ಕೆ ಏರ್ಪಡಿಸಿದ್ದ ಕಿಂಡಿಗೆ ಇದಿರಿನಲ್ಲಿ ಅದೊಂದು ದೊಡ್ಡ ಮಹಡಿಯ ಮನೆಯಿದ್ದಿತು. ಅದರ ಮೇಲಂತಸ್ತಿನ ಮಲಗುವ ಮನೆಯಲ್ಲಿ ಒಂದು ದೀಪವು ಉರಿಯುತ್ತಿದ್ದಿತು. ಆ ದೀಪದ ಬೆಳಕಿನಲ್ಲಿ ಒಬ್ಬ ವೃದ್ಧನು ಕಾಣಿಸಿಕೊಂಡನು. ಆ ವೃದ್ಧನು ಪರಂತಪನಿಗೆ ಪೂರ್ವಪರಿಚಿತನಾಗಿದ್ದಂತೆ ಸ್ಫೂರ್ತಿಗೆ ಬಂದಿತು.

ಪರಂತಪನು ಬಂದಿಯಾಗಿದ್ದ ಮನೆಯ ಪಕ್ಕದಲ್ಲಿ ಹಣಗಾರನಾದ ಶೆಟ್ಟಿಯೊಬ್ಬನು ವಾಸವಾಗಿರುತ್ತಿದ್ದನು. ಆತನು ವ್ಯಾಪಾರದಿಂದ ಶೆಟ್ಟಿಯೆನಿಸಿಕೊಂಡಿದ್ದನೇ ಹೊರತು ಜಾತಿಯಿಂದಲ್ಲ. ಆತನು ಹೆಚ್ಚಿನ ಬಡ್ಡಿಯಿಂದ ಹಣವನ್ನು ಇತರರಿಗೆ ಸಾಲವಾಗಿ ಕೊಟ್ಟು ಬಡಬಗ್ಗರನ್ನು ಮುಳುಗಿಸುತ್ತಾ ಹಣಗಾರನೆಂದು ಹೊಗಳಿಸಿಕೊಳ್ಳುತ್ತಾ ಜೀವನ ಮಾಡಿಕೊಂಡಿರುತ್ತಿದ್ದನು. ಸಾಮಾನ್ಯವಾಗಿ ಇಂತಹವರು ಊರಿನಲ್ಲಿ ಎಲ್ಲರಿಗೂ ಪರಿಚಿತರಾಗಿಯೇ ಇರುವರು. ಅದರಂತೆಯೇ ಪರಂತಪನಿಗೂ ಆತನು ಪೂರ್ವಪರಿಚಿತನಾಗಿದ್ದನು.

ಕೊಂಚ ಕಾಲವೆನ್ನುವುದರೊಳಗಾಗಿ ಆ ವೃದ್ಧನಿದ್ದಲ್ಲಿಗೆ ಮತ್ತೊಬ್ಬನು ಬಂದನು. ವೃದ್ಧನು ಬಂದವನನ್ನು ಆದರದಿಂದ ಒಂದು ವೇತ್ರಾಸನದ ಮೇಲೆ ಕುಳ್ಳಿರಿಸಿದನು.

ಆಗಂತುಕನು ವಿಶ್ರಾಂತಿಯನ್ನು ತೆಗೆದುಕೊಂಡ ಬಳಿಕ ವೃದ್ಧನು ಆತನನ್ನು ಕುರಿತು—ನಂದಕುಮಾರ! ಆರೋಗ್ಯವಷ್ಟೇ? ನಿನ್ನ ಮುಖವು ಬಾಡಿಹೋಗಿರುವುದಕ್ಕೆ ಕಾರಣವೇನು? ಆವನು ಲಕ್ಷೇಶನಾಗುವುದಕ್ಕೆ ಅಧಿಕಾರಿಯೋ ಅಂತಹವನು ಈ ರೀತಿಯಾಗಿ ಮುಖವನ್ನು ಜೋಲು ಹಾಕಿಕೊಂಡಿರಬಾರದು, ಎಂದು ಸರಸವಾಗಿ ಮಾತನಾಡಿದನು.

ಆಗಂತುಕನು ನಮ್ಮ ಪೂರ್ವ ಪರಿಚಿತನಾದ ನಂದಕುಮಾರನು. ಈತನೇ ಕಮಲಾಕಾಂತ ಚಕ್ರವರ್ತಿಯ ಮಗಳ ಮಗನು.

ನಂದಕುಮಾರನು ವಿಷಣ್ಣವದನನಾಗಿ—ಮಹಾಶಯ! ಲಕ್ಷೇಶನಾಗಲು ನನ್ನ ಹಣೆಯಲ್ಲಿಯೇ ಬರೆಯಲಿಲ್ಲ. ಕಾರಣವೇನೆಂದರೆ—ನಮ್ಮ ಅಜ್ಜನು ನನ್ನನ್ನು ಮನೆಯಿಂದ ಹೊರಡಿಸಿ ಬಿಟ್ಟನು, ಎಂದುತ್ತರ ವಿತ್ತನು.

ನಂದಕುಮಾರನು ಹೀಗೆ ಹೇಳಿ ನಡೆದುದೆಲ್ಲವನ್ನೂ ಆ ವೃದ್ಧನಿಗೆ ಆದ್ಯೋಪಾಂತವಾಗಿ ವಿವರಿಸಿದನು. ಇಲ್ಲಿನ ವರೆಗೂ ನಗೆಮೊಗದಿಂದ ಕೂಡಿದ ವೃದ್ಧನು ಈ ಮಾತನ್ನು ಕೇಳಿದ ಕೂಡಲೆ ಕಂಗೆಟ್ಟವನಾಗಿ ಹುಬ್ಬುಗಂಟಿಕ್ಕಿ—ನನ್ನ ಹಣದ ವಿಷಯವೇನು ? ಎಂದು ಗರಸಾಗಿ ಮಾತನಾಡಿದನು.

ನಂದ—ಮಹಾಶಯ ! ಆ ವಿಷಯವನ್ನು ಕುರಿತು ಮಾತನಾಡುವುದಕ್ಕಾಗಿಯೇ ಇಲ್ಲಿಗೆ ಬಂದಿರುವೆನು.

ವೃದ್ಧ—ಈಗಳೇ ಹಣವನ್ನು ತಂದಿರುವೆಯಷ್ಟೇ ? ನೀನು ಸತ್ಕುಲಪ್ರಸೂತನಾದುದರಿಂದಲೂ, ಒಳ್ಳೆಯ ನಡತೆಯುಳ್ಳವನಾದುದರಿಂದಲೂ, ನಾನು ನಿನಗೆ ಸುಲಭದ ಬಡ್ಡಿಯನ್ನು ಏರ್ಪಡಿಸಿ ಸಾಲವನ್ನು ಕೊಟ್ಟೆನು. ನಿನ್ನ ಹೊರತಾಗಿ ಮತ್ತಾರಿಗೂ ಇಷ್ಟು ಅನುಕೂಲ್ಯವು ನನ್ನಿಂದ ಎಂದಿಗೂ ದೊರೆಯುತ್ತಿರಲಿಲ್ಲ. ಹಣವೆಲ್ಲಿ ? ಈಗಳೇ ಸಾಲವನ್ನು ತೀರಿಸಿ ಬಿಡು.

ನಂದ—ಈಗ ನನಗೆ ಹಣವು ಎಲ್ಲಿಂದ ದೊರೆಯುಬೇಕು ? ಈಗಣ ಸಂದರ್ಭದಲ್ಲಿ ನನಗೆ ಹಣವು ದೊರೆವ ಸಂಭವವೇ ಇಲ್ಲ. ಆದುದರಿಂದ ಹಣಕ್ಕಾಗಿ ಇನ್ನೂ ಕೆಲವು ಕಾಲದ ವರೆಗೂ ತಾವು ನಿರೀಕ್ಷಿಸಬೇಕು.

ವೃದ್ಧ—ನಾನು ಕಾಲದ ನಿರೀಕ್ಷಣೆಯಿಂದ ಪಡೆವುದೇನು ? ನಾನು ಹಾಗೆ ಮಾಡುವುದಾದರೂ, ನೀನು ಹಣವನ್ನು ಎಲ್ಲಿಂದ ತಂದು ಕೊಡಬಲ್ಲೆ ? ನಿನ್ನಲ್ಲಿರುವುದಾದರೂ ಏನು ? ಈಗ ನಿನ್ನನ್ನು ನಂಬುವವರಾರು ?

ನಂದ—ಈಯಭಿಪ್ರಾಯವಿರುವುದಾದರೆ, ನೀವು ಹಣವನ್ನು ಏತಕ್ಕಾಗಿ ಕೊಟ್ಟಿರಿ ? ತಾವು ಮೊದಲೇ ಹಣವನ್ನು ಕೊಡಬಾರದಾಗಿದ್ದಿತು. ಈಗ ಪರ್ಯಾಲೋಚಿಸಿ ನೋಡುವಲ್ಲಿ, ಈ ವ್ಯವಹಾರವು ಕ್ಷೇಮಕ್ಕಲ್ಲವೆಂದು ತೋರುವುದು.

ವೃದ್ಧ—ಈಗ ಮಾತನಾಡುವ ರೀತಿಯೇ ಹೀಗೆ. ಆರಿಗೇ ಆಗಲಿ ಹಣವನ್ನು ತೆಗೆಯುವಾಗ ಇರುವ ಬುದ್ಧಿಯು ಅದನ್ನು ತೀರಿಸುವಾಗ ಇರುವುದಿಲ್ಲ. ನಾನು ಹಣವನ್ನು ಬಲಾತ್ಕಾರದಿಂದ ನಿಮ್ಮ ತಲೆಗೆ ಕಟ್ಟಿದೆನೇ ?

ನಂದ—ಆಗ ನೀವು ಹಣವನ್ನು ಕೊಡದೇ ಹೋಗಿದ್ದರೆ, ನಾನು ಅದನ್ನು ಬಲಾತ್ಕಾರದಿಂದ ಕಿತ್ತುಕೊಳ್ಳಲು ಸಾಧ್ಯವೇ ? ನನ್ನ ಈಗಣ ಸ್ಥಿತಿಯನ್ನು ನೋಡಿ, ನೀವು ಹೀಗೆಲ್ಲಾ ಮಾತನಾಡಬಾರದು. ನಾನು ನಿಮ್ಮ ಹಣವನ್ನು ಹೇಗಾದರೂ ಮಾಡಿ ತಂದುಕೊಟ್ಟು ಋಣದಿಂದ ಮುಕ್ತನಾಗುವೆನು. ಅದಕ್ಕಾಗಿ ತಾವು ಚಿಂತಿಸಬೇಕಾದುದಿಲ್ಲ. ನನಗೆ ಈಗ ಕಷ್ಟಕಾಲವಾದುದರಿಂದ,

ಮೊದಲಿನಂತೆಯೇ ತಿಂಗಳು ತಿಂಗಳಿಗೂ ಹಣದ ಬಡ್ಡಿಯನ್ನು ಕೊಡುತ್ತಾ ಬರುವೆನು, ಆದರೆ ಹಣವೆಲ್ಲವನ್ನೂ ಒಂದೇ ಗಂಟಿನಲ್ಲಿ ತೀರಿಸಿ ಋಣದಿಂದ ಬಿಡುಗಡೆಯಾಗುವುದಕ್ಕೆ ಕೆಲವು ಕಾಲದ ಅವಧಿಯು ಬೇಕಾಗುವುದು. ನಾನು ಬದುಕಿರುವುದಾದರೆ, ನಿಮ್ಮ ಹಣಕ್ಕೆ ಭಯವೇನೂ ಇಲ್ಲ. ನಾನು ಹೀಗೆ ಹೇಳುವುದರಿಂದ ನೀವು ಭಯಪಡಬೇಕಾದುದೇನೂ ಇರುವುದಿಲ್ಲ. ನಾನು ಹೊಟ್ಟೆಯನ್ನು ಕಟ್ಟಿಯಾದರೂ ನನ್ನ ತಲೆಯನ್ನು ಮತ್ತೊಬ್ಬರಲ್ಲಿ ಒತ್ತೆಯಿಟ್ಟಾದರೂ ನಿಮ್ಮ ಸಾಲವನ್ನು ತೀರಿಸಿ ಬಿಡುವೆನು.

ವೃದ್ಧ—ನಂದಕುಮಾರ! ಕೆಲಸದಲ್ಲಿ ಇಷ್ಟು ಕೌಶಲವೂ ಮಾತಿನಲ್ಲಿ ಇಷ್ಟು ಚಾತುರ್ಯವೂ ನಿನಗಿರುವುದೆಂದು ನಾನು ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ.

ನಂದ—ಮಹಾಶಯ! ತಾವು ನನ್ನ ವಿಷಯದಲ್ಲಿ ಸಂಶಯಪಟ್ಟಂತಿದೆ. ತಾವು ನನಗೆ ಹಣವನ್ನು ಕೊಟ್ಟವರಲ್ಲ. ತಾವು ನನ್ನ ಬಂಧುವಿಗೆ ಹಣವನ್ನು ಕೊಟ್ಟು ನನ್ನಲ್ಲಿ ಹೀಗೆ ಮಾತನಾಡುತ್ತಿರುವಿರಿ. ನನ್ನ ಬಂಧುವಿಗೆ ಬೇಕಾದ ಹಾಗೆ ಆಸ್ತಿಪಾಸ್ತಿಗಳು ಇದ್ದರೂ, ತಾವು ನನ್ನನ್ನೂ ಆತನಿಗೆ ಒತ್ತಾಸೆಯಾಗಿ ಸೇರಿಸಿಕೊಂಡಿರಿ. ನನ್ನನ್ನು ಈ ವ್ಯವಹಾರಕ್ಕೆ ಸೇರಿಸಕೂಡದೆಂದು ಎಷ್ಟೋ ರೀತಿಯಲ್ಲಿ ಬೆಸಗೊಂಡೆನು. ಆಗ ನೀವು ಸೌಮ್ಯತೆಯಿಂದಲೇ ಒತ್ತಾಸೆಯಾಗುವುದರಿಂದ ನಷ್ಟವೇನೂ ಇಲ್ಲವೆಂದು ಪುಸಲಾಯಿಸಿ ನನ್ನ ಹಸ್ತಾಕ್ಷರವನ್ನು ಪಡೆದುಕೊಂಡಿರಿ. ಇದನ್ನು ನಾನು ಬಲಾತ್ಕಾರವೆಂದು ಹೇಳುವುದಾದರೆ, ಅಪರಾಧಿಯಾದೇನು.

ವೃದ್ಧ—ಆತನು ನಿನ್ನ ಬಂಧುವೇ ಹೊರತು ನನ್ನ ಬಂಧುವಲ್ಲ. ನಿನ್ನ ಬಂಧುವಿಗೆ ಉಪಕಾರ ಮಾಡುವುದಕ್ಕಾಗಿ ನೀನೂ ಈ ವ್ಯವಹಾರದಲ್ಲಿ ಸೇರಿರುವೆ. ನಾನು ಆತನನ್ನು ಒಂದು ದಿನವೂ ನೋಡಿದವನಲ್ಲ. ನಿನ್ನ ಹಸ್ತಾಕ್ಷರವಿಲ್ಲದೆಯೇ ನಾನು ಆತನಿಗೆ ಒಂದು ಕಾಸೂ ಕೊಡತಕ್ಕವನಾಗಿರಲಿಲ್ಲ.

ನಂದ—ಈಗ ಆ ಮಾತುಗಳಿಂದ ಆವ ಲಾಭವೂ ಇಲ್ಲ. ಪ್ರಕೃತದ ಸ್ಥಿತಿಯಲ್ಲಿ ನನ್ನ ಕೈಯೊಳಗೆ ಒಂದು ಕುರುಡು ಕವಡೆಯೂ ಇಲ್ಲ. ಕಾಲಕಾಲಕ್ಕೆ ಸರಿಯಾಗಿ ಬಡ್ಡಿಯ ಹೊರತಾಗಿ ಮತ್ತೇನನ್ನೂ ಕೊಡಲಾರದವನಾಗಿರುವೆನು. ನನಗೆ ಅನುಕೂಲ್ಯವು ಒದಗಿ ಬಂದ ಕಾಲದಲ್ಲಿ ನಿಮ್ಮ ಋಣದಲ್ಲಿ ನಾನು ಸಾಯುವುದಿಲ್ಲ. ನಾನು ಇದ್ದುದನ್ನು ಇದ್ದ ಹಾಗೆಯೇ ತಿಳಿಸಿಕೊಂಡಿರುವೆನು. ಇದರ ಮೇಲೆ ತಮ್ಮ ಇಷ್ಟ.

ನಂದಕುಮಾರನು ಹೀಗೆ ಹೇಳಿ ಹೊರಗೆ ಹೊರಟನು. ವೃದ್ಧನು ಕೋಪ ದಿಂದ ರೇಗಿರೇಗಿ ಬಿದ್ದವನಾಗಿ ಮುಂದೆ ಏನ ಮಾಡಬೇಕೆಂಬುದನ್ನು ಅರಿಯದೆ ಒಂದೆಡೆಯಲ್ಲಿ ಕುಳಿತುಬಿಟ್ಟನು. ಅವನಿಗೆ ಒಂದು ಕ್ಷಣಕಾಲ ದಿಕ್ಕೇ ತೋರದೇ ಹೋಯಿತು. ಬಳಿಕ ತನ್ನೊಳಗೆ ತಾನೇ—ನನ್ನ ಹಣವೆಲ್ಲವೂ ಹೋಯಿತು! ನನ್ನ ಯುಕ್ತಿ ಚಮತ್ಕಾರಗಳೆಲ್ಲವೂ ನೀರಿನಲ್ಲಿ ಹೋಮ ಮಾಡಿದಂತಾದುವು! ನನಗಿದ್ದ ಭರವಸೆಯೆಲ್ಲವೂ ಇಂದಿಗೆ ನಿರ್ಮೂಲವಾದುದು! ಎಂದು ಸಂಕಟಪಟ್ಟು ಕೊಂಡನು.

ಪರಂತಪನು ತನ್ನ ಕೋಣೆಯೊಳಗೆ ಇದ್ದುಕೊಂಡೇ ಈ ಸಂಭಾಷಣೆಯೆಲ್ಲ ವನ್ನೂ ಕೇಳಿದನು.

---

## ಹನ್ನೊಂದನೆಯ ಸಂಧಿ

### ವಿಷಮ ವ್ಯವಹಾರ

ಎಷ್ಟು ಹೊತ್ತಿಗೆ ಅರ್ಧರಾತ್ರದ ಸಮಯವಾದೀತು, ಎಷ್ಟು ಹೊತ್ತಿಗೆ ತಾನು ಮುಕ್ತನಾಗಿ ಹೊರಗೆ ಬಂದೇನು, ಎಂದು ನಿರೀಕ್ಷಿಸುತ್ತಿದ್ದ ಪರಂತಪ ನಿಗೆ ಒಂದೊಂದು ನಿಮಿಷವೂ ಒಂದೊಂದು ಯುಗವಾಗಿ ತೋರಲಾರಂಭಿಸಿತು. ಕಾಲವು ಆರ ಅಧೀನವೂ ಅಲ್ಲ. ಕಾಲವು ಹಿಂದೆ ಆವ ಗತಿಯಿಂದ ಚಲಿಸುವುದೋ ಇಂದೂ ಅದೇ ಗತಿಯಿಂದ ಚಲಿಸುವುದು. ಕಾಲಕ್ಕೆ ಅಧೀನನಾದ ಮಾನವನು ತನ್ನ ತಾತ್ಕಾಲಿಕ ಸ್ಥಿತಿಗತಿಗಳಿಗೆ ತಕ್ಕಂತೆಯೇ ಕಾಲವನ್ನು ದೀರ್ಘವಾಗಿಯೂ ಹ್ರಸ್ವವಾಗಿಯೂ ಭಾವಿಸಿಕೊಳ್ಳುವನು. ಇದು ಮನೋಭಾವನೆಯ ಲಕ್ಷಣವೇ ಹೊರತು ಕಾಲದ ವೈಲಕ್ಷಣ್ಯವೇನೂ ಅಲ್ಲ. ಪ್ರಕೃತ ಸಂದರ್ಭದಲ್ಲಿಯೂ ಕಾಲವು ತನ್ನ ನಿಯಮವನ್ನು ಅನುಸರಿಸಿಯೇ ಪ್ರವಹಿಸುತ್ತಿದ್ದಿತು.

ನಂದಕುಮಾರನು ವೃದ್ಧನೊಡನೆ ವ್ಯವಹಾರಮಾಡಿ ಹೊರಗೆ ಹೊರಟನೆಂದು ಹಿಂದೆಯೇ ತಿಳಿಸಿರುವೆವಷ್ಟೇ? ಆತನು ಹೊರಗೆ ಬರುತ್ತಿರುವಷ್ಟರೊಳಗಾಗಿ ಹದಿನೈದು ವರ್ಷದ ವಯಸ್ಸುಳ್ಳ ಬಾಲಿಕೆಯೊಬ್ಬಳು ಆತನಿದಿರಿನಲ್ಲಿ ಬಂದು ನಿಂತು ಆತನನ್ನು ತನ್ನ ಕೋಣೆಗೆ ಕರೆದುಕೊಂಡು ಹೋದಳು.

ಆ ಹುಡುಗಿಯು ಆ ವೃದ್ಧನ ಏಕಮಾತ್ರ ಪುತ್ರಿ. ಆಕೆಯ ಹೆಸರು ಅರವಿಂದಸುಂದರಿ. ಆಕೆಯ ತಂದೆಯು ನಂದಕುಮಾರನನ್ನು ಬಹಳವಾಗಿ ಪ್ರೀತಿ

ಸುತ್ತಿದ್ದನು, ಆದರೆ ಆ ಪ್ರೀತಿಯು ಕೇವಲವಾದ ಸ್ವಾರ್ಥದಿಂದ ತುಂಬಿ ತುಳು ಕಾಡುತಿದ್ದಿತು. ಆ ಸ್ವಾರ್ಥವು ಈರೀತಿಯಾಗಿದ್ದಿತು:—

"ಕಮಲಾಕಾಂತನು ನಂದಕುಮಾರನನ್ನು ಮೊದಲಿನಿಂದಲೂ ಪ್ರೀತಿಸುವನು. ಈ ಪ್ರೀತಿಗೆ ಫಲವಾಗಿ ಕಮಲಾಕಾಂತನು ತನ್ನ ಅನಂತರದಲ್ಲಿ ನಂದಕುಮಾರನಿಗೆ ತನ್ನ ಆಸ್ತಿಪಾಸ್ತಿಯಲ್ಲಿ ಅಧಿಕಾಂಶವನ್ನೇ ದಾನಮಾಡುವನು. ಇದರಿಂದ ನಂದಕುಮಾರನು ಲಕ್ಷ್ಮೀಶನಾಗಿ ಬಾಳುವನು. ಅದು ಕಾರಣ ಅರವಿಂದಸುಂದರಿಯನ್ನು ಆತನಿಗೆ ಕೊಟ್ಟು ವಿವಾಹ ಮಾಡುವುದಾದರೆ ತನ್ನ ಮಗಳು ಸುಖವಾಗಿರುವುದಲ್ಲದೆ, ತನಗೂ ಅಳಿಯನಿಂದ ತುಂಬಾ ಪ್ರಯೋಜನವಾಗುವುದು."

ವೃದ್ಧನಿಗೂ ಬೇಕಾದ ಹಾಗೆ ಐಶ್ವರ್ಯವಿದ್ದಿತು. ಅದು ಮನೆ ಹಾಳ ಬಡ್ಡಿಯಿಂದ ದಿನದಿನಕ್ಕೂ ಅತಿಶಯವಾಗಿ ವೃದ್ಧಿಯನ್ನೆಯ್ದುತಿದ್ದಿತು. ಆ ವೃದ್ಧನಲ್ಲಿ ಹಣವು ಹೆಚ್ಚುವುದಕ್ಕೆ ಮತ್ತೊಂದು ಕಾರಣವೇನೆಂದರೆ—ಆತನು ತನ್ನ ಹಣವನ್ನು ವೆಚ್ಚಮಾಡಿ ಹೊಟ್ಟೆ ತುಂಬಾ ತಿನ್ನುತ್ತಿರಲಿಲ್ಲ. ಹಾಗೂ ಅನ್ಯಾಯದ ವ್ಯಯವೆಂಬುದನ್ನು ಆತನು ಅರಿತ ಪ್ರಾಣಿಯೇ ಅಲ್ಲ. ಆದುದರಿಂದ ಊರಿನವರೆಲ್ಲರೂ ಆತನನ್ನು ಕೃಪಣ ಶಿಖಾಮಣಿಯೆಂದು ಕರೆಯುತ್ತಿದ್ದರು. ದೈವಯೋಗದಿಂದ ಆತನ ಸಂಸಾರದಲ್ಲಿ ಒಬ್ಬ ಮಗಳು ಹೊರತಾಗಿ ಮತ್ತಾರೂ ಇರಲಿಲ್ಲ.

ಆರಲ್ಲಿ ಹಣವಿರುವುದೋ ಅವರಿಗಲ್ಲದೆ ಮತ್ತೊಬ್ಬರಿಗೆ ಹಣದ ಮರ್ಮವು ಗೊತ್ತಾಗಲೊಲ್ಲದು. ದರಿದ್ರರು ಹಣಗಾರನನ್ನು ನೋಡಿ ಮನಬಂದಂತೆ ಮಾತನಾಡುವರು. ಇದಕ್ಕಾಗಿ ಹಣಗಾರನು ವ್ಯಸನ ಪಡಬೇಕಾದುದೇನೂ ಇರುವುದಿಲ್ಲ. ಹಣಗಾರರನ್ನು ನೋಡಿ ಹೀಯಾಳಿಸುವ ದರಿದ್ರರೆಲ್ಲರಿಗೂ ಭಗವಂತನು ಹಣವನ್ನು ಕೊಟ್ಟು ಪರೀಕ್ಷಿಸಬೇಕೆಂದು ನಮ್ಮ ಪ್ರಾರ್ಥನೆ.

ನಮ್ಮ ವೃದ್ಧನು ಅಪಾರವಾದ ಸಂಪತ್ತಿಗೆ ಅಧಿಕಾರಿಯಾಗಿದ್ದರೂ ಮತ್ತೆ ಮತ್ತೆ ಹಣವನ್ನು ಸಂಪಾದಿಸಿಡಬೇಕೆಂಬ ಬಯಕೆಯುಳ್ಳವನಾಗಿರುತಿದ್ದನು. ಇದಕ್ಕಾಗಿಯೇ ತನ್ನ ಮಗಳಾದ ಅರವಿಂದಸುಂದರಿಯನ್ನು ಕಮಲಾಕಾಂತನ ಸ್ವತ್ತಿಗೆ ಉತ್ತರಾಧಿಕಾರಿಯಾಗಬಹುದಾದ ನಂದಕುಮಾರನಿಗೆ ಕೊಟ್ಟು ವಿವಾಹ ಬಳೆಯಿಸುವುದಾದರೆ, ಆ ಸ್ವತ್ತೆಲ್ಲವೂ ತನ್ನಲ್ಲಿಯೇ ಬಂದು ಸೇರುವುದೆಂದು ವೃದ್ಧನು ಸುಲಭವಾಗಿ ಹಣವನ್ನು ಸಂಪಾದಿಸುವ ಮಾರ್ಗವೊಂದನ್ನು ಕಂಡುಹಿಡಿದು ನಂದಕುಮಾರನನ್ನು ಮೊದಲಿನಿಂದಲೂ ಪ್ರೀತಿಸುವುದಕ್ಕೆ ಮೊದಲು ಮಾಡಿದ್ದನು. ತನ್ನ ಇಷ್ಟವು ನೆರವೇರುವುದಕ್ಕಾಗಿ ನಂದಕುಮಾರನಿಗೆ ಒಂದೆರಡು ಸಲ

ಆಸೆಯನ್ನೂ ತೋರಿಸಿದ್ದನು, ಹಾಗೂ ಒಂದೆರಡು ಸಲ ತನ್ನ ಅಭಿಪ್ರಾಯವನ್ನೂ ಸೂಚಿಸಿದ್ದನು. ನಂದಕುಮಾರನು ಮೊದಲಿನಿಂದಲೂ ಕುಂದ ನಂದಿನಿಯನ್ನು ಪ್ರೀತಿಸುತ್ತಿದ್ದುದರಿಂದ, ವೃದ್ಧನ ಮಾತಿಗೆ ಆವ ಉತ್ತರವನ್ನೂ ಕೊಟ್ಟಿರಲಿಲ್ಲ. ನಂದಕುಮಾರನು ನಾಚುಗೆಯಿಂದ ಮಾತನಾಡುವುದಿಲ್ಲವೆಂದು ತಿಳಿದು ವೃದ್ಧನು ಸಮಯವನ್ನು ನಿರೀಕ್ಷಿಸಿಕೊಂಡಿರುತಿದ್ದನು.

•

ಅರವಿಂದಸುಂದರಿಯು ನಂದಕುಮಾರನನ್ನು ನೋಡಿ ತನ್ನ ಕೋಣೆಗೆ ಕರೆದುಕೊಂಡು ಹೋದಳು. ಅರವಿಂದಸುಂದರಿಯು ತನ್ನನ್ನು ನಂದಕುಮಾರನಿಗೆ ಕೊಟ್ಟು ವಿವಾಹವಾಗುವುದೆಂದೋ—ಇಲ್ಲವೆ, ಮತ್ತಾವ ಕಾರಣದಿಂದಲೋ ನಂದಕುಮಾರನನ್ನು ಪ್ರೀತಿಸುತ್ತಿದ್ದಳು. ವೃದ್ಧ ಮಹಾಶಯನು ತನ್ನನ್ನು ಪ್ರೀತಿಸುತ್ತಿದ್ದನೆಂದರಿತು ನಂದಕುಮಾರನೂ ಆಗಿಂದಾಗ ಆ ವೃದ್ಧನ ಮನೆಗೆ ಹೋಗಿ ಬರುತ್ತಿದ್ದನು. ಈ ಸಲವೂ ನಂದಕುಮಾರನು ಬಂದುದನ್ನು ನೋಡಿ ಅರವಿಂದಸುಂದರಿಯು ಆತನನ್ನು ತನ್ನ ಕೋಣೆಯೊಳಗೆ ಕರೆದುಕೊಂಡು ಹೋದಳು. ಅಲ್ಲಿ ಆಕೆಯು ನಂದಕುಮಾರನನ್ನು ಎವೆಯಿಕ್ಕದೆಯೇ ನೋಡುತ್ತಾ ನಿಂತುಕೊಂಡಳು. ಆಗ ಆಕೆಯು ತನ್ನೊಳಗೆ ತಾನೇ ಆಲೋಚಿಸಿದ ರೀತಿಯೇನೆಂದರೆ:—

“ನಂದನ ಮುಖವು ಮಲಿನವಾಗಿರಲು ಕಾರಣವೇನಿರಬಹುದು? ಈತನಿಗೆ ವಿಪತ್ತೇನಾದರೂ ಸಂಭವಿಸಿರಬಹುದೇ? ಅದಕ್ಕಾಗಿ ಸಾಹಾಯ್ಯವನ್ನೇನಾದರೂ ಬೇಡುವುದಕ್ಕಾಗಿ ನನ್ನ ತಂದೆಯ ಬಳಿಗೆ ಬಂದಿರಬಹುದೇ? ನನ್ನ ತಂದೆಯು ಕೃಪಣನಾದುದರಿಂದ ಈತನ ಪ್ರಾರ್ಥನೆಯನ್ನು ಕಿವಿಯಲ್ಲಿ ಹಾಕಿಕೊಳ್ಳದೇ ಇರಬಹುದೇ? ಇಷ್ಟೆಲ್ಲಾ ಆಗದಿದ್ದರೆ, ನಂದನು ಮಲಿನವಾದ ಮುಖವನ್ನು ಧರಿಸಿರುವುದಕ್ಕೆ ಕಾರಣವಾದರೂ ಏನಿರಬಹುದು?”

ಅರವಿಂದಸುಂದರಿಯು ಇದೆಲ್ಲವನ್ನೂ ಶಂಕಿಸುತ್ತಾ ನಂದಕುಮಾರನನ್ನು ಪ್ರಶ್ನೆಮಾಡಿದಳು. ಅಕೃತ್ರಿಮ ಸ್ವಭಾವದ ನಂದಕುಮಾರನು ನಡೆದುದನ್ನು ನಡೆದ ಹಾಗೆಯೇ ಆಕೆಯ ಮುಂದೆ ಹೇಳಿದನು. ಆಕೆಯು ಚಿಂತಾಕ್ರಾಂತೆಯಾಗಿ ತಲೆವಾಗಿ ನಿಂತಿದ್ದಳು. ಇದನ್ನು ನೋಡಿ ನಂದಕುಮಾರನು—ಅರವಿಂದ! ಇದೆಲ್ಲವೂ ನನ್ನ ದುರದೃಷ್ಟದ ದೋಷವು. ಇದಕ್ಕಾಗಿ ನಾನು ದುಃಖಪಡುವುದಿಲ್ಲ, ಹಣೆಯಲ್ಲಿ ಬರೆದಿರುವುದನ್ನು ತಪ್ಪಿಸಬಲ್ಲವರಾರು? ನಡೆಯಬೇಕಾದುದು ನಡೆದೇ ಹೋಗಲಿ, ಎಂದು ಮಾತನ್ನು ಮುಗಿಸಿದನು.

ಅರವಿಂದಮ್ಮನು ಆತನ ದುಃಖದಲ್ಲಿ ದುಃಖಗೊಂಡವಳಾಗಿ ಇಂತೆಂದಳು:—

"ನಂದ! ನಿಮ್ಮಿಬ್ಬರ ಸಂವಾದವನ್ನು ನಾನು ಗೋಪ್ಯವಾಗಿದ್ದುಕೊಂಡೇ ಕೇಳಿದೆನು. ನನ್ನ ತಂದೆಯು ನಿನ್ನ ವಿಷಯದಲ್ಲಿ ಕಠಿನವಾಗಿ ವರ್ತಿಸಲಾರನೆಂದು ನನಗೆ ದೃಢವಾದ ನಂಬುಗೆಯುಂಟು. ಆತನು ಮುದುಕನಾದುದರಿಂದ, ಅಡಿಗಡಿಗೂ ರೇಗುವುದು ಸ್ವಭಾವವೇ ಆಗಿರುವುದು. ಆತನ ರೇಗಾಟವು ನಿನ್ನ ವಿಷಯದಲ್ಲಿ ಫಲಕಾರಿಯಾಗಲಾರದು. ಆತನು ಅತ್ಯಂತ ಕೃಪಣನಾದುದರಿಂದ, ಹಣದಲ್ಲಿ ಪ್ರಾಣವನ್ನಿಟ್ಟುಕೊಂಡಿರುವನು. ಒಂದು ಕಾಸು ನಷ್ಟವಾಗುವುದಾದರೂ ಆತನು ಮೂರು ದಿನ ಅನ್ನವನ್ನೇ ಬಿಟ್ಟುಬಿಡುವನು."

ನಂದ—ನನ್ನ ಅಭಿಪ್ರಾಯವೂ ಹಾಗೆಯೇ ಇರುವುದು. ಒಂದು ವೇಳೆ ಆತನು ನ್ಯಾಯಸ್ಥಾನದಲ್ಲಿ ನನ್ನ ಮೇಲೆ ವಿವಾದವನ್ನು ಹೂಡಿದರೂ, ಹಣವನ್ನು ಬರಮಾಡಿಕೊಳ್ಳುವುದಕ್ಕೆ ಮತ್ತಾವ ಹೀನಮಾರ್ಗವನ್ನು ಅವಲಂಬಿಸಿದರೂ ನನಗೇನೂ ಭಯವಿಲ್ಲ. ನಾನು ಹಣವನ್ನು ಹತ್ತಿರವಿಟ್ಟುಕೊಂಡು ಹಣವಿಲ್ಲವೆಂದು ಅಪಲಾಪಮಾಡುವುದಾದರೆ, ಆಗ ನನಗೆ ಭಯವುಂಟು. ನನಗೆ ಈಗ ದುರವಸ್ಥೆಯುಂಟಾಗಿರುವಲ್ಲಿ ನಾನು ಆವುದಕ್ಕೂ ಹೆದರಬೇಕಾದುದೇನೂ ಇರುವುದಿಲ್ಲ.

ಅರವಿಂದ—ನಿನಗೆ ಉಪಕರಿಸುವ ಬಂಧುಗಳಾರೂ ಇಲ್ಲವೇ, ನಂದಕುಮಾರ?

ನಂದ—ಅರವಿಂದ! ನನ್ನನ್ನು ಕಷ್ಟದಿಂದ ಉದ್ಧಾರಮಾಡುವಂತಹ ಬಂಧುಗಳಾರೂ ಇಲ್ಲ. ಹಾಗಿದ್ದಿದ್ದರೆ, ಆ ಮಾರ್ಗವೇ ಬೇರೆಯಾಗಿರುತಿದ್ದಿತು.

ಅರವಿಂದ—ನಿನಗೆ ಬಂಧುಗಳಿರಲಿ, ಇಲ್ಲದಿರಲಿ, ನೀನು ಚಿಂತಿಸಬೇಕಾದುದೇನೂ ಇರುವುದಿಲ್ಲ. ನಾನು ನನ್ನ ತಂದೆಗೆ ಹೇಳಿ ಆತನನ್ನು ಸಮಾಧಾನಪಡಿಸುವೆನು. ಆತನು ನನ್ನ ಮಾತಿಗೆ ಪ್ರತಿಯಾಗಿ ಹೇಳಲಾರನು.

"ದೇವರು ನಿನಗೆ ಮಂಗಳವನ್ನುಂಟುಮಾಡಲಿ" ಎಂದು ಹೇಳಿ ನಂದಕುಮಾರನು ಹೊರಟು ಹೋದನು.

ಪರಂತಪನು ಈ ದೃಶ್ಯವೆಲ್ಲವನ್ನೂ ಕಣ್ಣಾರೆ ನೋಡಿ ಮನದಟ್ಟು ಮಾಡಿಕೊಂಡನು. ಇಷ್ಟಾದರೂ ತನ್ನ ನಿರ್ದಿಷ್ಟವಾದ ಕಾಲವು ಇನ್ನೂ ಬಾರದಿರುವುದನ್ನು ನೋಡಿ ಮತ್ತೆ ಆತನು ಹಾಗೆಯೇ ಕುಳಿತು ನೋಡಿದನು.

---

## ಹನ್ನೆರಡನೆಯ ಸಂಧಿ

### ಹಠದ ಹುಡುಗಿ

ಅರ್ಧಘಂಟೆಯಾದ ಬಳಿಕ ಅರವಿಂದಮ್ಮನು ತನ್ನ ತಂದೆಯ ಬಳಿಗೆ ಬಂದು—ಅಣ್ಣಾ ! ನನ್ನನ್ನು ಕರೆದುದೇತಕೆ? ಎಂದಳು.

ಪರಂತಪನು ತನ್ನ ಸರ್ವಾಂಗವನ್ನೂ ಕಿವಿಯಾಗಿ ಮಾಡಿಕೊಂಡು ಕೇಳುವುದಕ್ಕೆ ಕುಳಿತನು. ಈಕೆಯು ಆ ಮುದುಕನ ಮಗಳಾಗಿರಬೇಕೆಂದು ಊಹಿಸಿದ ಬಳಿಕ, ಇಂತಹ ಕುತ್ಸಿತನಾದ ಮುದುಕನಿಗೆ ಇಂತಹ ಸರ್ವಾಂಗಸುಂದರಿಯಾದ ಮಗಳಿರುವಳೆಂಬುದು ದೈವಲೀಲೆಯೇ ಹೊರತು ಮತ್ತೆ ಬೇರೆಯಲ್ಲ, ಎಂದು ಪರಂತಪನು ಅಚ್ಚರಿಗೊಂಡನು.

ಹುಡುಗಿಯು ಬಂದುದನ್ನಾಗಲಿ, ಆಕೆಯು ಮಾತನಾಡಿಸಿದುದನ್ನಾಗಲಿ ವೃದ್ಧನು ಕೇಳದೆಯೇ ಕೇವಲವಾಗಿ ಚಿಂತಾಮಗ್ನನಾಗಿದ್ದನು. ತಾನು ಮಾತನಾಡಿದುದು ತಂದೆಗೆ ಕೇಳಿಸಲಿಲ್ಲವೆಂದು ತಿಳಿದು ಹುಡುಗಿಯು ಮತ್ತೆ ಗಟ್ಟಿಯಾಗಿ—ಅಣ್ಣಾ ! ನನ್ನನ್ನು ಕರೆದುದೇತಕೆ? ಎಂದು ನುಡಿದಳು.

ಮುದುಕನು ತಟ್ಟನೆ ಎಚ್ಚರಗೊಂಡವನಾಗಿ ತನ್ನ ಮಗಳನ್ನು ಹತ್ತಿರದಲ್ಲಿ ಕುಳ್ಳಿರಿಸಿಕೊಂಡು—ಮಗು ! ನಿನ್ನೊಡನೆ ಮಾತನಾಡಬೇಕಾಗಿದ್ದುದರಿಂದ, ನಿನ್ನನ್ನು ಕೂಗಿದೆನು, ಎಂದು ಮಿದುನುಡಿಗಳನ್ನಾಡಿದನು.

ಅರವಿಂದ—ವಿಷಯವೇನಣ್ಣಾ ?

ವೃದ್ಧ—ನಂದಕುಮಾರನು ನನಗೆ ಸರ್ವನಾಶವನ್ನುಂಟುಮಾಡಿ ಹೊರಟುಹೋದನು. ಹಿಂದೊಂದು ದಿನ ನಾನು ನಂದಕುಮಾರನ ಒತ್ತಾಸೆಯ ಮೇಲೆ ಅವನ ಬಂಧುವೊಬ್ಬನಿಗೆ ೧೦,೦೦೦ ರೂಪಾಯಿಗಳ ಸಾಲವನ್ನು ಕೊಟ್ಟೆನು. ಆತನ ಬಂಧುವು ನನಗೆ ಪರಿಚಿತನಾಗಿರಲಿಲ್ಲ. ನಂದನು ಒತ್ತಾಸೆಯಾಗಿ ನಿಲ್ಲದೇ ಹೋಗಿದ್ದರೆ, ನಾನು ಆತನಿಗೆ ಒಂದು ಬಿಡಿಕಾಸನ್ನೂ ಸಾಲವಾಗಿ ಕೊಡುತ್ತಿರಲಿಲ್ಲ. ಈದಿನ ನಂದಕುಮಾರನು ಬಂದು ಹೇಳಿದ ಮಾತನ್ನು ಕೇಳಿದೊಡನೆಯೇ ನನ್ನ ತಲೆಯ ಮೇಲೆ ಅಂತರಿಕ್ಷವೇ ಕಳಚಿಬಿದ್ದಂತಾಯಿತು. ನಂದಕುಮಾರನು ಮನೆಯಿಂದ ಓಡಿಸಲ್ಪಟ್ಟಿರುವನು. ನನ್ನಿಂದ ಹಣವನ್ನು ಪಡೆದುಕೊಂಡು ಹೋದ ನಂದನ ಬಂಧುವು ವ್ಯಾಪಾರದಲ್ಲಿ ನಷ್ಟಹೊಂದಿದನಂತೆ. ಹೀಗೆಂದ ಮೇಲೆ ಆತನಿಂದ ಒಂದು ಕಾಸೂ ಹುಟ್ಟುವ ಹಾಗಿಲ್ಲ. ನಂದಕುಮಾರನೇ ಮೊದಲಿನಿಂದಲೂ ಆ ಹಣಕ್ಕೆ ಬಡ್ಡಿಯನ್ನು ತಂದುಕೊಡುತ್ತಿರುವನು. ಕಮಲಾ

ಕಾಂತನ ಅನಂತರದಲ್ಲಿ ನಂದನೇ ಉತ್ತರಾಧಿಕಾರಿಯಾಗಿ ನಿಲ್ಲುವನೆಂದು ನನಗೆ ಸಂಪೂರ್ಣವಾದ ಭರವಸೆಯಿದ್ದಿತು. ಕಾರಣವೇನೆಂದರೆ—ಕಮಲಾಕಾಂತನು ತನ್ನ ಮಗನ ಮಗನಾದ ಮಾರಕುಮಾರನು ದುರ್ಮಾರ್ಗಗಾಮಿಯೆಂದು ಚೆನ್ನಾಗಿಯೂ ಅರಿತುಕೊಂಡಿದ್ದನು. ಈಗ ನನ್ನ ಆಲೋಚನೆಯೆಲ್ಲವೂ ಹಾಳಾಗಿ ಹೋಯಿತು. ನಂದಕುಮಾರನು ಇಂದು-ಗೃಹತ್ಯಾಗಿಯಾಗಿರುವುದರಿಂದ, ನನ್ನ ಹಣವೆಲ್ಲವೂ ಮುಳುಗಿಯೇ ಹೋದುದು.

ಅರವಿಂದ—ಅಣ್ಣಾ ! ಇಷ್ಟು ದಿನಗಳ ವರೆಗೂ ನಂದನನ್ನು ಹೊಗಳುತ್ತಿದ್ದು, ಆತನಿಗೆ ಕಷ್ಟಕಾಲವೊದಗಿಬಂದಿರುವಲ್ಲಿ, ಆತನನ್ನು ನಿಂದಿಸುವುದು ಯುಕ್ತವಾಗಿಲ್ಲ. ಆತನು ನಿಮ್ಮ ಸಾಲವನ್ನು ತೀರಿಸುವುದಾಗಿ ಒಪ್ಪಿರುವನು, ಆದರೆ ಸ್ವಲ್ಪ ತಡವಾಗಬಹುದು. ಆದುದರಿಂದ ನೀವು ಕೆಲವು ಕಾಲದ ವರೆಗಾದರೂ ನಿರೀಕ್ಷಿಸುವುದು ಒಳ್ಳೆಯದು.

ವೃದ್ಧ—ಈಗಣ ಕಾಲದಲ್ಲಿ ೧೦,೦೦೦ ರೂಪಾಯಿಗಳೆಂಬುದು ಸಾಮಾನ್ಯವಲ್ಲ. ಅಷ್ಟನ್ನು ಸಂಪಾದಿಸಬೇಕಾದರೆ ತಾಯಿಯಿಟ್ಟ ಬಜೆಯೆಲ್ಲವೂ ಕರಗಿ ಹೋಗುವುದು. ಹೀಗಿರುವಲ್ಲಿ ನಂದಕುಮಾರನು ಅಷ್ಟು ಹಣವನ್ನು ಸಂಪಾದಿಸಿ ನನಗೆ ತಂದುಕೊಡುವುದೆಂಬುದು ನಂಬುಗೆಗೆ ಅರ್ಹವಾದುದಲ್ಲ. ಮತ್ತೊಂದು ವಿಷಯವೇನೆಂದರೆ — ನಂದನು ಕಮಲಾಕಾಂತನ ಆಸ್ತಿಗೆ ಉತ್ತರಾಧಿಕಾರಿಯಾಗುವನೆಂಬ ಊಹೆಯಿಂದ ನಾನು ನಿನ್ನನ್ನು ಆತನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಆಲೋಚಿಸಿದ್ದೆನು. ಈಗ ಆ ಆಸೆಯೂ ತಪ್ಪಿಹೋಯಿತು. ಆದುದರಿಂದ ನೀನು ಇನ್ನು ಮೇಲೆ ಆತನ ಕಣ್ಣಿಗೆ ಬೀಳುವುದಾಗಲಿ, ಆತನೊಡನೆ ಮಾತನಾಡುವುದಾಗಲಿ ಇವಾವುದನ್ನೂ ಮಾಡಲಾಗದು.

ಅರವಿಂದ—ಅದೇಕಣ್ಣಾ ?

ವೃದ್ಧ—ಈಗ ನನ್ನ ಮೊದಲಿನ ಇಷ್ಟವು ಬದಲಾಯಿಸಿ ಹೋಗಿರುವುದು. ಇನ್ನು ಮುಂದೆ ಮಾರಕುಮಾರನೇ ಕಮಲಾಕಾಂತನ ಉತ್ತರಾಧಿಕಾರಿಯಾಗುವುದರಿಂದ, ನಾನು ನಿನ್ನನ್ನು ಆತನಿಗೆ ಕೊಟ್ಟು ವಿವಾಹಮಾಡಬೇಕೆಂದೆಣಿಸಿರುವೆನು.

ಅರವಿಂದ—ಅಣ್ಣಾ ! ನಿಮ್ಮಲ್ಲಿ ಬೇಕಾದ ಹಾಗೆ ಹಣವಿರುವುದು. ತಮ್ಮ ಅನಂತರದಲ್ಲಿ ಅದೆಲ್ಲವೂ ನನಗೇ ಸೇರತಕ್ಕುದಾಗಿರುವುದು. ಹೆಚ್ಚಿನ ಹಣದಿಂದ ನನಗಾಗುವುದೇನು ? ಮಾರಕುಮಾರನು ಕೆಟ್ಟ ನಡತೆಯುಳ್ಳವನೆಂದು ತಾವು ನನಗೆ ಆಗಿಂದಾಗ ತಿಳಿಸೋಣವಾಗಿದೆ. ಆತನು ಮಾಡಬಾರದ ಕೆಟ್ಟ

ಕೆಲಸವಿಲ್ಲವೆಂದು ನಾನೂ ಕೇಳಿರುವೆನು. ಹೀಗಿರುವಲ್ಲಿ ತಾವು ನನ್ನನ್ನು ಕಂಡು ಕಂಡೂ ಹಾಳ ಬಾವಿಯಲ್ಲಿ ತಳ್ಳಿಬಿಡುವಿರೇನು ?

ವೃದ್ಧ—ಹಣ ! ಹಣ !! ಹಣವೇ ದೊಡ್ಡದು ; ಆರಲ್ಲಿ ಹಣವಿರುವುದೋ ಆತನೇ ಲೋಕಮಾನ್ಯನು. ಲೋಕದಲ್ಲಿ ಹಣವಿದ್ದವನೇ ಸತ್ಪುರುಷನೂ, ಸತ್ಕುಲಪ್ರಸೂತನೂ, ರೂಪವಂತನೂ, ವಿದ್ಯಾವಂತನೂ, ಬುದ್ಧಿವಂತನೂ, ಕೀರ್ತಿವಂತನೂ, ಪ್ರಾತಸ್ಸ್ಮರಣೀಯನೂ, ನಿನಗೆ ತಕ್ಕವರನೂ ಆಗಿರುವನು.

ಅರವಿಂದ—ತಂದೆಯೇ ! ನಾನು ಇನ್ನೂ ಹುಡುಗಿಯಲ್ಲ. ಒಳ್ಳೆಯದು ಕೆಟ್ಟುದು ಎಂಬ ವಿವೇಚನಾಶಕ್ತಿಯು ನನಗುಂಟು. ನಾನು ತಿಳಿತಿಳಿದೂ ಅಸತ್ಪುರುಷನಾದ ಮಾರಕುಮಾರನನ್ನು ಮದುವೆಯಾ—

ವೃದ್ಧ—(ಮಾತು ಮುಗಿಯುವುದರೊಳಗಾಗಿ) ಮದುವೆಯಾಗೆಯಾ ? ನೀನು ಹುಡುಗಿಯಾಗಿ ನನ್ನ ಮಾತನ್ನು ಮೀರುವಷ್ಟಾದೆಯಾ ? ನಾನು ಇಷ್ಟಪಟ್ಟವನನ್ನು ನೀನು ಮದುವೆಯಾಗುವೆಯೋ, ಇಲ್ಲವೋ, ನಾನೇ ನೋಡಿಕೊಳ್ಳುವೆನು. ಚೆನ್ನಾಗಿ ಆಲೋಚಿಸಿ ನೋಡು, ದುಡುಕಬೇಡ. ನನ್ನ ಮಾತನ್ನು ನೀನು ಮೀರಿ ನಡೆವುದಾದರೆ, ನಿನ್ನನ್ನು ಕೋತಿಯಂತೆ ಕುಣಿಸಿಬಿಡುವೆನು. ನನ್ನ ಇಷ್ಟಕ್ಕೆ ವಿರೋಧವಾಗಿ ನಡೆಯುವವರಿಗೆ ನಾನು ಬೆನ್ನ ಹತ್ತಿದ ಬೇತಾಳನೆಂದು ತಿಳಿ.

ಅರವಿಂದ—ಕಮಲಾಕಾಂತನ ಮನೆಯಲ್ಲಿ ಒಬ್ಬ ಹುಡುಗಿಯು ಪಾಲಿತೆಯಾಗಿರುವಳಂತೆ. ಮಾರಕುಮಾರನು ಆಕೆಯನ್ನೇ ಪ್ರೀತಿಸುತ್ತಿರುವನಂತೆ. ಇಷ್ಟರಲ್ಲಿಯೇ ಅವರಿಬ್ಬರಿಗೂ ವಿವಾಹವಾಗುವುದೆಂದು ನಾನು ಕೇಳಿರುವೆನು.

ವೃದ್ಧ—ಅದು ಸುಳ್ಳಿನ ಸುದ್ದಿ. ಒಂದು ವೇಳೆ ನೀನು ಹೇಳುವಂತೆ ನಡೆವುದಾದರೆ, ನಾನು ಯುಕ್ತಿಯಿಂದ ಆ ಮದುವೆಯನ್ನು ಮುರಿದು ಬಿಡುವೆನು. ಇದಕ್ಕಾಗಿ ನೀನು ಚಿಂತಿಸಬೇಕಾದುದೇನೂ ಇರುವುದಿಲ್ಲ.

ಅರವಿಂದ—ತಂದೆಯೇ ! ನನ್ನನ್ನು ಕ್ಷಮಿಸೋಣವಾಗಲಿ. ನನಗೆ ಮದುವೆಯಿಂದ ಪ್ರಯೋಜನವೇನೂ ಇಲ್ಲ. ನಾನು ಆವಾಗಲೂ ನಿನ್ನ ಸೇವೆಯನ್ನೇ ಮಾಡಿಕೊಂಡು ನನ್ನ ಜನ್ಮವನ್ನು ನೀಗಿಕೊಳ್ಳುವೆನು.

ವೃದ್ಧ—ಬುದ್ಧಿಯಿಲ್ಲದ ಮಗುವೆ! ಇಂತಹ ಮಾತುಗಳಿಂದ ಏನು ಪ್ರಯೋಜನ? ನೀನು ದರಿದ್ರನಾಗಿ ಬೀದಿಯ ಬಿಕಾರಿಯೆನಿಸಿದ ಆ ನಂದ

ಕುಮಾರನನ್ನು ಪ್ರೀತಿಸುತ್ತಿರುವಂತೆ ತೋರುವುದು. ಆದುದರಿಂದಲೇ ನಿನಗೆ ನನ್ನ ಮಾತು ಹಿಡಿಯುವುದಿಲ್ಲ.

ಅರವಿಂದ—ಅಣ್ಣಾ ! ಹಣಕ್ಕಾಗಿ ಇಷ್ಟೇಕೆ ನಿನಗೆ ಹಾಹಾಕಾರವು ? ನಿನ್ನಲ್ಲಿ ತಿಂದು ತೇಗುವಷ್ಟು ಹಣವಿರುವುದು. ಇದನ್ನು ಉಳಿಸಿಕೊಂಡರೆ ಸಾಲದೇ ? ನನಗಾದರೋ ಹಣದಲ್ಲಿ ಅಭಿರುಚಿಯು ಕಡಮೆ, ಆದುದರಿಂದ ಹಣಕ್ಕಾಗಿ ನಾನು ಅಕಾರ್ಯವನ್ನು ಒಪ್ಪಿಕೊಳ್ಳಲಾರೆನು.

"ಪಾಪೀಯಸಿ ! ನನ್ನಿದಿರಿನಲ್ಲಿ ನಿಲ್ಲಬೇಡ ; ದೂರವಾಗಿ ತೊಲಗಿ ಹೋಗು," ಎಂದು ಮುದುಕನು ಹುಡುಗಿಯನ್ನು ಹೊಡದಟ್ಟಿದನು. ಅರವಿಂದ ಸುಂದರಿಯು ಗಳಗಳನೆ ಅಳುತ್ತಾ ಅಲ್ಲಿಂದೆದ್ದು ಹೊರಟು ಹೋದಳು.

ಮುದುಕನ ಕೋಪವು ತಲೆ ಮೀರಿತು. ಕೊಂಚ ಹೊತ್ತು ಕೋಪದ ತಾಪದಿಂದ ತಲ್ಲಣಿಸುತ್ತಾ ಕುಳಿತಿದ್ದ ಬಳಿಕ, ಸೇವಕನನ್ನು ಕರೆದು ಕೂಡಲೆಯೇ ಕಾಲರುದ್ರನನ್ನು ಕರೆದುಕೊಂಡು ಬರುವಂತೆ ಅಪ್ಪಣೆ ಮಾಡಿದನು. ಅಪ್ಪಣೆಯೆಂದು ಭೃತ್ಯನು ತೆರಳಿದನು.

ಕಾಲರುದ್ರನು ನಮ್ಮ ಪ್ರಿಯ ಪಾಠಕ ಮಹಾಶಯರಿಗೆ ಹೊಸಬನೇನೂ ಅಲ್ಲ. ಆತನು ಆಗಿಂದಾಗ ವೃದ್ಧನ ಕೆಲಸಗಳನ್ನು ನೆರವೇರಿಸಿ ಕೊಡುತ್ತಿದ್ದನು. ಆತನ ಮನೆಯು ವೃದ್ಧನ ಮನೆಯ ಬಳಿಯಲ್ಲಿಯೇ ಇದ್ದಿತು. ಭೃತ್ಯನು ಬಂದು ಕರೆದ ಕೂಡಲೆ, ಕಾಲರುದ್ರನು ವೃದ್ಧನ ಬಳಿಗೈತಂದು—ಮಹಾಶಯ ! ಏನಪ್ಪಣೆ ? ಎಂದನು.

ಮುದುಕನು ನಗುತ್ತಾ—ಮಿತ್ರನೆ ! ವಿಶೇಷವಾದ ಕೆಲಸವಿರುವುದು. ಎಲ್ಲಾ ಕೆಲಸಗಳಲ್ಲಿಯೂ ನೀನೇ ನನಗೆ ಸಹಾಯನು. ಅದಕ್ಕಾಗಿಯೇ ನಿನ್ನನ್ನು ಬರಮಾಡಿಕೊಂಡೆನು, ಎಂದು ಮಾತನಾಡಿದನು.

ಕಾಲ—ಕೆಲಸವೆಂಥದು, ಮಹಾಶಯ ?

ವೃದ್ಧ—ವಿಶ್ರಾಂತಿಯನ್ನು ತೆಗೆದುಕೊಳ್ಳು. ಕೆಲಸದ ವಿಚಾರವು ಆ ಮೇಲಾಗಲಿ. ನನ್ನ ಅರವಿಂದಮ್ಮನನ್ನು ನೀನು ಬಲ್ಲೆಯಷ್ಟೇ ?

ಕಾಲ—ಆಕೆಯನ್ನು ನಾನು ಕಾಣೆನೇ ?

ವೃದ್ಧ—ನಾನು ಅವಳಿಗೆ ಮದುವೆ ಮಾಡಬೇಕೆಂದಿರುವೆನು. ಈಗಾಗಳೇ ಅವಳಿಗೆ ವಯಸ್ಸಾಗಿ ಹೋಗಿರುವುದು.

ಕಾಲ—ಸರಿಯಾದ ಆಲೋಚನೆ. ಮದುವೆಯಾಗುವುದಕ್ಕೆ ಆಕೆಗೆ ಸರಿಯಾದ ವಯಸ್ಸು ಬಂದಿರುವುದು. ವರನಾರು ?

ವೃದ್ಧ—ನಾನು ಸರಿಯಾದ ವರನನ್ನೇ ಹುಡುಕುತ್ತಿರುವೆನು. ಒಂದು ವೇಳೆ ಅರವಿಂದ ಸುಂದರಿಯನ್ನು ನಿನಗೆ ಕೊಟ್ಟು ವಿವಾಹ ಮಾಡುವುದಾದರೆ, ನಿನ್ನ ಅಡ್ಡಿಯೇನೂ ಇರುವುದಿಲ್ಲವಷ್ಟೇ ?

ಕಾಲ— ಅಡ್ಡಿಯೆಂದರೇನು ? ಅರವಿಂದಸುಂದರಿಯನ್ನು ವಿವಾಹ ವಾಗಲು ಇಷ್ಟಪಡದಾತನು ಮನುಷ್ಯನಲ್ಲದಿರಬೇಕು.

ವೃದ್ಧ—ಹಾಗಾದರೆ ಸರಿ ; ನಮ್ಮ ಹುಡುಗಿಯನ್ನು ನಿನಗೆ ಕೊಟ್ಟು ವಿವಾಹ ಮಾಡುವೆನು. ಆದರೆ—

ಕಾಲ—"ಆದರೆ," ಎಂದರೇನು ? ವಿಶದವಾಗಿ ತಿಳಿಸೋಣವಾಗಲಿ. ಆಶೆಯನ್ನು ತೋರಿ ನಿರಾಶನನ್ನಾಗಿ ಮಾಡಲಾಗದು.

ವೃದ್ಧ—ಅಷ್ಟು ದುಡುಕಬಾರದು, ಕೇಳು. ನನ್ನ ಮಗಳನ್ನು ಮದುವೆ ಯಾಗಬೇಕೆಂಬ ಇಷ್ಟವು ನಿನಗಿರುವುದಾದರೆ, ನೀನು ಅದೊಂದು ಗುರುತರವಾದ ಕೆಲಸವನ್ನು ನೆರವೇರಿಸಿ ಕೊಡಬೇಕು. ಅದು ನಿನಗೆ ಸಮ್ಮತವಷ್ಟೇ ?

ಕಾಲ—ಅರವಿಂದಳನ್ನು ಮದುವೆಯಾಗುವುದಕ್ಕಾಗಿ ನಾನು ಆವ ಕೆಲಸ ವನ್ನಾದರೂ ಮಾಡುವೆನು. ನನ್ನ ಯೋಗ್ಯತೆಯು ತಮಗೆ ಮೊದಲಿನಿಂದಲೂ ಚೆನ್ನಾಗಿಯೂ ಗೊತ್ತೇ ಇರುವುದು.

ವೃದ್ಧ—ಗೊತ್ತಿಲ್ಲದೇ ಉಂಟೇ ? ಎಷ್ಟೋ ಜನರಿದ್ದರೂ ನಿನ್ನನ್ನೇ ಹೇಳಿ ಕಳುಹಿಸಿದುದೇತಕೆ ?

ಕಾಲ—ಅಪ್ಪಣೆಯಾಗಲಿ.

ವೃದ್ಧ—ನಾನು ಹೇಳಿದ ಹಾಗೆ ಕೆಲಸಮಾಡುವೆನೆಂದು ಪ್ರಮಾಣ ಮಾಡು.

ಕಾಲ—ನಿಜವಾಗಿಯೂ ನಾನು ಅರವಿಂದಸುಂದರಿಯನ್ನು ಪಡೆವು ದಾದರೆ.

ವೃದ್ಧ—ನನ್ನ ಕಾರ್ಯವು ನೆರವೇರುವುದಾದರೆ, ಈಶ್ವರಸಾಕ್ಷಿಯಾ ಗಿಯೂ ಅರವಿಂದಮ್ಮನನ್ನು ನಿನಗೆ ಕೊಟ್ಟು ವಿವಾಹ ಮಾಡುವೆನು.

ಕಾಲ—ಈಶ್ವರ ಸಾಕ್ಷಿಯಾಗಿಯೂ ತಾವು ಹೇಳುವ ಕೆಲಸವನ್ನು ಪ್ರತಿಯಾಡದೆ ನೆರವೇರಿಸಿಕೊಡಲುಳ್ಳವನು. ಈಗಳಾದರೂ ಕೆಲಸವೆಂಥದೆಂಬುದನ್ನು ತಿಳಿಸೋಣವಾಗಲಿ.

ವೃದ್ಧ—ಒಂದು ವ್ಯಕ್ತಿಯನ್ನು ಈ ಪ್ರಪಂಚದಿಂದ ಹೊರಗೆ ಸಾಗಿಸಿಬಿಡಬೇಕು. ಇದು ಸಾಧ್ಯವೇ ?

ಕಾಲ—ಅನಾಯಾಸವಾಗಿ ಸಾಗಿಸಿ ಬಿಡುವೆನು. ನನಗೆ ಇಂತಹ ಕೆಲಸಗಳೇನೂ ಹೊಸದಲ್ಲ. ವ್ಯಕ್ತಿಯೆಂಥದು ?

ವೃದ್ಧ—ನಾನು ಎಲ್ಲವನ್ನೂ ಗುಟ್ಟಾಗಿಯೇ ನೆರವೇರಿಸಬೇಕು. ಹೊರಗೆ ಆರಾದರೂ ಸಂಚರಿಸುತ್ತಿರುವರೇ, ನೋಡು ?

ಕಾಲರುದ್ರನು ವೃದ್ಧನ ಮಾತಿನಂತೆಯೇ ಹೊರಗೆ ಹೋಗಿ ನೋಡಿಕೊಂಡು ಬಂದು—ಹೊರಗೆ ಆರೂ ಸುಳಿದಾಡುತ್ತಿಲ್ಲ, ಮಹಾಶಯ! ಎಂದು ನುಡಿದನು.

ವೃದ್ಧ—ಆತನು ನಿನಗೆ ಪರಿಚಿತನೇ ಅಹುದು. ನಂದಕುಮಾರನೆಂದು ಆತನ ಹೆಸರು.

ಕಾಲ—ನಂದಕುಮಾರನೇ ? ನಿಮ್ಮ ಹುಡುಗಿಯನ್ನು ಆತನಿಗೆ ಕೊಟ್ಟು ವಿವಾಹ ಮಾಡುವುದಾಗಿ ನೀವು ನಿಶ್ಚಯಮಾಡಿಕೊಂಡಿರಲಿಲ್ಲವೇ ?

ವೃದ್ಧ—ಅಹುದಹುದು.

ಕಾಲ—ಅಂಥವನ ಮೇಲೆ ಈಗ ಆಕ್ರೋಶವೇಕೆ ?

ವೃದ್ಧ—ಅವನು ನನಗೆ ಸರ್ವನಾಶವನ್ನೇ ಉಂಟುಮಾಡಿರುವನು. ಆ ನೀಚನು ನನಗೆ ಕೊಡಬೇಕಾದ ೧೦,೦೦೦ ರೂಪಾಯಿಗಳನ್ನೇ ನುಂಗಿಬಿಟ್ಟು ಕುಳಿತಿರುವನು.

ಮತ್ತೊಂದು ವಿಷಯವೇನೆಂದರೆ—ನಮ್ಮ ಹುಡುಗಿಯ ಭಾವಭಂಗಿಗಳನ್ನು ನೋಡಿದರೆ, ಆಕೆಯು ನಂದಕುಮಾರನನ್ನೇ ಪ್ರೀತಿಸುತ್ತಿರುವಂತೆ ತೋರಿಬರುತ್ತಿರುವುದು. ನನ್ನ ಮಗಳು ದರಿದ್ರನಾದ ಭಿಕ್ಷುಕನನ್ನು ವರಿಸಕೂಡದೆಂಬುದೇ ನನ್ನ ಅಭಿಲಾಷೆಯು. ಈ ನಡುವೆ ನಂದಕುಮಾರನು ಬೀದಿಯ ಬಿಕಾರಿಯಾಗಿ ಹೋಗಿರುವನು. ಆದುದರಿಂದಲೇ ನೀನು ಆತನನ್ನು ಕೊನೆಗಾಣಿಸುವುದಾದರೆ, ಅರವಿಂದ ಸುಂದರಿಯು ನಿನ್ನ ಕೈಸೇರುವಳು.

ಕಾಲರುದ್ರನು ಕೊಂಚ ಹೊತ್ತು ಪರ್ಯಾಲೋಚಿಸಿದವನಾಗಿ—ಮಹಾಶಯ! ನನ್ನ ಬಳಿಯಲ್ಲಿಯೂ ಹಣಕಾಸುಗಳೇನೂ ಇಲ್ಲ; ನಾನೂ ಬೀದಿಯ ಬಿಕಾರಿ, ಹೀಗೆಂದ ಮೇಲೆ ತಮ್ಮ ಮಗಳನ್ನು ನನಗೆ ಕೊಟ್ಟು ವಿವಾಹವಾಗುವ ಪರಿಯೆಂತಹುದು?

ವೃದ್ಧನು ಕೋಪದಿಂದ ಕೆಂಡಗೊಂಡವನಾಗಿ ಕಾಲರುದ್ರನನ್ನು ಕುರಿತು ಇಂತೆಂದನು:—

"ಪ್ರತಿಹಿಂಸೆ, ಕಾಲರುದ್ರ! ಪ್ರತಿಹಿಂಸೆ. ಪ್ರತಿಹಿಂಸೆಯೆಂಬ ಕಾಲಾಗ್ನಿಯು ನನ್ನನ್ನು ಸುಟ್ಟು ಬೂದಿಮಾಡುತ್ತಿರುವುದು. ಆರು ನನಗೆ ಸರ್ವನಾಶವನ್ನುಂಟುಮಾಡಿದನೋ ಆತನನ್ನು ನಾನೂ ಸರ್ವನಾಶಕ್ಕೆ ಈಡುಮಾಡಿ ಬಿಡುವೆನು. ನನ್ನ ಹುಡುಗಿಯು ಆವನನ್ನು ಪ್ರೀತಿಸುತ್ತಿರುವಳೋ, ಅಂತಹ ಚಂಡಾಲನನ್ನು ನಾನು ನಿರ್ಮೂಲವಮಾಡದೇ ಬಿಡೆನು. ಇದಕ್ಕಾಗಿಯೇ ನಿನ್ನ ಸಾಹಾಯ್ಯವನ್ನು ಬೇಡಿರುವೆನು. ನಿನ್ನಲ್ಲಿ ಹಣವಿಲ್ಲವೆಂಬುದನ್ನು ನಾನೂ ಬಲ್ಲೆನು, ಆದರೆ ನನ್ನಲ್ಲಿ ಹಣವಿಲ್ಲವೇ? ನನ್ನ ಹಣವೆಲ್ಲವೂ ನನ್ನ ಮಗಳದು. ನನ್ನ ಅನಂತರದಲ್ಲಿ ನೀವುಗಳೇ ಅದಕ್ಕೆ ಉತ್ತರಾಧಿಕಾರಿಗಳು.

ಕಾಲರುದ್ರನು ಈ ಮಾತನ್ನು ಕೇಳಿ ತನ್ನೊಳಗೆ ತಾನೇ ಸಂತೋಷಪಟ್ಟುಕೊಂಡನು. ಆತನು ಒಂದು ಕ್ಷಣಕಾಲ ಸುಮ್ಮನಿದ್ದ ಬಳಿಕ ವೃದ್ಧನನ್ನು ಕುರಿತು—ಮಹಾಶಯ! ಬೇಗನೆಯೇ ನಿಮ್ಮ ಉದ್ದೇಶವನ್ನು ನೆರವೇರಿಸಿ ಕೊಡುವೆನು. ಅಪ್ಪಣೆಯಾದರೆ ಈಗ ತೆರಳುವೆನು, ಎಂದನು.

ವೃದ್ಧನು ಗಂಭೀರಭಾವವನ್ನು ತಾಳಿ ಮಂದ ಸ್ವರದಿಂದ—ಮಿತ್ರನೇ! ಎಚ್ಚರಿಕೆಯಿಂದ ಕೆಲಸಮಾಡಬೇಕು. ನಮ್ಮ ಗುಟ್ಟು ಮತ್ತಾರಿಗೂ ಗೊತ್ತಾಗಬಾರದು. ಅರವಿಂದಸುಂದರಿಗಂತೂ ಇದರ ಸುಳಿವೇ ಗೊತ್ತಾಗದಂತೆ ನೋಡಿಕೊಳ್ಳುತ್ತಿರಬೇಕು, ಎಂದು ಮಾತನಾಡಿದನು.

"ಈ ವಿಷಯಗಳೆಲ್ಲವನ್ನೂ ತಾವು ನನಗೆ ತಿಳಿಯ ಹೇಳಬೇಕಾದುದೇನೂ ಇರುವುದಿಲ್ಲ. ನನ್ನ ಕೆಲಸವನ್ನಾದರೂ ನೋಡೋಣವಾಗಲಿ. ಮುಂದಕ್ಕೆ ಎಲ್ಲವೂ ನಿಮಗೇ ಗೊತ್ತಾಗುವುದು," ಎಂದು ಹೇಳಿ ಕಾಲರುದ್ರನು ಮುದುಕನ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಮನೆಗೆ ಹೊರಟುಹೋದನು.

## ಹದಿಮೂರನೆಯ ಸಂಧಿ

### ಇಬ್ಬರು ಪತ್ತೇದಾರರು

ಪರಂತಪನು ಹಿಂದಣ ಸಂಧಿಯಲ್ಲಿ ವರ್ಣಿಸಿದ ವಿಷಯಗಳೆಲ್ಲವನ್ನೂ ಕಿವಿಯಾರೆ ಕೇಳಿ ಅಚ್ಚರಿಗೊಂಡನು. ಬಳಿಕ ಅವನ ಮನದಲ್ಲಿ ಆಲೋಚನೆ ಗಿಟ್ಟಿತು :—

"ಏನು! ಮುದುಕನು ಕೊನೆಗೆ ಅರವಿಂದಸುಂದರಿಯನ್ನು ಕಳ್ಳನ ಕೈಗೆ ಸಮರ್ಪಣಮಾಡುವಂತಾದುದೇ? ಅರವಿಂದಮ್ಮನಾದರೋ ನಂದಕುಮಾರನನ್ನೇ ಪ್ರೀತಿಸುತ್ತಿರುವಳು. ನಂದಕುಮಾರನು ಸ್ವಭಾವದಿಂದ ಯೋಗ್ಯನಾದ ಹುಡುಗನು. ಇಂತಹ ವರನು ದೊರೆವುದು ಎಲ್ಲರ ಪಾಲಿಗೂ ಬಂದುದಲ್ಲ. ಪರೋಪಕಾರ ಬುದ್ಧಿಯಿಂದ ಮತ್ತೊಬ್ಬರಿಗೆ ಪ್ರಯೋಜನವಾಗಲೆಂದು ನಂದನು ತನ್ನ ಬಂಧುವಿಗೆ ಹಣವನ್ನು ಕೊಡಿಸಿಕೊಟ್ಟನು. ಇದಲ್ಲವೇ ಅವನು ಮಾಡಿದ ಮಹಾಪರಾಧವು! ಕೇಳಿದ ಕೂಡಲೆಯೇ ನಂದನು ಹಣವನ್ನು ತಂದೊಪ್ಪಿಸಲಿಲ್ಲವೆಂಬ ಆಗ್ರಹದಿಂದ, ಈ ವೃದ್ಧನು ಸರಳ ಹೃದಯೆಯಾದ ತನ್ನ ಮಗಳನ್ನು ನಿರ್ಮೂಲ ಮಾಡುವುದಕ್ಕಾಗಿ ಕಳ್ಳನ ಕೈಗೆ ಕೊಟ್ಟುಬಿಡುವುದಕ್ಕೆ ಮುಂದುವರಿದು ಬಂದು ನಿಂದಿರುವನಲ್ಲಾ! ಭಗವಂತನ ಸೃಷ್ಟಿಯಲ್ಲಿ ಎಂಥೆಂಥಹ ವಿಲಕ್ಷಣ ಸ್ವಭಾವದವರು ಜನ್ಮಿಸಿ, ಸೃಷ್ಟಿಗೇ ಅಪಕೀರ್ತಿಯನ್ನು ತಂದೊಡ್ಡುವವರಾಗಿರುವರು. ಇದೇನು, ಮಾನವ ಲೀಲೆಯೇ—ಇಲ್ಲವೆ, ದಾನವ ಲೀಲೆಯೇ? ಈ ಪ್ರಪಂಚದಲ್ಲಿ ಎಂಥೆಂಥಹ ಮಾನವರೂಪದ ಪಿಶಾಚರು ಅಡಗಿರುವರೋ ಬಲ್ಲವರಾರು!"

ಪರಂತಪನು ಹೀಗೆ ಚಿಂತಿಸುತ್ತಿರುವಷ್ಟರಲ್ಲಿಯೇ ರಾತ್ರಿಯು ಕಳೆದು ಅರ್ಧರಾತ್ರದ ಸಮಯವಾಯಿತು. ಕಗ್ಗತ್ತಲೆಯು ಎಲ್ಲೆಲ್ಲಿಯೂ ವ್ಯಾಪಿಸಿತು. ಆಕಾಶದಲ್ಲಿ ಮೇಘಗಳು ದಟ್ಟವಾಗಿ ಆವರಿಸಿಕೊಂಡು ಬಂದುವು. ಈ ಅಂಧಕಾರದಲ್ಲಿ ಕಣ್ಣುಗಳಿದ್ದರೂ ಕೃಪಣನ ಹಣದಂತೆ ಆವ ಪ್ರಯೋಜನಕ್ಕೂ ಬಾರದೇ ಹೋದುವು. ಪರಂತಪನು ಈ ಸನ್ನಿವೇಶವನ್ನು ನೋಡಿ ತಪ್ಪಿಸಿಕೊಂಡು ಹೋಗುವುದಕ್ಕೆ ಇದೇ ಸರಿಯಾದ ಕಾಲವೆಂದರಿತು ತನ್ನ ಕೋಣೆಯಿಂದ ಹೊರಗೆ ಬಂದು ನೋಡಿದನು. ಮೇಲಂತಸ್ತಿನ ಬಾಗಿಲು ಹೊರಗಡೆಯಿಂದ ಭದ್ರಪಡಿಸಲ್ಪಟ್ಟಿದ್ದಿತು. ಇಷ್ಟರಿಂದಲೇ ಪರಂತಪನು ಎದೆಗೆಡದವನಾಗಿ, ತನ್ನನ್ನು ಕಟ್ಟಿಹಾಕಿದ್ದ ಹಗ್ಗವನ್ನು ಒಂದೆಡೆಗೆ ಬಿಗಿದು ಅದರ ಸಾಹಾಯ್ಯದಿಂದ ಕೆಳಗೆ ಜಾರಿಕೊಂಡು ಬಂದು ಸರಕಾರದ ರಸ್ತೆಯಲ್ಲಿ ಸೇರಿದನು. ಬಳಿಕ ಆತನು

'ಬದುಕಿದೆಯಾ ಬಡ ಜೀವವೇ!' ಎಂದುಕೊಂಡು ತಡಮಾಡದೆಯೇ ತನ್ನ ಮನೆಗೆ ಹೊರಟು ಬಂದುಬಿಟ್ಟನು.

ಪರಂತಪನು ಮನೆಗೆ ಬಂದು ಒಂದು ಕ್ಷಣಕಾಲ ವಿಶ್ರಾಂತಿಯನ್ನು ತೆಗೆದು ಕೊಂಡು ಅಲ್ಪಾಹಾರವನ್ನು ಸೇವಿಸಿದ ಬಳಿಕ, ತನ್ನ ಪರಮ ಮಿತ್ರನಾದ ಅನಂತ ರತ್ನನನ್ನು ನೋಡುವುದಕ್ಕಾಗಿ ಆತನ ಮನೆಗೆ ತೆರಳಿದನು.

ಅನಂತರತ್ನನು ಪರಂತಪನನ್ನು ಕಂಡಕೂಡಲೆ ನಗೆಗೊಂಡು—ಪರಂತಪ! ಕಳ್ಳರು ಸಿಕ್ಕಿದರೇನು? ನಿಮ್ಮ ಮುಖವನ್ನು ನೋಡಿದರೆ, ಏನೋ ಹೊಸ ಸಮಾ ಚಾರವನ್ನು ನನಗೆ ತಿಳಿಸುವುದಕ್ಕಾಗಿ ಇಲ್ಲಿಗೆ ಬಂದಂತಿದೆ, ಎಂದು ನುಡಿದನು.

ಪರಂತಪ—ವಿಶೇಷ ಸಮಾಚಾರವನ್ನು ತಿಳಿಸುವುದಕ್ಕಾಗಿಯೇ ಇಲ್ಲಿಗೆ ಬಂದಿರುವೆನು. ಈ ದಿನದ ಸಾಯಂಕಾಲದಲ್ಲಿ ತಾವು ನನಗೆ ಕಾಗದವನ್ನೇತಕೆ ಬರೆಯೋಣವಾಯಿತು?

ಅನಂತರತ್ನನು ಚಮತ್ಕೃತನಾಗಿ—ಮಹಾಶಯ! ಏನು? ನಾನು-ನಿನಗೆ- ಪತ್ರವನ್ನು—ಬರೆದೆನೇ? ಎಷ್ಟು ಜ್ಞಾಪಕಕ್ಕೆ ತಂದು ಕೊಂಡರೂ, ನಾನು ನಿನಗೆ ಪತ್ರ ಬರೆದಂತೆ ಕಂಡುಬರುತ್ತಿಲ್ಲವಲ್ಲಾ! ಎಂದುತ್ತರ ವಿತ್ತನು.

ಪರಂತಪನು ಮುಂದೆ ಆವ ಮಾತನ್ನೂ ಆಡದೆಯೇ ತನ್ನ ಕಿಸೆಯಿಂದ ಒಂದು ಪತ್ರವನ್ನು ಹೊರಗೆ ತೆಗೆದು ಅದನ್ನು ಅನಂತರತ್ನನ ಕೈಗೆ ಕೊಟ್ಟನು. ಅನಂತರತ್ನನು ಅದನ್ನು ಮೇಲಿನಿಂದ ಕೊನೆಯ ವರೆಗೂ ಓದಿ ಬೆರಗಾದವನಾಗಿ— ಆಶ್ಚರ್ಯ! ಆಶ್ಚರ್ಯ!! ಎಲ್ಲಾ ವಿಷಯದಲ್ಲಿಯೂ ಈ ಪತ್ರವು ನಾನು ಬರೆ ದಂತೆಯೇ ಕಾಣುವುದು, ಆದರೆ ನಾನು ನಿನಗೆ ಈ ಕಾಗದವನ್ನು ಬರೆದವನಲ್ಲಾ. ನಿಜವಾಗಿಯೂ ಇದರಲ್ಲಿ ಮೋಸವೇನೋ ಅಡಗಿರಬೇಕು. ನೀನು ಈ ಪತ್ರ ದಂತೆ ನಡೆದೆಯಾ, ಹೇಗೆ? ಎಂದು ಪ್ರಶ್ನೆಮಾಡಿದನು.

"ಅಹುದು, ಮಹಾಶಯ! ನಾನು ಅದರಂತೆಯೇ ನಡೆದುಕೊಂಡೆನು," ಎಂದು ಹೇಳಿ ನಡೆದುದೆಲ್ಲವನ್ನೂ ಒಂದೂ ಬಿಡದ ಹಾಗೆ ವಿಶದವಾಗಿ ತಿಳಿಯ ಪಡಿಸಿದನು.

ಅನಂತರತ್ನನು ಈ ವಿಷಯವನ್ನು ಕೇಳಿ ಬೆಚ್ಚಿ ಬೆದರಿದವನಾಗಿ ಆವ ಮಾತನ್ನೂ ಆಡದೆ ಒಂದು ಕ್ಷಣಕಾಲ ಸುಮ್ಮನೆಯೇ ಕುಳಿತುಬಿಟ್ಟನು.

ಪರಂತಪನು ಮತ್ತೆ ಮಾತನಾಡುವುದಕ್ಕೆ ತೊಡಗಿದನು :—

"ಈಗ ನಾವು ಮಾಡಬೇಕಾದುದೇನು, ಮಹಾಶಯ? ನಾವು ಈಗ ಆವ ಪ್ರತೀಕಾರವನ್ನೂ ಮಾಡದೆ ಸುಮ್ಮನೆ ಇರುವುದಾದರೆ, ನಂದಕುಮಾರನು ಪಡಬಾರದ ಸಂಕಟಕ್ಕೀಡಾಗ ಬೇಕಾದೀತು. ಕಾಲರುದ್ರನು ಸಾಮಾನ್ಯನಲ್ಲ. ನರಹತ್ಯೆಯೆಂಬುದು ಆ ದುರ್ದಾಂತನ ದೈನಂದಿನ ಚರ್ಯೆಯಾಗಿರುವುದು. ದುಷ್ಟರ ಹಾವಳಿಯಾದರೋ ಕ್ಷಣ ಕ್ಷಣಕ್ಕೂ ಇಮ್ಮಡಿಸುತ್ತಿರುವುದು."

ಅನಂತರತ್ನನು ಬಲು ಹೊತ್ತು ಚಿಂತಿಸಿದ ಬಳಿಕ—ಮಿತ್ರನೇ! ನೀನು ಹೇಳುವುದೆಲ್ಲವೂ ಸತ್ಯವಾದುದು. ಆ ಧನ ಪಿಶಾಚನಾದ ವೃದ್ಧನು ನಂದಕುಮಾರನನ್ನು ತೀರಿಸಿಕೊಳ್ಳದೆಯೇ ಶಾಂತನಾಗನು. ಕಿಡುಕನಲ್ಲಿ ಹಣವಿರುವುದೂ, ಕಾಲಸರ್ಪಕ್ಕೆ ರಕ್ಕೆಗಳು ಹುಟ್ಟುವುದೂ ಒಂದೇಯಾಗಿರುವುದು. ನಂದಕುಮಾರನಿಗೆ ಅಪಾಯವು ಸಂಭವಿಸದಂತೆ ನೋಡಿಕೊಳ್ಳಬೇಕಾದುದು ನಮ್ಮಗಳ ಕರ್ತವ್ಯವೇ ಆಗಿರುವುದು. ಈಗ ನೀನೊಂದು ಕೆಲಸ ಮಾಡಬೇಕಾಗಿರುವುದು, ಎಂದನು.

ಪರಂ—ತಿಳಿಸೋಣವಾಗಲಿ; ನಾನು ಸಿದ್ಧನಾಗಿಯೇ ಇರುವೆನು. ಅದಕ್ಕಾಗಿಯೇ ನಾನು ನಿಮ್ಮಲ್ಲಿಗೆ ಬಂದುದು. ನಂದಕುಮಾರನಿಗೆ ಮಟ್ಟಿಗೆ ಪ್ರಾಣಾಪತ್ತು ಉಂಟಾಗಬಾರದು. ಇದರ ಕಡೆಗೆ ನಮ್ಮ ದೃಷ್ಟಿಯು ಇದ್ದೇ ಇರಬೇಕು.

ಅನಂತ—ಆ ವಿಷಯದಲ್ಲಿ ನೀನು ಕೊಂಚವಾದರೂ ಚಿಂತಿಸಬೇಕಾದುದೇನೂ ಇರುವುದಿಲ್ಲ. ನಾನೇ ಆ ಕಾರ್ಯಭಾರವನ್ನು ವಹಿಸಿಕೊಳ್ಳುವೆನು. ಈಗ ನೀನು ಆವ ಸ್ಥಳದಿಂದ ತಪ್ಪಿಸಿಕೊಂಡು ಬಂದೆಯೋ, ಅದೇ ಸ್ಥಲಕ್ಕೆ ಮತ್ತೆ ಹೋಗಬೇಕು. ಇದು ನಿನ್ನಿಂದ ಸಾಧ್ಯವೇ?

ಪರಂ—ಸಾಧ್ಯವಲ್ಲದೇ ಏನು? ಹೋಗಬೇಕಾದರೆ ಹೋಗುವೆನು. ನಾನು ಆವ ಹಗ್ಗದ ಆಸರೆಯಿಂದ ಇಳಿದು ಬಂದೆನೋ, ಆ ಹಗ್ಗವೂ ಇನ್ನೂ ಅಲ್ಲಿಯೇ ತೂಗು ಬಿದ್ದಿರುವುದು. ಅದನ್ನು ಅವಲಂಬಿಸಿಕೊಂಡೇ ಮೇಲಕ್ಕೆ ಏರಿ ಹೋಗಬಹುದು.

ಅನಂತ—ಹಾಗಾದರೆ ಸರಿ. ನೀನು ಅಲ್ಲಿಗೆ ಹೋಗಿ ಆ ಮನೆಹಾಳ ವೃದ್ಧನು ರಾತ್ರಿಯಲ್ಲಿ ಮತ್ತಾವ ಕೆಲಸಗಳನ್ನು ಮಾಡುವನೆಂಬುದನ್ನು ಅರಿತುಕೊಳ್ಳು. ಆ ವೃದ್ಧನು ತನ್ನ ಮಗಳನ್ನು ಎಂದಿಗೂ ಕಾಲರುದ್ರನಿಗೆ ಕೊಟ್ಟು ವಿವಾಹ ಮಾಡಲಾರನೆಂದು ನನಗೆ ಹೊಳೆಯುತ್ತಿರುವುದು. ಕಾಲರುದ್ರನು ತನ್ನ ಕೈಯಿಂದಲೇ ತಾನು ಹಾಳಾಗಿ ಹೋಗುವ ಹಾಗೆ ಮುದುಕನು ಅದೊಂದು ಹೂಟವನ್ನು ಹೂಡಿರಬಹುದು. ನಂದಕುಮಾರನನ್ನು ಕಾಲರುದ್ರನಿಂದ ಕೊಲ್ಲಿಸಿ,

ಕಾಲರುದ್ರನನ್ನು ಕೊಲ್ಲಿಸುವುದಕ್ಕೆ ಆ ವೃದ್ಧನು ಈಗಾಗಳೇ ತಕ್ಕ ಪ್ರಯತ್ನ ವನ್ನು ಮಾಡುತ್ತಿರಬಹುದು.

ಪರಂತಪನು ಈ ಮಾತನ್ನು ಕೇಳಿದ ಬಳಿಕ ಅನಂತರತ್ನನ ಅಪ್ಪಣೆ ಯನ್ನು ಪಡೆದುಕೊಂಡು ತಾನು ಬಂದಿಯಾಗಿದ್ದ ಸ್ಥಲಕ್ಕೆ ಬಂದು ಅದೇ ಹಗ್ಗದ ಮೂಲಕವಾಗಿ ಮೇಲಿನ ಅಂತಸ್ತಿಗೆ ಹತ್ತಿಹೋಗಿ ತನ್ನ ಕೋಣೆಯೊಳಗೆ ಕುಳಿತು ನೋಡಲಾರಂಭಿಸಿದನು. ಮೇಘಾವೃತವಾಗಿ ಗಾಢಾಂಧಕಾರ ಮಯಿಯಾದ ರಾತ್ರಿ ಯು ಪರಂತಪನ ಈ ಕಾರ್ಯ ಸಾಧನೆಯಲ್ಲಿ ಅತಿಯಾಗಿ ಸಾಹಾಯ್ಯವನ್ನೆಸಗಿತು.

---

## ಹದಿನಾಲ್ಕನೆಯ ಸಂಧಿ

### ಬಲಪ್ರಯೋಗ

ನಂದಕುಮಾರನು ಕಮಲಾಕಾಂತನ ಮನೆಯನ್ನು ತ್ಯಾಗಮಾಡಿ ಎರಡು ದಿನಗಳಾದ ಬಳಿಕ, ಕುಂದನಂದಿನಿಯು ಕೆಲಸವನ್ನು ಮಾಡಿಕೊಳ್ಳುತ್ತಾ ತನ್ನ ಕೋಣೆಯಲ್ಲಿ ಕುಳಿತಿದ್ದಳು. ಆ ಸಮಯಕ್ಕೆ ಸರಿಯಾಗಿ ಮಾರಕುಮಾರನು ಆಕೆಯ ಬಳಿಗೆ ಬಂದು ಸೇರಿದನು.

ಕುಂದನಂದಿನಿಯು ಮಾರಕುಮಾರನನ್ನು ಕಂಡೊಡನೆಯೇ ತಟ್ಟನೆ ಎದ್ದು ನಿಂತಳು. ಇಲ್ಲಿನ ವರೆಗೂ ಮಾರಕುಮಾರ, ಕುಂದನಂದಿನಿಯರು ಒಂದೇ ಮನೆ ಯಲ್ಲಿ ಬಳೆಯುತ್ತಿದ್ದರೂ, ಕುಂದನಂದಿನಿಯು ಮಾರಕುಮಾರನನ್ನು ಕಂಡರೆ ಭಯದಿಂದ ನಡುಗಿ ನಡುಗಿ ಸಾಯುತ್ತಿದ್ದಳು. ಆಕೆಯು ಒಂದು ದಿನವಾದರೂ ಏಕಾಂತದಲ್ಲಿ ಮಾರಕುಮಾರನೊಡನೆ ಆವ ಮಾತನ್ನೂ ಆಡಿದವಳಲ್ಲ. ಕಾರಣ ವೇನೆಂದರೆ—ಮಾರಕುಮಾರನು ದುಸ್ಸ್ವಭಾವದಿಂದ ಆವಾಗಲೂ ಪಾನದಲ್ಲಿಯೇ ಆಸಕ್ತನಾಗಿದ್ದುದರಿಂದ ಅವನ ಕಣ್ಣುಗಳು ರಕ್ತವರ್ಣವನ್ನು ತಾಳಿಕೊಂಡೇ ಇರುತಿದ್ದುವು. ಇದನ್ನು ನೋಡಿದ ಕೂಡಲೆ ಕುಂದನಂದಿನಿಗೆ ಭಯವಾಗು ತ್ತಿದ್ದಿತು. ಅದು ಕಾರಣವೇ ಆಕೆಯು ಆತನನ್ನು ಕಂಡ ಕೂಡಲೆ ಆವುದಾದರೂ ನೆಪವನ್ನು ಹೂಡಿಕೊಂಡು ದೂರವಾಗಿ ಸರಿದುಹೋಗಿಬಿಡುತ್ತಿದ್ದಳು. ಅಲ್ಲ ದೆಯೂ ಆತನು ಮನೆಯಲ್ಲಿರುವ ವರೆಗೂ ಆಕೆಯು ಹೊರಗೆ ಬರುತ್ತಲೇ ಇರಲಿಲ್ಲ.

ಮದಿರಾ ಸೇವನೆಯಿಂದ ಮದಭ್ರಾಂತನಾದ ಮಾರಕುಮಾರನು ಕುಂದನಂದಿ ನಿಯ ಕೋಣೆಯೊಳಗೆ ನುಗ್ಗಿದ್ದವನು ತಟ್ಟನೆ ಹೊರಗೆ ಬಂದುಬಿಟ್ಟನು.

ಪ್ರಿಯ ವಾಚಕ ಮಹಾಶಯ ! ಆದ್ಯಕಥಾ ಪ್ರಾರಂಭದಲ್ಲಿ ಕೊಂಚಮಟ್ಟಿಗೆ ಪೂರ್ವಕಥಾನುವಾದವು ಅತ್ಯಾವಶ್ಯಕವಾಗಿ ಕಂಡುಬಂದಿರುವುದು. ತಾವು ಸಾವಧಾನವಾಗಿ ಅದನ್ನು ಕೇಳಿ ತಿಳಿಯುವುದಾದರೆ, ಪ್ರಕೃತದಲ್ಲಿ ಕಥಾ ಸಂದರ್ಭಕ್ಕೆ ಎಷ್ಟೋ ಅನುಭವವನ್ನು ಪಡೆದುಕೊಂಡಂತಾಗುವುದು.

ಹಿಂದೊಂದು ದಿನ ಇಂದಿನಂತೆಯೇ ಕುಂದನಂದಿನಿಯು ತನ್ನ ಕೋಣೆಯಲ್ಲಿ ಕುಳಿತಿದ್ದಳು. ಆಗ ಇದೇ ಮಾರಕುಮಾರನು ಕಂಠಪೂರ್ತಿಯಾಗಿ ಸುರಾಪಾನ ಮಾಡಿ ನಿಶ್ಶಬ್ದವಾಗಿ ಕುಂದನಂದಿನಿಯ ಬಳಿಗೆ ಬಂದನು. ಅವುದನ್ನೋ ಚಿಂತಿಸುತ್ತಾ ಕುಳಿತಿದ್ದ ಕುಂದನಂದಿನಿಗೆ ಈತನು ಬಂದುದು ಗೊತ್ತಾಗಲಿಲ್ಲ.

ಏಕಾಂತದಲ್ಲಿ ಕುಳಿತಿದ್ದ ಕುಂದನಂದಿನಿಯನ್ನು ನೋಡಿದ ಕೂಡಲೆ ಮಾರುಕುಮಾರನಿಗೆ ಕಾಮಾನಲವು ಪ್ರಜ್ವಲಿತವಾಗಿ ಹೋಯಿತು. ಬಳಿಕ ಆತನು ತಾಪವನ್ನು ತಡೆಯಲಾರದೆ ಸರಸರನೆ ಓಡಿಬಂದು ಕುಂದನಂದಿನಿಯ ಕೈಯನ್ನು ಹಿಡಿದುಕೊಂಡನು. ಕುಂದಳು ಬೆಚ್ಚಿ ಬೆದರಿದವಳಾಗಿ ಚಿಟ್ಟೆಂದು ಚೀರಿಟ್ಟಳು.

ದುರದೃಷ್ಟಕ್ಕೆ ಸರಿಯಾಗಿ ಆ ಸಮಯದಲ್ಲಿ ಮನೆಯೊಳಗೆ ಕಮಲಾಕಾಂತನಾಗಲೀ ನಂದಕುಮಾರನಾಗಲೀ ಇರಲಿಲ್ಲ. ಅವರಿಬ್ಬರೂ ತಮ್ಮ ತಮ್ಮ ಕೆಲಸಗಳ ಮೇಲೆ ಹೊರಗೆ ತೆರಳಿದ್ದರು. ಕಮಲಾಕಾಂತನ ಹೆಂಡಿತಿಯು ಬಲವತ್ತರವಾದ ರೋಗದಿಂದ ಪೀಡಿತೆಯಾಗಿ ಹಾಸುಗೆ ಹಿಡಿದು ಮಲಗಿಬಿಟ್ಟಿದ್ದಳು. ಮದಯಂತಿಯೂ ಈ ಮನೆಗೆ ಇನ್ನೂ ಬಂದು ಸೇರಿಕೊಂಡಿರಲಿಲ್ಲ. ಸೇವಕರೂ ತಮ್ಮ ತಮ್ಮ ಕೆಲಸಗಳಲ್ಲಿ ವ್ಯಗ್ರರಾಗಿದ್ದುಕೊಂಡು ದೂರದಲ್ಲಿರುತಿದ್ದರು. ಹೀಗಿರುವಲ್ಲಿ ಕುಂದನಂದಿನಿಯ ಚೀತ್ಕಾರವು ಆರ ಕಿವಿಗೂ ಬೀಳಲಿಲ್ಲ.

ಮಾರಕುಮಾರನು ಆ ಕೂಗಿಗೆ ಹೆದರದವನಾಗಿ,—ವ್ಯರ್ಥವಾಗಿ ಕೂಗುವೆಯೇತಕೆ ? ಈಗ ಮನೆಯಲ್ಲಿ ಆರೂ ಇಲ್ಲ. ದಾಸದಾಸಿಯರು ದೂರವಾಗಿರುವರು. ನಿನ್ನ ಪ್ರಾಣಪ್ರಿಯನಾದ ನಂದಕುಮಾರನೂ ಎಲ್ಲಿಗೋ ಹೋಗಿರುವನು. ಎಂದುಸುರಿದನು.

ಕುಂದನಂದಿನಿಯು ಈ ಸಂದರ್ಭದಲ್ಲಿ ತಾನು ಅಸಹಾಯೆಯೆಂದು ತಿಳಿದು ಆತ್ಮಾವಲಂಬನದಿಂದ—ಇಂತಹ ಸಮಯವನ್ನು ನಿರೀಕ್ಷಿಸಿಕೊಂಡಿದ್ದು ಕಳ್ಳನಂತೆ ನನ್ನ ಕೋಣೆಗೆ ಬಂದುದು ನಿನ್ನ ಗೌರವಕ್ಕೆ ತಕ್ಕುದಾಗಿಯೇ ಇರುವುದು. ನನ್ನ ಕಯ್ಯನ್ನು ಬಿಡು, ಎಂದು ಬಿರುನುಡಿಗಳನ್ನಾಡಿದಳು.

ಮಾರ—ಅದೇಕೆ ? ನನ್ನನ್ನು ಇಷ್ಟು ತುಚ್ಛವಾಗಿ ಕಾಣಲು ಕಾರಣವೇನು ? ನಾನು ಮಾಡಿರುವ ಅಪರಾಧವಾದರೂ ಏನು ?

ಕುಂದ—ನೀನು ಏನನ್ನೂ ಮಾಡಿಲ್ಲ. ನಿನ್ನನ್ನು ನೋಡಿದೊಡನೆಯೇ ನನಗೇಕೋ ಭಯವಾಗುವುದು. ನನ್ನ ಕಯ್ಯನ್ನು ಬಿಡು.

ಮಾರ—ಬಿಡದಿದ್ದರೆ ನೀನು ಮಾಡುವುದೇನು ?

ಕುಂದ—ಏನ ಮಾಡುವೆನೇ? ನಾನು ಮಾಡುವುದನ್ನು ಈಗಳೇ ತೋರು ವೆನು. ನನ್ನನ್ನು ನೀನು ಅಸಹಾಯೆಯೆಂದು ತಿಳಿದು ಅತ್ಯಾಚಾರಕ್ಕೆಸಗಿರುವೆ. ನಾನು ಹೆಂಗುಸಾದರೂ ನನ್ನ ಶಕ್ತಿಯನ್ನು ನೋಡು.

ಈ ಮಾತನ್ನು ಕೇಳಿದೊಡನೆಯೇ ಮಾರಕುಮಾರನ ಹೃದಯದಲ್ಲಿ ಭಯದ ಸಂಚಾರವುಂಟಾಯಿತು. ಕೂಡಲೆಯೇ ಸುರಾಪಾನದಿಂದ ಮದಿಸಿದ ಮಾರಕುಮಾ ರನು ಥರಥರನೆ ನಡುಗುತ್ತಾ ಕುಂದಳ ಕೈಯನ್ನು ಬಿಟ್ಟು ವಿನೀತಭಾವದಿಂದ— ಕುಂದ ! ನೀನು ದೊಡ್ಡವಳಾಗಿರುವೆ, ಆದರೂ ಕಮಲಾಕಾಂತನು ನಿನಗೆ ಇನ್ನೂ ಮದುವೆಮಾಡದಿರಲು ಕಾರಣವೇನು ? ಎಂದು ಪ್ರಶ್ನೆಮಾಡಿದನು.

ಕುಂದ—ಮದುವೆಯ ವಿಷಯವು ನನಗೆ ಹೇಗೆ ಗೊತ್ತಾಗಬೇಕು ? ಈ ವಿಚಾರವು ನನ್ನ ತಂದೆಗೆ ಸಂಬಂಧ ಪಟ್ಟುದಾಗಿರುವುದು. ಇಷ್ಟರ ಮೇಲೂ ನನಗೆ ಆಗಿರುವ ವಯಸ್ಸಾದರೂ ಏನು ? ನನಗಿಂತಲೂ ಹೆಚ್ಚಿನ ವಯಸ್ಸುಳ್ಳ ಕನ್ನೆಯರಿಗೆ ಇನ್ನೂ ವಿವಾಹ ವಿಲ್ಲದಿರುವುದನ್ನು ನಾನು ಎಷ್ಟೋ ನೋಡಿರು ವೆನು.

ಮಾರ—ನನಗೂ ಆ ವಿಷಯವು ಗೊತ್ತು. ಅದಕ್ಕಾಗಿ ನಾನು ನಿನ್ನನ್ನು ಪ್ರಶ್ನೆಮಾಡುವುದಕ್ಕೆ ಬಂದವನಲ್ಲ. ನಾನು ಹೇಳುವುದಕ್ಕೆ ಬಂದುದೇನೆಂದರೆ— ನಿನ್ನನ್ನು ನನಗೆ ಕೊಟ್ಟು ವಿವಾಹ ಮಾಡುವುದಾಗಿ ನಿನ್ನ ತಂದೆಯು ನಿಶ್ಚಯಿ ಸಿರುವನು. ಆದುದರಿಂದಲೇ ಆತನು ಈ ವಿಷಯದಲ್ಲಿ ಆವ ಮಾತನ್ನೂ ಆಡದೆಯೇ ಸುಮ್ಮನಿರುವುದು.

ಕುಂದನಂದಿನಿಯು ಈ ಮಾತನ್ನು ಕೇಳಿ ಅಚ್ಚರಿಗೊಂಡವಳಾಗಿ—ಏನ ನಾಡಿದೆ ? ನಿನ್ನೊಡನೆ ನನಗೆ ವಿವಾಹವೇ ? ಅದೆಂದಿಗೂ ಸಂಭವವಲ್ಲ, ಎಂದು ನುಡಿದಳು.

ಮಾರ— ಅದೇಕೆ ಸಂಭವವಲ್ಲ, ಕುಂದನಂದಿನಿ ? ನಾನು ನಿನಗೆ ಯೋಗ್ಯನಾದ ವರನಲ್ಲವೇ ? ನನ್ನನ್ನು ನೀನು ಏನೆಂದು ಭಾವಿಸಿರುವೆ ?

ಕುಂದ—ನಿನ್ನೊಡನೆ ವಿವಾಹವಾಗುವುದೂ, ಚಿರಕಾಲ ವೈಧವ್ಯವನ್ನು ಅನುಭವಿಸುವುದೂ ಒಂದೇ ಆಗಿರುವುದು.

ಮಾರ—ಹಾಗೆಂದರೇನು ?

ಕುಂದ—ನೀನು ನಡತೆಯಿಲ್ಲದ ಮನುಷ್ಯನು.

ಮಾರ—ಹಾಗಾದರೆ ನಡತೆಯುಳ್ಳವನಾರು ? ನೀನು ಆರನ್ನು ವಿವಾಹ ವಾಗಲು ಬಯಸಿರುವೆ ?

ಕುಂದ—ಅದನ್ನು ಕುರಿತು ಜಿಜ್ಞಾಸೆ ಮಾಡುವುದಕ್ಕೆ ನಿನಗಾವ ಅಧಿ ಕಾರವೂ ಇಲ್ಲ. ಲೋಕದಲ್ಲಿ ನನ್ನಿಷ್ಟದಂತೆ ಆವ ಕೆಲಸವೂ ನಡೆಯುವ ಹಾಗಿಲ್ಲ ; ನಡೆಯ ಬೇಕೆಂಬ ಬಯಕೆಯೂ ನನಗಿಲ್ಲ.

ಮಾರ—ಒಂದು ವೇಳೆ ನಮ್ಮಜ್ಜನು ನಿನ್ನನ್ನು ನನಗೆ ಕೊಟ್ಟು ವಿವಾಹ ಮಾಡುವುದಾದರೆ ?

ಕುಂದ—ಆತ್ಮಹತ್ಯೆಯು ಸಿದ್ಧವಾಗಿಯೇ ಇರುವುದು. ಕುಂದನಂದಿ ನಿಯು ಈ ಮಾತನ್ನು ಹೇಳುತ್ತಿರುವಷ್ಟರೊಳಗಾಗಿ ನಂದಕುಮಾರನು ಆಕೆಯಿದ್ದ ಲ್ಲಿಗೆ ಬಂದನು. ಅಲ್ಲಿ ಮಾರಕುಮಾರನು ನಿಂತಿರುವುದನ್ನು ನೋಡಿ ನಂದಕುಮಾ ರನು ಅಪ್ರತಿಭನಾಗಿ ಮದಭ್ರಾಂತನಾದ ಮಾರಕುಮಾರನ ಕೈಯನ್ನು ಹಿಡಿದು ಕೊಂಡು ಆ ಕೋಣೆಯಿಂದ ಹೊರಗೆ ಬಂದುಬಿಟ್ಟನು. ಬಳಿಕ ನಂದಕುಮಾರನು ಮಾರಕುಮಾರನನ್ನು ಸಂಬೋಧಿಸಿ—ಅಣ್ಣಾ ! ನೀನು ಇಂತಹ ಕೆಲಸವನ್ನು ಮಾಡಬಾರದು. ಒಂದು ವೇಳೆ ಮನೆಯ ಯಜಮಾನನು ಈ ಸಂಗತಿಯನ್ನು ಅರಿವುದಾದರೆ, ನಿನಗೆ ಅಮಂಗಳವೇ ಆದೀತು. ನೀನು ಆರೂ ಇಲ್ಲದ ಕಾಲದಲ್ಲಿ ಅಸಹಾಯೆಯಾದ ಹುಡುಗಿಯ ಮೇಲೆ ಈ ರೀತಿಯಾಗಿ ಬಲಪ್ರಯೋಗವನ್ನು ಮಾಡಬಹುದೇ ? ಕುಂದನಂದಿನಿಯ ಶುದ್ಧ ಸ್ವಭಾವವನ್ನು ನೀನು ಇನ್ನೂ ಅರಿಯಲಾರದೇ ಹೋದೆಯಾ ? ಅವಿವೇಕಿಯಾದವನು ಇಂತಹ ಹೀನ ಕಾರ್ಯ ದಲ್ಲಿ ಮುಂದುವರಿಯುವನು, ಎಂದು ಮೂದಲಿಸಿದನು.

ಮಾರಕುಮಾರನು ಆವ ಮಾತನ್ನೂ ಆಡಲಿಲ್ಲ. ನಾಚುಗೆಯಿಂದ ಅವನ ತಲೆಯು ತಗ್ಗಿಬಿಟ್ಟಿತು. ಮಾರಕುಮಾರನಿಗೆ ಅಪಮಾನವಾಯಿತೆಂದು ತಿಳಿದು, ನಂದಕುಮಾರನು ಆತನೊಡನೆ ಮತ್ತಾವ ಮಾತನ್ನೂ ಆಡದೆ, ಕುಂದನಂದಿ ನಿಯ ಕೋಣೆಗೆ ಬಂದು ಆಕೆಯನ್ನು ಮಧುರ ವಚನದಿಂದ ಸಂತೈಸಿದನು.

ಅಂದು ಮೊದಲು ಮಾರಕುಮಾರನು ಕುಂದನಂದಿನಿಯನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕೆ ತಹತಹಪಡುತ್ತಿದ್ದನು.

---

## ಹದಿನೈದನೆಯ ಸಂಧಿ

### ಮತ್ತೊಂದು ವ್ಯವಹಾರ

ರಾತ್ರಿಯಲ್ಲಿ ಎರಡು ಯಾಮಗಳು ಕಳೆದು ಮೂರನೆಯ ಯಾಮವು ಪ್ರಾರಂಭವಾಗಿರುವುದು. ದಟ್ಟವಾದ ಮೋಡಗಳಿಂದ ತುಂಬಿಹೋಗಿದ್ದ ಆಕಾಶದಲ್ಲಿ ಒಂದು ನಕ್ಷತ್ರವಾದರೂ ಕಾಣುತ್ತಿರಲಿಲ್ಲ. ಮಳೆಯ ಹನಿಯೂ ಒಂದೊಂದಾಗಿ ಬೀಳುತ್ತಿದ್ದಿತು. ಮಾರ್ಗದಲ್ಲಿ ಪ್ರಾಣಿಯ ಸಂಚಾರವೆಂಬುದೇ ಇರಲಿಲ್ಲ. ಇಂತಹ ಸಮಯದಲ್ಲಿ ಪರಂತಪನು ತನ್ನ ಬಂಧನದ ಕೋಣೆಯಲ್ಲಿ ಕುಳಿತುಕೊಂಡು ಧನ ವೃದ್ಧನ ಮನೆಯ ಕಡೆ ಗಮನವಿಟ್ಟು ನೋಡುತ್ತಿದ್ದನು, ಆದರೆ ವೃದ್ಧನು ದೃಷ್ಟಿಗೆ ಬೀಳಲಿಲ್ಲ.

ಈ ರೀತಿಯಲ್ಲಿ ಮತ್ತೊಂದು ಗಂಟೆಯ ಕಾಲವೂ ಕಳೆದುಹೋದುದು. ಆಗ ಅರವಿಂದಸುಂದರಿಯು ಮುದುಕನ ಕೋಣೆಯ ಬಾಗಿಲನ್ನು ತೆರೆದುಕೊಂಡು ಮೆಲ್ಲ ಮೆಲ್ಲನೆ ಒಳಗೆ ಪ್ರವೇಶಮಾಡಿದಳು.

ಪರಂತಪನು ಕಣ್ಣಿನೊಳಗೆ ಕಣ್ಣನಿಟ್ಟು ಏನು ನಡೆವುದೋ ಎಂದು ನೋಡುತ್ತಿರುವಲ್ಲಿ, ಅರವಿಂದಮ್ಮನು ಮುದುಕನ ಕೈಪೆಟ್ಟಿಗೆಯನ್ನು ತೆರೆದು ಅದರಿಂದ ಒಂದು ಕಾಗದದ ಗಂಟನ್ನು ಹೊರಗೆ ತೆಗೆದು ನೋಡಿದಳು. ಅದು ನೋಟುಗಳ ಗಂಟಾಗಿರಬಹುದೆಂದು ಆತನು ಊಹಿಸಿದನು. ಅರವಿಂದಸುಂದರಿಯು ಅದನ್ನು ಒಂದೊಂದಾಗಿ ಏಣಿಸಿದ ಕೂಡಲೆ ಅವಳ ಮುಖದಲ್ಲಿ ಅದೊಂದು ಬಗೆಯ ಸಂತೋಷವು ಕಾಣಿಸಿಕೊಂಡಿತು. ಆಕೆಯು ಸಂತೋಷದ ಆಧಿಕ್ಯದಿಂದ ಮೈಮರೆತವಳಾಗಿ "ಸರಿಯಾಗಿ ೧೦,೦೦೦ ರೂಪಾಯಿಗಳೇ ಇರುವುವು" ಎಂದು ಮಾತನಾಡಿಕೊಂಡಳು. ಬಳಿಕ ತನ್ನ ಮನೋರಥವು ನೆರವೇರಿತೆಂದು ಹೇಳಿಕೊಳ್ಳುತ್ತಾ ಆ ಪೆಟ್ಟಿಗೆಯನ್ನು ಮುಚ್ಚಿ ಕೋಣೆಯ ಬಾಗಿಲನ್ನು ಹಾಕಿಕೊಂಡು ಹೊರಗೆ ಬಂದುಬಿಟ್ಟಳು.

ಪರಂತಪನು ಈ ಚಿತ್ರವನ್ನು ಕಣ್ಣಾರೆ ನೋಡಿದವನಾಗಿ ವಿಷಮ ಸಂದೇಹದಿಂದ ಆಲೋಚಿಸತೊಡಗಿದನು. ಅದೆಂತೆನೆ:—

"ಈ ಹುಡುಗಿಯು ಆ ಮುದುಕನ ಮಗಳಲ್ಲವೇ? ಹಾಗಾದರೆ ಈಕೆಯು ಭಯದಿಂದ ಹೆದರಿ ಹೆದರಿ ಮುದುಕನ ಹಣವನ್ನು ಅಪಹರಿಸಲೇಕೆ? ನಂದಕುಮಾರನು ಆರಿಗೋ ೧೦,೦೦೦ ರೂಪಾಯಿಗಳಿಗೆ ಒತ್ತಾಸೆಯಾಗಿದ್ದ ಸಂಗತಿಯನ್ನು ಮುದುಕನು ತನ್ನ ಮಗಳಿಗೆ ತಿಳಿಸಿದ್ದನು. ಅಷ್ಟೇ ಅಲ್ಲದೆ, ನಂದನು

ಅಷ್ಟು ಹಣವನ್ನು ತೀರಿಸಲಾರದವನಾಗಿ ತನಗೆ ಸರ್ವನಾಶವನ್ನೇ ಉಂಟುಮಾಡಿ ದನು ಎಂಬುದನ್ನೂ ಆಕೆಗೆ ತಿಳಿಸಿಯೇ ಇದ್ದನು. ಈಗ ತತ್ತ್ವವು ಗೊತ್ತಾ ಯಿತು. ಅರವಿಂದಮ್ಮನು ನಿಜವಾಗಿಯೂ ನಂದಕುಮಾರನನ್ನು ಪ್ರೀತಿಸುತ್ತಿರುವ ಳೆಂಬುದಕ್ಕೆ ಮತ್ತಾವ ನಿದರ್ಶನವೂ ಬೇಕಾಗಿಲ್ಲ. ಅದನ್ನು ಉಳಿಸಿಕೊಳ್ಳುವುದ ಕ್ಕಾಗಿ ಅರವಿಂದಳು ಹತ್ತೇ ಸಾವಿರ ರೂಪಾಯಿಗಳ ನೋಟುಗಳನ್ನು ಹೊರಗೆ ತೆಗೆದಿಟ್ಟುಕೊಂಡುದು. ತನಗೆ ಪ್ರೀತಿಪಾತ್ರವಾದ ನಂದಕುಮಾರನಿಗೆ ಸಾಹಾಯ್ಯ ಮಾಡಬೇಕೆಂಬ ಸದಭಿಪ್ರಾಯದಿಂದ ತನ್ನ ತಂದೆಗೆ ನಷ್ಟವನ್ನಾದರೂ ಉಂಟು ಮಾಡಬೇಕೆಂದು ಅರವಿಂದಳು ಆಲೋಚಿಸಿ ಈ ಕೆಲಸವನ್ನು ಮಾಡಿರುವಳು. ಮಾತಾಪಿತೃಗಳಲ್ಲಿನ ಪ್ರೀತಿಗಿಂತಲೂ ಪ್ರಾಣೇಶ್ವರನಲ್ಲಿರುವ ಪ್ರೀತಿಯೇ ದೊಡ್ಡ ದಾಯಿತಲ್ಲವೇ! ಪ್ರೇಮತತ್ತ್ವವನ್ನರಿತವರಾರು? ಇದು ಸ್ವಾರ್ಥವೋ ಪರಾ ರ್ಥವೋ ಎಂಬುದು ಸಂಸಾರದ ಮರ್ಮವನ್ನರಿಯದ ನಮ್ಮಂಥವರಿಗೆ ಗೋಚರಿಸ ಲೊಲ್ಲದು.''

ಪರಂತಪನು ಹೀಗೆಲ್ಲಾ ಚಿಂತಿಸಿದ ಬಳಿಕ ಹಾಗೆಯೇ ನೋಡುತ್ತಿದ್ದನು. ಕೊಂಚ ಹೊತ್ತಿನ ಮೇಲೆ ವೃದ್ಧನು ಮೆಲ್ಲ ಮೆಲ್ಲನೆ ತನ್ನ ಶಯನ ಗೃಹದ ಬಾಗಿ ಲನ್ನು ತೆರೆದುಕೊಂಡು ಒಳಗೆ ಬಂದನು.

ವೃದ್ಧನು ತನ್ನ ಹಾಸುಗೆಯ ಮೇಲೆ ಮಲಗಿಕೊಂಡು ತನಗೆ ತಾನೇ ಮಾತ ನಾಡಿಕೊಂಡನು:—

''ನಮ್ಮ ಅರವಿಂದು ಹೇಳಿದುದು ಸುಳ್ಳಲ್ಲ. ನಮಗಿಂತಲೂ ಹೆಂಗುಸರೇ ಮರ್ಮೋದ್ಘಾಟನದಲ್ಲಿ ಅತಿನಿಪುಣೆಯರು. ಮಾರಕುಮಾರನು ಕುಂದನಂದಿನಿ ಯನ್ನು ಪ್ರೀತಿಸುತ್ತಿದ್ದು ಆಕೆಯನ್ನು ಹೇಗಾದರೂ ಮಾಡಿ ಸ್ವಾಧೀನಪಡಿಸಿ ಕೊಳ್ಳಬೇಕೆಂದು ಸಾಹಸಪಡುತ್ತಿರುವನು. ಕುಂದನಂದಿನಿಯು ಬದುಕಿರುವ ವರೆಗೂ ನನ್ನ ಮನೋರಥವು ಈಡೇರುವುದಕ್ಕೆ ದಾರಿಯೇ ಕಂಡುಬರುತ್ತಿಲ್ಲ— ಎಂದ ಮೇಲೆ, ನನ್ನ ಉದ್ದೇಶವೆಲ್ಲವೂ ಹಾಳಾಗಿಯೇ ಹೋದಂತಾದುದು.

ನಮ್ಮ ಅರವಿಂದಸುಂದರಿಯು ಹೆಸರಿನಿಂದ ಸುಂದರಿ; ಕುಂದನಂದಿನಿಯು ಸ್ವಭಾವದಿಂದಲೇ ಸುಂದರಿಯಾಗಿರುವಳು. ಈಗಣ ಕಾಲದ ಹುಡುಗರು ಮೇಲಣ ಸೌಂದರ್ಯಕ್ಕೆ ಬೆರಗಾಗುವರೇ ಹೊರತು ಒಳಗಣ ಸೌಂದರ್ಯಕ್ಕೆ ಕಿಂಚಿತ್ತಾದರೂ ಬೆಲೆ ಕೊಡರು. ಹಾಗಾದರೆ ನನ್ನ ಮಗಳ ಗತಿಯೇನಾಗಬೇಕು? ಇಂತಹ ಸಂದರ್ಭಗಳಲ್ಲಿ ಸ್ವಾರ್ಥಪರಾಯಣನಾದ ವಿವೇಕಿಯು ಉಪಾಯದಿಂದ ಸ್ವಕಾರ್ಯವನ್ನು ಸಾಧಿಸಲೇ ಬೇಕು. ಈಗ ನಾನು ಕುಂದನಂದಿನಿಯ ಹುಟ್ಟಿಲ್ಲದ

ಹಾಗೆ ಮಾಡಿಬಿಟ್ಟರೆ? ಸರಿ, ಸರಿ; ಇದೇ ಸರಿಯಾದ ಉಪಾಯವು. ನನ್ನ ಉದ್ದೇಶ ಸಿದ್ಧಿಗೆ ಇದನ್ನು ಬಿಟ್ಟರೆ ಬೇರೊಂದಿಲ್ಲವು."

ಪರಂತಪನು ಇದೆಲ್ಲವನ್ನೂ ಕೇಳಿ, "ವೃದ್ಧನು ಎಂತಹ ನರಘಾತುಕನಾದ ಪಿಶಾಚನಾಗಿರಬೇಕು? ನಾವು ಹುಡುಕುತ್ತಾ ಕುಳಿತರೆ, ಪ್ರಪಂಚವು ಇಂಥವರಿಂದಲೇ ತುಂಬಿ ಹೋಗಿರುವುದೆಂದು ತೋರಿಬರುತ್ತಿರುವುದು. ವೃದ್ಧನು ಸಾಮಾನ್ಯನೆಂದು ನಾನು ತಿಳಿದಿದ್ದುದು ನನ್ನ ದೋಷವೇ ಆಗಿರುವುದು. ಇಂದಿನಿಂದ ಈತನ ಮೇಲೆ ನಾನು ಒಂದು ಕಣ್ಣನ್ನು ಇಟ್ಟೇ ಇರುವೆನು. ಸಮಯವು ಒದಗಿ ಬಂದಾಗಲೆಲ್ಲಾ, ಈತನಿಗೆ ಬುದ್ಧಿಯನ್ನೂ ಕಲಿಸಿಬಿಡುವೆನು. ದುಷ್ಟನಿಗ್ರಹದಲ್ಲಿ ಕಿಂಚಿತ್ತಾದರೂ ಯತ್ನಮಾಡುವಾತನು ಭಗವಂತನ ದಯೆಗೆ ಪಾತ್ರವಾಗದೇ ಇರನು," ಎಂದು ಹೇಳಿಕೊಳ್ಳುತ್ತಿರುವಷ್ಟರಲ್ಲಿಯೇ ಮತ್ತೊಂದು ಗಂಟೆಯ ಕಾಲವು ಕಳೆದು ಹೋಯಿತು. ವೃದ್ಧನು ಹಾಸುಗೆಯ ಮೇಲೆ ಮಲಗಿದನು. ಆತನ ಕಣ್ಣುಗಳಿಗೆ ನಿದ್ರೆ ಹತ್ತಲಿಲ್ಲ. ಆತನು ಮತ್ತೆ ಹಾಸುಗೆಯಿಂದೆದ್ದು ಸುತ್ತಲೂ ತಿರುಗಾಡಿದನು. ಆಗಿಂದಾಗ ಬಾಗಿಲ ಕಡೆಗೆ ದೃಷ್ಟಿಯನ್ನೂ ಹಾಕುತ್ತಿದ್ದನು.

"ವೃದ್ಧನು ಆರನ್ನೋ ನಿರೀಕ್ಷಿಸುತ್ತಿರಬೇಕು" ಎಂದು ಪರಂತಪನು ತಿಳಿದು ಎವೆಯಿಕ್ಕದೆ ನೋಡಲಾರಂಭಿಸಿದನು. ಆತನ ಊಹೆಯನ್ನು ನಿಶ್ಚಯ ಮಾಡಬೇಕೋ ಎಂಬಂತೆ, ವೀರಭದ್ರನು ಕೋಣೆಯ ಬಾಗಿಲನ್ನು ತೆರೆದುಕೊಂಡು ಒಳಗೆ ಪ್ರವೇಶಮಾಡಿದನು. ವೀರಭದ್ರನನ್ನು ಕಂಡ ಕೂಡಲೆ, ವೃದ್ಧನು— ವೀರಭದ್ರ! ಬಂದುದೇನು? ಎಂದು ಪ್ರಶ್ನೆಮಾಡಿದನು.

ವೀರಭದ್ರನು ವೃದ್ಧನ ಮಾತನ್ನು ಕೇಳಿ ಅಚ್ಚರಿಗೊಂಡವನಾಗಿ—ಮಹಾಶಯ! ತಾವು ನನ್ನನ್ನು ಬರಹೇಳಿರಲಿಲ್ಲವೇ? ಎಂದನು.

ವೃದ್ಧ—ನಾನು ನಿನ್ನನ್ನು ಬರಹೇಳಿದ್ದೆನೇ? ಗೊತ್ತಾಯಿತು. ನಾನು ನಿನ್ನ ಅಣ್ಣನಾದ ಭೂತನಾಥನಿಗೆ ಹೇಳಿ ಕಳುಹಿದ್ದೆನು. ಈಗ ಆತನೆಲ್ಲಿ?

ವೀರ—ಆತನು ಮನೆಯಲ್ಲಿಲ್ಲ.

ವೃದ್ಧ—ಎಲ್ಲಿಗೆ ಹೋಗಿರಬಹುದು?

ವೀರ—ಗೊತ್ತಿಲ್ಲ.

ವೃದ್ಧ—ಆತನು ಆವಾಗ ಬರುವನು?

ವೀರ—ಅದೂ ನನಗೆ ತಿಳಿಯದು.

ವೃದ್ಧ—ಕೆಲಸವು ತೊಂದರೆಗಿಟ್ಟಿತು. ಆತನಿಂದ ನನಗೆ ತುಂಬಾ ಕೆಲಸ ವಿದ್ದಿತು. ಸಮಯದಲ್ಲಿ ಹೀಗಾಗುವುದಾದರೆ, ನನ್ನ ದುರದೃಷ್ಟವೇ ಸರಿ.

ವೀರ—ಮಹಾಶಯ! ತಾವು ನನ್ನ ಅಣ್ಣನನ್ನೂ ನನ್ನನ್ನೂ ಭಿನ್ನ ವಾಗಿ ಎಣಿಸೋಣವಾಗಿದೆ. ತಾವು ಹಾಗೆ ಭಾವಿಸಲಾಗದು. ನಾವಿಬ್ಬರೂ ಸಮ ಕ್ರಿಯರೂ ಸಮಪ್ರಾಣರೂ ಆಗಿರುವೆವು. ಆತನಿಂದ ಆವ ಕೆಲಸವು ನೆರವೇರ ತಕ್ಕುದಿದೆಯೋ ಅದು ನನ್ನಿಂದಲೂ ನೆರವೇರತಕ್ಕುದಾಗಿಯೇ ಇರುವುದು. ಅಣ್ಣನು ಆವ ಕೆಲಸ ಮಾಡಬೇಕಾದರೂ ನನ್ನನ್ನು ಕೇಳದೆಯೇ, ನನ್ನ ಸಾಹಾ ಯ್ಯವನ್ನು ತೆಗೆದುಕೊಳ್ಳದೆಯೇ ಮಾಡನು.

ವೃದ್ಧ—ವೀರಭದ್ರ! ಇಂದಿನ ವರೆಗೂ ನಾನು ನಿನ್ನಿಂದ ಆವ ಕೆಲಸ ವನ್ನೂ ಮಾಡಿಸಿಕೊಂಡಿಲ್ಲ. ನಿಮ್ಮಣ್ಣನಾದರೋ ನನಗೆ ತೆರತೆರನಾಗಿ ಉಪಕಾರ ಮಾಡಿರುವನು.

ವೀರ—ನನ್ನ ಅಣ್ಣನು ತಮಗಾಗಿ ಮಾಡಿರುವ ಕೆಲಸಗಳೆಲ್ಲವೂ ನನ್ನ ಒತ್ತಾಸೆಯಿಲ್ಲದೆ ನಡೆದಿಲ್ಲವೆಂಬುದನ್ನು ತಾವು ಈಗ ತಿಳಿಯೋಣವಾಗಲಿ. ತಾವು ಅದೇ ವಿಶ್ವಾಸವನ್ನೇ ನನ್ನಲ್ಲಿಯೂ ಇಟ್ಟುಕೊಂಡು, ನನ್ನನ್ನು ಉಪಯೋಗಿಸಿ ಕೊಳ್ಳೋಣವಾಗಲಿ. ನಾನು ನಿಮಗೆ ತೃಪ್ತಿಕರವಾಗಿ ಕೆಲಸಮಾಡಿಕೊಟ್ಟು ನಿಮ್ಮ ಅನುಗ್ರಹಕ್ಕೆ ಪಾತ್ರವಾದೇನು! ಇಷ್ಟರ ಮೇಲೂ ನಿಮಗೆ ಸಂಶಯವೇ ತೋರಿಬರುವುದಾದರೆ, ನನಗೆ ಅಪ್ಪಣೆ ಕೊಡೋಣವಾಗಲಿ, ನಾನು ಹೋಗಿ ಬರುವೆನು.

ವೃದ್ಧನು ಧರ್ಮಸಂಕಟದಿಂದ ಬಲುಹೊತ್ತು ಅಳೆದೂ ಸುರಿದೂ ಬಳಿಕ—ವೀರಭದ್ರ! ನನ್ನ ಕೆಲಸವು ಗುರುತರವಾದುದು. ಒಬ್ಬನೇ ನೆರವೇರಿಸುವುದು ನಿನ್ನಿಂದ ಸಾಧ್ಯವೇ? ಎಂದು ಪ್ರಶ್ನೆಮಾಡಿದನು.

ವೀರ—ನನ್ನೊಬ್ಬನಿಂದ ಕೆಲಸವು ಸಾಧ್ಯವಾಗದ ಮೇಲೆ, ಮತ್ತಾರಿಂದ ಲೂ ಸಾಧ್ಯವಾಗದು. ಅಣ್ಣನಿದ್ದರೆ ನಾವಿಬ್ಬರೂ ಸೇರಿಕೊಂಡು ಕೆಲಸಮಾಡು ವೆವು; ಆತನಿಲ್ಲದ ವೇಳೆಗಳಲ್ಲಿ ನಾನೊಬ್ಬನೇ ಎಂತಹ ಕೆಲಸವನ್ನಾದರೂ ಮಾಡಿಬಿಡುವೆನು.

ವೃದ್ಧ—ಮೆಲ್ಲನೆ ಮಾತನಾಡು; ನಮ್ಮ ಮನೆಯಲ್ಲಿ ಗೋಡೆಗಳಿಗೂ ಕಿವಿಗಳುಂಟು.

ವೀರ—ತಾವು ಹೀಗೆ ಹೆದರಬೇಕಾದುದೇನೂ ಇಲ್ಲ. ಕೆಲಸವೆಂಥದೆಂಬು ದನ್ನು ತಿಳಿಸೋಣವಾಗಲಿ.

ವೃದ್ಧ—ಒಬ್ಬ ಹುಡುಗಿಯು ನನ್ನ ಕೆಲಸಕ್ಕೆ ಅಡ್ಡಿಯಾಗಿರುವಳು. ಆಕೆಯನ್ನು ದೂರಮಾಡಿ ಅಡ್ಡಿಯನ್ನು ಹೋಗಲಾಡಿಸಬೇಕು, ಇದೇ ನನ್ನ ಉದ್ದೇಶವು.

ವೀರ—ಆಗಬಹುದು ; ಆ ಹುಡುಗಿಯಾರು ?

ವೃದ್ಧ—ಕಮಲಾಕಾಂತನ ಪಾಲಿತ ಕನ್ಯೆಯಾದ ಕುಂದನಂದಿನಿ ಯೆಂಬುವಳು.

ವೀರ—ಆಕೆಯಲ್ಲವೇ ನಿಮ್ಮ ಕೆಲಸಕ್ಕೆ ಅಡ್ಡಿ ? ಆಕೆಯನ್ನು ನಾನು ಏನು ಮಾಡಬೇಕು ?

ವೃದ್ಧ—ಆಕೆಯು ಬದುಕಿರುವ ವರೆಗೂ ನನ್ನ ಮಗಳಿಗೆ ಮದುವೆ ಯಾಗುವುದಕ್ಕಿಲ್ಲ.

ವೀರ—ಅದು ಹೇಗೆ? ವಿಷಯವೆಲ್ಲವನ್ನೂ ಆದ್ಯೋಪಾಂತವಾಗಿ ತಿಳಿಸೋಣವಾಗಲಿ. ನಾವು ಆವುದನ್ನೂ ಚೆನ್ನಾಗಿ ಅರಿತುಕೊಳ್ಳದೆಯೇ ಕೆಲಸ ದಲ್ಲಿ ಕೈಹಾಕುವ ಸಂಪ್ರದಾಯದವರಲ್ಲ.

ವೃದ್ಧ—ಅನೇಕವೇಳೆಗಳಲ್ಲಿ ಭೂತನಾಥನೂ ಹೀಗೆಯೇ ಅಭಿಪ್ರಾಯ ಪಡುತ್ತಿದ್ದನು. ಒಳ್ಳೆಯದೇ ಆಯಿತು. ನಾನು ಮಾರಕುಮಾರನಿಗೆ ನನ್ನ ಮಗ ಳನ್ನು ಕೊಡಬೇಕೆಂದಿರುವೆನು. ಆದರೆ ಆತನು ಕುಂದನಂದಿನಿಯನ್ನು ಬಲವಾಗಿ ಪ್ರೀತಿಸುತ್ತಿರುವನು. ನಾನು ಈಗ ಕುಂದನಂದಿನಿಯನ್ನು ಬೇರ್ಪಡಿಸದೇ ಹೋದರೆ, ಆತನು ನನ್ನ ಮಗಳನ್ನು ಮದುವೆಯಾಗನು. ಅದು ಕಾರಣವೇ ನಾನು ಕುಂದನಂದಿನಿಯನ್ನು ದೂರಮಾಡಿ ನನ್ನ ಮಗಳನ್ನು ಆಕೆಯ ಸ್ಥಾನದಲ್ಲಿ ನಿಲ್ಲಿಸಬೇಕು. ವೀರಭದ್ರ ! ಈಗ ನನ್ನ ಉದ್ದೇಶವಾದರೂ ಗೊತ್ತಾಯಿತೇ ?

ವೀರ—ಗೊತ್ತಾಯಿತು, ಚೆನ್ನಾಗಿಯೂ ಗೊತ್ತಾಯಿತು. ತಾವು ಮಾರಕುಮಾರನಿಗೆ ತಮ್ಮ ಮಗಳನ್ನು ವಿವಾಹಮಾಡಿಕೊಡುವುದಾಗಿ ತಮ್ಮ ಇಷ್ಟವಿದ್ದಂತೆ ಗೊತ್ತಾಯಿತು.

ವೃದ್ಧ—ಅಹುದು ; ಈಗ ನಿನ್ನ ಇಷ್ಟವೇನು ?

ವೀರ—ಇದಕ್ಕಾಗಿ ಆ ಹುಡುಗಿಯನ್ನು ಕೊಲ್ಲಬೇಕಾದ ಕೆಲಸವಿಲ್ಲ; ನಿಮ್ಮ ಕೆಲಸವಾಗುವ ವರೆಗೂ ಆಕೆಯನ್ನು ಕಣ್ಮರೆಮಾಡಿದರೆ ಸಾಕೆಂದು ತೋರುವುದು.

ವೃದ್ಧ—ಶತ್ರುಶೇಷವೂ, ಋಣಶೇಷವೂ, ರೋಗಶೇಷವೂ, ಅಗ್ನಿಶೇಷವೂ ಅಪಾಯಕರವಲ್ಲವೇ ? ಆಕೆಯು ಬದುಕಿರುವುದಾದರೆ, ಮಾರಕುಮಾರನು ನನ್ನ ಮಗಳನ್ನು ಮದುವೆಯಾದ ಮೇಲೂ ಆಕೆಯನ್ನೇ ಪ್ರೀತಿಸಬಹುದು; ಬಳಿಕ ನನ್ನ ಮಗಳನ್ನು ಒತ್ತಟ್ಟಿಗಿಟ್ಟು ಆಕೆಯನ್ನೇ ವಿವಾಹಮಾಡಿಕೊಳ್ಳಲೂ ಬಹುದು. ಇದು ಅಸಂಭವವಲ್ಲ.

ವೀರ—ತಾವು ಹೇಳುವುದರಲ್ಲಿ ಸುಳ್ಳೇನೂ ಇಲ್ಲ. ಇದರಲ್ಲಿ ನನ್ನದೊಂದು ಅಭಿಲಾಷೆಯಿರುವುದು. ಅದರಂತೆಯೇ ನಡೆವುದಾದರೆ, ತಮ್ಮ ಸಂಶಯಕ್ಕೆ ಆಸ್ಪದವೇ ಇರಲಾರದು. ಅದೇನೆಂದರೆ—

ಕುಂದನಂದಿನಿಯನ್ನು ನಾನು ಮೊದಲಿನಿಂದಲೂ ಬಲ್ಲೆನು. ಆಕೆಯು ಪರಮಸುಂದರಿಯಾದುದರಿಂದ ನನ್ನ ಮನವು ಆಕೆಯಲ್ಲಿ ನಟ್ಟುಹೋಗಿರುವುದು. ತಮ್ಮ ಹುಡುಗಿಗೆ ಮದುವೆಯಾಗುವ ವರೆಗೂ ಆಕೆಯನ್ನು ಗೋಪ್ಯವಾಗಿಟ್ಟುಕೊಂಡಿದ್ದು ಬಳಿಕ ನಾನು ಆಕೆಯನ್ನು ಮದುವೆಯಾಗುವುದಾದರೆ, ಇಬ್ಬರ ಕೆಲಸವೂ ಸುಮುಖವಾಗಿಯೇ ನೆರವೇರಿಹೋಗುವುದಲ್ಲವೇ ? ಈ ಮಾರ್ಗವು ತಮಗೆ ಹೇಗೆ ತೋರುವುದು ?

ವೃದ್ಧ—ಈ ಆಲೋಚನೆಯು ನನ್ನ ಇಷ್ಟಕ್ಕೆ ಕುಂದನ್ನು ತಾರದಿರುವುದರಿಂದ, ನಿನ್ನ ಇಷ್ಟದಂತೆಯೇ ಆಗಬಹುದು, ಆದರೆ ಕೆಲಸವು ಬೇಗಬೇಗನೆಯೇ ನಡೆದುಹೋಗುವುದು ಒಳ್ಳೆಯದು. ಈಗ ಒಂದು ನೂರು ರೂಪಾಯಿಗಳನ್ನು ತೆಗೆದುಕೊಳ್ಳು. ನನ್ನ ಕೆಲಸವಾದ ಮೇಲೆ ನಿನ್ನ ಮದುವೆಯನ್ನು ನಾನೇ ನಿಂತುಕೊಂಡು ನೆರವೇರಿಸಿಕೊಡುವೆನು.

ವೃದ್ಧನು ಹೀಗೆ ಹೇಳಿ ಒಂದು ನೂರು ರೂಪಾಯಿಗಳ ಪುರಸ್ಕಾರವನ್ನು ಮೊದಲಲ್ಲಿಯೇ ಸಲ್ಲಿಸಿಬಿಟ್ಟನು. " ದ್ರೋಹಿಯ ದುಡ್ಡು ದಂಡಕ್ಕೆ " ಎನ್ನುವುದು ಎಂದಿಗೂ ಸುಳ್ಳಲ್ಲ. ವೀರಭದ್ರನು ಆ ಹಣವನ್ನು ಆದರದಿಂದ ಸ್ವೀಕರಿಸಿ—ಮಹಾಶಯ ? ನಾಳೆಯೊಳಗಾಗಿ ನಿಮ್ಮ ಕೆಲಸವನ್ನು ನೆರವೇರಿಸಿರುವೆನು. ಅಪ್ಪಣೆಯಾದರೆ ಹೊರಡುವೆನು, ಎಂದು ಹೇಳಿ ಅಪ್ಪಣೆಯನ್ನು ತೆಗೆದುಕೊಂಡು ಹೊರಟುಹೋದನು.

ಬಳಿಕ ವೃದ್ಧನು ಕೊಂಚ ಹೊತ್ತು ತಿರುಗಾಡುತಿದ್ದು ತನ್ನ ಹಾಸುಗೆಯ ಮೇಲೆ ಮಲಗಿ ನಿದ್ರಿಸಿದನು.

ಪರಂತಪನು ಈ ಸಮಸ್ತ ವ್ಯಾಪಾರವನ್ನೂ ಕಣ್ಣಾರೆ ನೋಡಿದವನಾಗಿ ಮುದುಕನ ಕ್ರಿಯಾಕೌಶಲವನ್ನು ಜ್ಞಾಪಿಸಿಕೊಂಡು, ಅಚ್ಚರಿಪಡುತ್ತಾ ತನ್ನ ಅಂದಿನ ಕೆಲಸವು ಮುಗಿದುದೆಂದು ತಿಳಿದು ಅದೇ ಹಗ್ಗದ ಮೂಲಕವಾಗಿ ಇಳಿದು ತನ್ನ ಗೃಹಾಭಿಮುಖವಾಗಿ ತೆರಳಿದನು. ಪರಂತಪನು ತನ್ನ ಮನೆಗೆ ಬಂದು ಹಾಸುಗೆಯಲ್ಲಿ ಮಲಗಿ ಬೆಳಗಾಗುವ ವರೆಗೂ ಸುಖದಿಂದ ನಿದ್ರಿಸಿದನು.

---

## ಹದಿನಾರನೆಯ ಸಂಧಿ

### ಗುಪ್ತ ಕಾರ್ಯ ಕಲಾಪ

ಅನಂತರತ್ನನು ಪರಂತಪನ ಬಾಯಿಂದ ನಂದಕುಮಾರನಿಗೆ ಸಂಭವಿಸಬಹುದಾದ ಮಹಾವಿಪತ್ತನ್ನು ಕೇಳಿ ತಡಮಾಡದೆ ನಂದಕುಮಾರನನ್ನು ನೋಡಿಕೊಂಡು ಬರುವುದಕ್ಕಾಗಿ ತೆರಳಿದನು. ಆ ಸಮಯದಲ್ಲಿ ನಂದಕುಮಾರನು ತನ್ನ ಅಜ್ಜನ ಮನೆಯನ್ನು ತ್ಯಾಗಮಾಡಿ ತನಗೆ ಪೂರ್ವಪರಿಚಿತನಾದ ದೊಡ್ಡ ಮನುಷ್ಯನೊಬ್ಬನ ಮನೆಯಲ್ಲಿ ವಾಸವಾಗಿರುತ್ತಿದ್ದನು.

ನಮ್ಮ ನಂದಕುಮಾರನಿಗೂ ಆ ದೊಡ್ಡ ಮನುಷ್ಯನಿಗೂ ಆವ ವಿಧವಾದ ದೇಹಾನುಬಂಧವೂ ಇರಲಿಲ್ಲ. ಆ ದೊಡ್ಡ ಮನುಷ್ಯನು ಗುಣಾಢ್ಯನಾದ ನಂದಕುಮಾರನಿಗೆ ಗೃಹತ್ಯಾಗದ ಸಂಕಟವುಂಟಾದುದಕ್ಕಾಗಿ ಆತನ ದುಃಖದಲ್ಲಿ ದುಃಖಗೊಂಡು, ಆತನನ್ನು ತನ್ನ ಮನೆಯಲ್ಲಿ ವಾಸಮಾಡಿಕೊಂಡಿರುವುದಾಗಿ ಕೇಳಿಕೊಂಡನು. ನಂದಕುಮಾರನು ಕೆಲವು ದಿನಗಳ ಮಟ್ಟಿಗೆ ವಾಸವಾಗಿರುವುದಾಗಿ ಹೇಳಿ ಆ ದೊಡ್ಡ ಮನುಷ್ಯನ ಮನೆಯಲ್ಲಿದ್ದುಕೊಂಡಿದ್ದನು.

ಅನಂತರತ್ನನು ಆ ದೊಡ್ಡ ಮನುಷ್ಯನ ಮನೆಗೆ ಬಂದು 'ನಂದಕುಮಾರನೆಲ್ಲಿ?' ಎಂದು ಪ್ರಶ್ನೆ ಮಾಡಲು, 'ಆತನು ಅರ್ಧಘಂಟೆಗೆ ಮುಂಚೆ ಹೊರಗೆ ಹೋದವನು ಇನ್ನೂ ಮನೆಗೆ ಬರಲಿಲ್ಲ' ಎಂದು ಉತ್ತರವು ಬಂದಿತು.

ಅನಂತರತ್ನನು ಭೀತಿಗೊಂಡು ಕಾಲರುದ್ರನೇನಾದರೂ ನಂದಕುಮಾರನನ್ನು ತನ್ನ ಬಲೆಯಲ್ಲಿ ಸಿಲುಕಿಸಿಕೊಂಡಿರಬಹುದೆಂದು ಶಂಕಿಸುತ್ತಾ ನಂದಕುಮಾರನು ವಾಸವಾಗಿದ್ದ ಕೋಣೆಯನ್ನು ತೋರಬೇಕೆಂದು ಸೇವಕನೊಬ್ಬ

ನನ್ನು ಕೇಳಿದನು. ಅದರಂತೆಯೇ ಸೇವಕನು ಅನಂತರತ್ನನನ್ನು ನಂದಕುಮಾರನ ಕೋಣೆಗೆ ಕರೆದುಕೊಂಡು ಹೋದನು.

ಅನಂತರತ್ನನು ಆ ಕೋಣೆಯೊಳಗೆ ಪ್ರವೇಶಮಾಡಿ ನೋಡಲಾಗಿ ಅಲ್ಲೊಂದು ಬರೆದ ಪತ್ರವು ಬಿದ್ದಿದ್ದಿತು. ಆ ಪತ್ರದ ಒಕ್ಕಣೆಯು ಈ ರೀತಿಯಾಗಿದ್ದಿತು.

ಪತ್ರ

ಪ್ರಿಯತಮ ನಂದಕುಮಾರ !

ಚರಣದಾಸಿಯಾದ ಅರವಿಂದಸುಂದರಿಯ ನಮಸ್ಕಾರಗಳು. ನಿನ್ನ ದರ್ಶನವಾದ ಬಳಿಕ ಅನೇಕ ಕಾರಣಕಥೆಗಳು ನಡೆದು ಹೋಗಿರುವುವು. ಅವುಗಳ ಪರಿಣಾಮವಾದರೋ ವಿಪಜ್ಜನಕವಾಗಿಯೇ ಕಂಡುಬರುತ್ತಿರುವುದು. ನಾನು ನಿನ್ನ ಚರಣದರ್ಶನವನ್ನು ಮತ್ತೊಂದು ಸಲ ತೆಗೆದುಕೊಳ್ಳುವ ವರೆಗೂ ನನ್ನ ಮನವು ಶಾಂತವಾಗಲೊಲ್ಲದು. ನೀನು ನನ್ನಲ್ಲಿಗೆ ಬಂದು ದರ್ಶನವನ್ನು ಕೊಡುವುದು ತಡವಾಗುವುದಾದರೆ, ಇಹಲೋಕದಲ್ಲಿ ನಿನಗೂ ನನಗೂ ಮತ್ತೆ ಸಂದರ್ಶನವಾಗುವ ಸಂಭವವಿಲ್ಲ. ಇದಕ್ಕೆ ಕಾರಣವನ್ನು ವಿವರಿಸುವಷ್ಟು ಸಹನೆಯು ನನಗೆ ಇಲ್ಲದುದರಿಂದ, ನಾನು ಇದಕ್ಕಿಂತಲೂ ಅಧಿಕವಾಗಿ ಬರೆಯಲಾರದವಳಾಗಿರುವೆನು. ನನ್ನಲ್ಲಿನ ಪ್ರೇಮಾತಿಶಯದಿಂದಾಗಲಿ, ಭೂತದಯಾ ಪಶ್ಚಾತ್ತಾಪದಿಂದಾಗಲಿ,— ಇಲ್ಲವೇ, ಮತ್ತಾವ ಕಾರಣದಿಂದಲೇ ಆಗಲಿ, ನೀನು ಈ ಕಾಗದವನ್ನು ಕಂಡ ಕೂಡಲೆಯೇ ನನ್ನಲ್ಲಿಗೆ ಬಂದು ದರ್ಶನವನ್ನೀಯಬೇಕು. ಪ್ರತ್ಯಕ್ಷದಲ್ಲಿ ಎಲ್ಲವೂ ತಾನಾಗಿಯೇ ಗೊತ್ತಾಗುವುದು.

“ ಇತಿ, ಪ್ರಿಯತಮ ಪ್ರೇಮಾಕಾಂಕ್ಷಿಣಿ,

“ ಅರವಿಂದಸುಂದರಿ. ”

ಈ ಪತ್ರವನ್ನು ನೋಡಿ ಅನಂತರತ್ನನು ತನ್ನೊಳಗೆ ತಾನೇ ಈ ರೀತಿಯಾಗಿ ಚಿಂತಿಸಿದನು :—

“ ನಂದಕುಮಾರನು ಅರವಿಂದಸುಂದರಿಯನ್ನು ಪ್ರೀತಿಸುತ್ತಿರಲಿಲ್ಲವಾದರೂ, ಆಕೆಯು ಆತನನ್ನು ಅತಿಶಯವಾಗಿ ಪ್ರೀತಿಸುತ್ತಿದ್ದಳೆಂಬುದನ್ನು ಆತನು ಅರಿತುಕೊಂಡಿದ್ದನು. ಪ್ರೀತಿಯಿಲ್ಲದ ಮೇಲೆ, ನಂದಕುಮಾರನು ಈ ಕಾಗದವನ್ನೇ ನಿಮಿತ್ತಮಾಡಿಕೊಂಡು ಅರವಿಂದಸುಂದರಿಯ ಬಳಿಗೆ ಹೋಗಿಬರುವಷ್ಟು ದಡ್ಡನಲ್ಲ.

ಇಲ್ಲಿ ಮತ್ತೊಂದು ಕಾರಣವನ್ನು ಚಿಂತಿಸಬೇಕಾಗಿರುವುದು. ನಂದಕುಮಾರನು ಅರವಿಂದಳ ತಂದೆಗೆ ಸಾಲಗಾರನಾಗಿರುವನು. ಒಂದೇ ಗಂಟೆನಲ್ಲಿ ಹಣವನ್ನು ತಂದು ಕೊಡಲಿಲ್ಲವೆಂಬ ಆಗ್ರಹದಿಂದ ಧನವೃದ್ಧನು ನಂದಕುಮಾರನನ್ನು ಬಾಯಿಗೆ ಬಂದ ಹಾಗೆ ಬೈದಿರುವನು. ಇದಕ್ಕಾಗಿ ನಂದನು ಹಣವನ್ನು ಸಲ್ಲಿಸುವುದಕ್ಕೆ ಕಾಲಾವಧಿಯನ್ನು ಹೆಚ್ಚಿಸಿ ಕೊಡಬೇಕೆಂದು ಕೇಳಿಕೊಳ್ಳುವಂತೆ ಅರವಿಂದಳಿಗೆ ತಿಳಿಸಿದ್ದನು. ಅರವಿಂದಳು ತಂದೆಗೆ ತಿಳಿಸಿ ಈ ಕಾಗದವನ್ನು ಬರೆದಿರಬಹುದೇ ? ಇಲ್ಲವೇ, ಅರವಿಂದಳು ತಂದೆಯ ಪೆಟ್ಟಿಗೆಯಿಂದ ೧೦,೦೦೦ ರೂಪಾಯಿಗಳನ್ನು ಅಪಹರಿಸಿ, ನಂದಕುಮಾರನ ಮೇಲೆ ಬಂದಿರುವ ಅಪವಾದವನ್ನು ತಪ್ಪಿಸುವ ಬಗೆಗೆ ಆ ಮೊಬಲಗನ್ನು ನಂದನಿಗೆ ಕೊಡುವುದಕ್ಕಾಗಿ ಈ ಕಾಗದವನ್ನು ಬರೆದಿರಬಹುದೇ ? ಇದ್ದರೂ ಇರಬಹುದು.

ಇಲ್ಲಿ ಮತ್ತೊಂದು ಸಂಶಯವೂ ತಲೆದೋರುತ್ತಿರುವುದು. ಅದೇನೆಂದರೆ—"ಧನವೃದ್ಧನು ನಂದಕುಮಾರನನ್ನು ನಿರ್ನಾಮ ಮಾಡುವುದಕ್ಕಾಗಿ ಕಾಲರುದ್ರನ ಸಾಹಾಯ್ಯವನ್ನು ಬೇಡಿರುವನು. ಹಣದ ಆಸೆಯಿಂದಲೋ, ಅರವಿಂದಳು ತನಗೆ ಲಭಿಸುವಳೆಂಬ ಲೋಭದಿಂದಲೋ ಈ ಕಾರ್ಯವನ್ನು ನೆರವೇರಿಸಿ ಕೊಡುವುದಾಗಿ ಮಾತ ಕೊಟ್ಟಿರುವನು. ಕಾಲರುದ್ರನು ತನ್ನ ಕಾರ್ಯಸಾಧನೆಗಾಗಿ ಅರವಿಂದಸುಂದರಿಯು ಬರೆದ ಹಾಗೆ ಈ ಪತ್ರವನ್ನೇನಾದರೂ ಬರೆದಿರಬಹುದೇ ? ಹಿಂದೊಂದು ಸಲ ಪರಂತಪನಿಗೆ ನಾನು ಬರೆದ ಹಾಗೆ ಒಂದು ಕಾಗದವನ್ನು ಬರೆದು ಆತನನ್ನು ಬಲೆಯಲ್ಲಿ ಸಿಲುಕಿಸಿಕೊಂಡಿದ್ದರು. ಈಗಲೂ ಆ ದುಷ್ಟರು ಈ ರೀತಿಯಾದ ಮೋಸವನ್ನು ಮಾಡಿರಬಾರದೇತಕೆ ? ಇದೂ ಸಂಭವವು.

ಅಂತೂ ಈ ಕಾಗದಕ್ಕನುಸಾರವಾಗಿ ಕೃತ್ರಿಮವನ್ನರಿಯದ ನಂದಕುಮಾರನು ಅರವಿಂದಳ ಬಳಿಗೆ ಹೋಗಿದ್ದರೂ ಹೋಗಿರಬಹುದು."

ಅನಂತರತ್ನನು ಹೀಗೆಲ್ಲಾ ಆಲೋಚಿಸಿದ ಬಳಿಕ ಧನವೃದ್ಧನ ಮನೆಗೆ ಬಂದು ನೋಡಿದನು. ಅಲ್ಲಿ ನಂದಕುಮಾರನಿರುವಂತೆ ಕಂಡು ಬರಲಿಲ್ಲ. ಆದರೂ ಅನಂತರತ್ನನು ಅರ್ಧಘಂಟೆಯ ವರೆಗೂ ಆ ಮನೆಯ ಸುತ್ತಲೂ ತಿರುಗಾಡುತ್ತಿದ್ದನು. ಆಗ ಆ ಮನೆಯ ಕೆಳಗಣ ಅಂತಸ್ತಿನಲ್ಲಿ ಅಂಧಕಾರಮಯವಾದ ಕೋಣೆಯೊಂದು ಕಾಣಿಸಿತು. ಆತನು ಅದರ ಹತ್ತಿರಕ್ಕೆ ಬಂದು ನೋಡಲಾಗಿ ಆ ಕೋಣೆಯ ಬಾಗಿಲು ಒಳಗಣಿಂದ ನಿರ್ಬಂಧಿಸಲ್ಪಟ್ಟಿದ್ದಿತು.

ಅನಂತರತ್ನನಿಗೆ ಸಂಶಯಕ್ಕಿಟ್ಟಿತು. ಇದರ ತತ್ತ್ವವೇನಿರಬಹುದೆಂದು ಅರಿತುಕೊಳ್ಳುವುದಕ್ಕಾಗಿ ಅನಂತರತ್ನನು ಅಲ್ಲಿಯೇ ಸುಳಿದಾಡುತ್ತಿದ್ದನು. ಸ್ವಲ್ಪ

ಹೊತ್ತಿನ ಮೇಲೆ ಆ ಮನೆಯ ಒಳಗಡೆಯಿಂದ ಒಂದು ಧ್ವನಿಯು ಕೇಳಿಬಂದಿತು. ಇದರಿಂದ ಅನಂತರತ್ನನ ಸಂಶಯವು ಇಮ್ಮಡಿಸಲು, ಆತನು ಮನೆಯ ಒಳಗೆ ಪ್ರವೇಶಿಸುವುದಕ್ಕೆ ಯತ್ನಮಾಡಿ ನೋಡಿದನು, ಆದರೆ ಅದು ಫಲಿಸದೇ ಹೋಯಿತು. ಇಷ್ಟರಿಂದಲೇ ಅನಂತರತ್ನನು ಎದೆಗೆಡದವನಾಗಿ ಒಂದೆಡೆಯಲ್ಲಿ ಅವಿತುಕೊಂಡು ಮುಂದೇನಾಗುವುದೆಂಬುದನ್ನು ನಿರೀಕ್ಷಿಸಲಾರಂಭಿಸಿದನು.

ಅನಂತರತ್ನನು ದೂರದಿಂದ ನೋಡುತ್ತಿದ್ದ ಹಾಗೆಯೇ, ಆ ಮನೆಯ ಬಾಗಿಲು ತೆರೆಯಲ್ಪಟ್ಟು ಕಾಲರುದ್ರನು ಮತ್ತೊಬ್ಬನನ್ನು ಜತೆಯಲ್ಲಿ ಕರೆದುಕೊಂಡು ಆ ಕೋಣೆಯಿಂದ ಹೊರಗೆ ಬಂದನು. ಅನಂತರತ್ನನು ಇವರನ್ನು ನೋಡಿದವನಾದರೂ, ಅವರು ಮಟ್ಟಿಗೆ ಇವನನ್ನು ನೋಡಲಿಲ್ಲ.

ಬಾಗಿಲು ತೆರೆದ ಕೂಡಲೆ, ಅನಂತರತ್ನನು ಆ ಕೋಣೆಯೊಳಗೆ ದೃಷ್ಟಿಯನ್ನು ಬೀರಿದನು. ಆತನು ಅಲ್ಲಿನ ದೃಶ್ಯವನ್ನು ನೋಡಿದ ಕೂಡಲೆ ಆತನ ಹೃದಯವು ಒಣಗಿಯೇ ಹೋಯಿತು. ಕಾರಣವೇನೆಂದರೆ—ಅಲ್ಲಿ, ನಂದಕುಮಾರನು ಅಲುಗಾಡುವುದಕ್ಕೆ ಕೂಡ ಆಸ್ಪದವಿಲ್ಲದ ಹಾಗೆ ಹಗ್ಗದಿಂದ ಬಿಗಿಯಲ್ಪಟ್ಟಿದ್ದನು.

ಅನಂತರತ್ನನು ಈಯತ್ಯಾಚಾರವನ್ನು ನೋಡಿ ಸಹಿಸಲಾರದವನಾಗಿ, ನಂದಕುಮಾರನನ್ನು ಹೇಗಾದರೂ ಮಾಡಿ ಉದ್ಧಾರಮಾಡಬೇಕೆಂದು ಬಗೆಬಗೆಯಾಗಿ ಚಿಂತಿಸುತ್ತಾ ಒಂದೆಡೆಯಲ್ಲಿ ನಿಂತಿದ್ದನು.

ಕಳ್ಳರಿಬ್ಬರೂ ಆ ಕೋಣೆಯ ಬಾಗಿಲಿಗೆ ಬೀಗ ಹಾಕುವುದಕ್ಕೆ ಮೊದಲು ಸಮೀಪದಲ್ಲಿ ಆರಾದರೂ ಇರಬಹುದೇ ಎಂಬುದನ್ನು ತಿಳಿಯುವುದಕ್ಕಾಗಿ ಸುತ್ತಲೂ ಪರೀಕ್ಷಿಸುತ್ತಿರುವಲ್ಲಿ, ಅನಂತರತ್ನನು ಅವರ ಕಣ್ಣಿಗೆ ಗೋಚರಿಸಿದನು.

ಅನಂತರತ್ನನು ಕಾಲರುದ್ರನಿಗೆ ಪರಿಚಿತನು. ಕಾಲರುದ್ರನು ಅನಂತರತ್ನನನ್ನು ನೋಡಿದ ಕೂಡಲೆ ತನ್ನ ಕೌಶಲವೆಲ್ಲವೂ ಬಯಲಾಯಿತೆಂದು ತಿಳಿದನು. ಆ ಕೂಡಲೆಯೇ ಕಾಲರುದ್ರನು ತಡಮಾಡುವುದಾದರೆ ತನ್ನ ಪ್ರಾಣಕ್ಕೇ ಅಪಾಯವು ಸಂಭವಿಸುವುದೆಂದು ತಿಳಿದು ಮೆಟ್ಟಿದ ನಾಗರ ಹಾವಿನಂತೆ ಬುಸುಗುಟ್ಟುತ್ತಾ ಅನಂತರತ್ನನ ಮೇಲೆ ಬಿದ್ದನು. ಮತ್ತೊಬ್ಬ ಕಳ್ಳನೂ ಕಾಲರುದ್ರನಿಗೆ ಒತ್ತಾಸೆಯಾಗಿ ನಿಂತನು. ಅನಂತರತ್ನನು ಬಲು ಹೊತ್ತು ಇಬ್ಬರೊಡನೆಯೂ ಹೋರಾಡಿ ಹೋರಾಡಿ ಬೇಸತ್ತವನಾಗಿ ಬಸವಳಿದು ಬಿದ್ದುಬಿಟ್ಟನು.

ಕಳ್ಳರಿಬ್ಬರೂ ಅನಂತರತ್ನನಿಗೆ ಹಿಂಗಟ್ಟು ಮುರಿಗಟ್ಟಿ ನಂದಕುಮಾರ ನಿದ್ದೆಡೆಯಲ್ಲಿ ಆತನನ್ನು ನೆಲದ ಮೇಲೆ ಉರುಳಿಸಿ ಬೀದಿಯ ಬಾಗಿಲನ್ನು ಭದ್ರ ಪಡಿಸಿಕೊಂಡು ತಮ್ಮ ಮುಂದಣ ಕೆಲಸದ ಮೇಲೆ ಹೊರಟುಹೋದರು.

---

## ಹದಿನೇಳನೆಯ ಸಂಧಿ

### ಬಾಲಿಕಾ ಹರಣ

ಪರಂತಪನು ತನ್ನ ಕೆಲಸವನ್ನು ತೀರಿಸಿಕೊಂಡು ಬಂಧನಾಗಾರದಿಂದ ಮನೆಗೆ ಬಂದಾಗ, ಅಪರರಾತ್ರಿಯಲ್ಲಿ ಮೂರು ಗಂಟೆಯ ಹೊತ್ತಾಗಿ ಹೋಗಿದ್ದಿತು. ಅಷ್ಟು ಹೊತ್ತಿನಲ್ಲಿ ಆವ ಕೆಲಸ ಮಾಡುವುದಕ್ಕೂ ಅನುಕೂಲಿಸದೆ ತನ್ನ ಹಾಸುಗೆಯ ಮೇಲೆ ಮಲಗಿ ಬೆಳಗಾಗುವ ವರೆಗೂ ಸುಖವಾಗಿ ನಿದ್ರಿಸಿದನು.

ಆತನು ಮರುದಿನ ಪ್ರಾತಃಕಾಲದಲ್ಲಿ ಹಾಸುಗೆಯಿಂದೆದ್ದು ಅನಂತರತ್ನನ ಮನೆಗೆ ಹೋದನು. ಅಲ್ಲಿ ಅನಂತರತ್ನನಿರಲಿಲ್ಲ. ಪರಂತಪನು ಭೃತ್ಯನನ್ನು ಕುರಿತು, ಯಜಮಾನರೆಲ್ಲಿಯೆಂದು ಕೇಳಲಾಗಿ, ಭೃತ್ಯನು—ಸ್ವಾಮಿ ! ಯಜಮಾನರು ನಿನ್ನೆಯ ರಾತ್ರಿಯಲ್ಲಿ ಮನೆಯನ್ನು ಬಿಟ್ಟು ಹೋದವರು ಈಗಣ ವರೆಗೂ ಬರಲಿಲ್ಲ, ಎಂದು ಉತ್ತರವಿತ್ತನು. ಅನಂತರತ್ನನು ಬೇಗನೆಯೇ ಬಂದುಬಿಡಬಹುದೆಂದು ತಿಳಿದು, ಪರಂತಪನು ಅಲ್ಲಿಯೇ ಆತನನ್ನು ನಿರೀಕ್ಷಿಸುತ್ತಾ ಕುಳಿತುಕೊಂಡನು.

ಎಷ್ಟು ಹೊತ್ತಾದರೂ ಅನಂತನು ಬಾರದಿರುವುದನ್ನು ನೋಡಿ, ಪರಂತಪನು ಕಳವಳಗೊಂಡು ಆತನ ಮನೆಯನ್ನು ಬಿಟ್ಟು ಹೊರಗೆ ಬಂದು, ಶೂನ್ಯ ಹೃದಯನಾಗಿ ಬೀದಿಯಲ್ಲಿ ಹೊರಟನು.

ನಂದಕುಮಾರನು ಆವ ದಿನ ಬಂದಿಯಾದನೋ ಅದರ ಮರುದಿನ, ಕುಂದನಂದಿನಿಯು ತನ್ನ ಮನೆಯಲ್ಲಿ ನಿತ್ಯದ ಕೆಲಸವನ್ನು ಮಾಡುತ್ತಿರುವಲ್ಲಿ ಒಬ್ಬ ಹುಡುಗನು ಬಂದು ಪತ್ರವೊಂದನ್ನು ಆಕೆಯ ಕೈಗೆ ಕೊಟ್ಟು ನಿಂತನು. ಕುಂದನಂದಿನಿಯು ಆ ಪತ್ರವನ್ನು ಬಿಚ್ಚಿನೋಡಿದಳು. ಅದರಲ್ಲಿ ನಂದಕುಮಾರನ ಹಸ್ತಾಕ್ಷರವಿದ್ದಿತು. ಅದರಲ್ಲಿ ನಂದಕುಮಾರನಿಗೆ ಸನ್ನಿಪಾತ ಜ್ವರವೆಂದೂ, ಕುಂದನಂದಿನಿಯು ಬೇಗನೆ ಬಂದು ಕೊನೆಯ ಮಾತನ್ನಾದರೂ ಆಡಿಕೊಂಡು ಹೋಗಬೇಕೆಂದೂ ಬರೆದಿದ್ದಿತು.

ಈ ಕಾಗದವನ್ನು ಓದಿದ ಕೂಡಲೆ ಕುಂದನಂದಿನಿಗೆ ಸಿಡಿಲು ಬಡಿದಂತಾಯಿತು. ಆಕೆಯು ಅತಿಪ್ರಯಾಸದಿಂದ ಉಕ್ಕಿಬರುತ್ತಿರುವ ಕಂಬನಿಯನ್ನು ಸೀರೆಯ ಸೆರಗಿನಿಂದ ತೊಡೆದುಕೊಂಡು ಆ ಹುಡುಗನನ್ನು ನೋಡಿ—ಮಗು! ಈ ಪತ್ರವನ್ನು ಕಳುಹಿಸಿರುವವರ ಬಳಿಗೆ ನನ್ನನ್ನು ಕರೆದುಕೊಂಡು ಹೋಗಬಲ್ಲೆಯಾ? ಎಂದು ಪ್ರಶ್ನೆಮಾಡಿದಳು.

ಮೊದಲೇ ಬಂಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಬಂದು ಮನೆಯ ಹಿಂಗಡೆಯಲ್ಲಿ ನಿಲ್ಲಿಸಿ ಒಳಗೆ ಬಂದಿದ್ದ ಬಾಲಕನು ಕುಂದಳ ಪ್ರಶ್ನೆಗೆ ಆಗಬಹುದೆಂದು ಉತ್ತರ ವಿತ್ತನು.

ಕುಂದನಂದಿನಿಯು ತಡಮಾಡದೆ ಆರಿಗೂ ತಿಳಿಯದಂತೆ ಹಿತ್ತಲ ಬಾಗಿಲಿನಿಂದ ಹೊರಟು ಅಲ್ಲಿ ಸಿದ್ಧವಾಗಿ ನಿಂತಿದ್ದ ಬಂಡಿಯನ್ನೇರಿ ಬಾಗಿಲನ್ನು ಮುಚ್ಚಿಕೊಂಡಳು. ಹುಡುಗನು ಗಾಡಿಯ ಮುಂಗಡೆಯಲ್ಲಿ ಕುಳಿತು ಗಾಡಿಯನ್ನು ಹೊಡೆಯುವಂತೆ ಬಂಡಿಯವನಿಗೆ ಸೂಚಿಸಿದನು. ಬಂಡಿಯು ಸರಸರನೆ ತೆರಳಲಾರಂಭಿಸಿತು.

ಒಂದು ಕಾಲುಗಂಟೆಯ ದಾರಿಯನ್ನು ದಾಟಿದ ಬಳಿಕ, ಬಂಡಿಯು ಒಂದೆಡೆಯಲ್ಲಿ ನಿಂತಿತು. ಕುಂದನಂದಿನಿಯು ಬಾಗಿಲನ್ನು ತೆರೆದು ನೋಡುವಲ್ಲಿ ಅದೊಂದು ನಿರ್ಜನ ಪ್ರದೇಶವಾಗಿದ್ದಿತು. ಕುಂದನಂದಿನಿಯು ಮೋಸವಾಯಿತೆಂದು ಥರಥರನೆ ನಡುಗುತ್ತಾ ಕುಳಿತಿರುವಲ್ಲಿ, ವೀರಭದ್ರನು ಬಂಡಿಯೊಳಗೆ ಪ್ರವೇಶಮಾಡಿ ತನ್ನ ಕರವಸ್ತ್ರವನ್ನು ಕುಂದಳ ಮೂಗಿಗೆ ಹಿಡಿದನು. ಕೂಡಲೆಯೇ ಕುಂದನಂದಿನಿಯು ಜ್ಞಾನತಪ್ಪಿದವಳಾಗಿ ಬಂಡಿಯಲ್ಲಿ ಬಿದ್ದುಬಿಟ್ಟಳು. ಬಳಿಕ ವೀರಭದ್ರನು ಆಕೆಯನ್ನು ಒಂದು ಕುಟೀರದೊಳಗೆ ಕರೆದುಕೊಂಡು ಹೋಗಿ ಮಲಗಿಸಿದನು.

ಆ ಕುಟೀರದಲ್ಲಿ ಒಬ್ಬ ಮುದುಕಿಯು ವಾಸಮಾಡಿಕೊಂಡಿರುತ್ತಿದ್ದಳು. ಅವಳಿಗೊಬ್ಬ ಮಗನಿದ್ದನು. ಅವನು ಕಳ್ಳತನದಿಂದ ಸಂಸಾರವನ್ನು ಹೇಗೋ ಹಾಗೆ ನಿರ್ವಹಿಸಿಕೊಂಡು ಹೋಗುತ್ತಿದ್ದನು. ಒಂದೇ ವ್ಯಾಪಾರದವರಾದುದರಿಂದ, ವೀರಭದ್ರನಿಗೂ ಆ ಮುದುಕಿಯ ಮಗನಿಗೂ ವಿಶೇಷವಾದ ಪರಸ್ಪರಾನುರಾಗವಿದ್ದಿತು. ಈ ಅನುರಾಗದ ಬಲದಿಂದಲೇ ವೀರಭದ್ರನು ಕುಂದನಂದಿನಿಯನ್ನು ಅವರ ಮನೆಯಲ್ಲಿ ಮಲಗಿಸಿ, ಮುದುಕಿಯನ್ನು ಕುರಿತು—ಅಮ್ಮಾ! ಈಕೆಯನ್ನು ನೀನು ಕೆಲವು ದಿನಗಳ ವರೆಗೂ ಗೋಪ್ಯವಾಗಿಟ್ಟುಕೊಂಡಿರಬೇಕು. ನಿಮ್ಮ ಮನೆಯವರು ಹೊರತಾಗಿ ಮತ್ತಾರೂ ಈಕೆಯನ್ನು ನೋಡಲು ಅವಕಾಶವನ್ನು ಕಲ್ಪಿಸಿಕೊಡಲಾಗದು, ಎಂದು ಹೇಳಿ ತನ್ನ ಉದ್ದೇಶವೆಲ್ಲವನ್ನೂ ಆಕೆಗೆ ತಿಳಿಸಿದ ಬಳಿಕ

ತನ್ನ ಮನೆಗೆ ಹೊರಟುಬಂದನು. ದಾರಿಯಲ್ಲಿ ವೀರಭದ್ರನು ಕಾಲರುದ್ರನನ್ನು ನೋಡಿ ಅವನಿಂದ ನಂದಕುಮಾರನ ವೃತ್ತಾಂತವೆಲ್ಲವನ್ನೂ ತಿಳಿದುಕೊಂಡು ಆತನೊಡನೆಯೇ ಮನೆಯನ್ನು ಸೇರಿದನು.

ಇತ್ತ ಕಡೆ ಪರಂತಪನು ಎಷ್ಟು ಹೊತ್ತಾದರೂ ಅನಂತರತ್ನನನ್ನು ಕಾಣದವನಾಗಿ ಖಿನ್ನತೆಯಿಂದ ಮುಖವನ್ನು ಜೋಲುಹಾಕಿಕೊಂಡು ತನ್ನ ಮನೆಯ ಕಡೆಗೆ ತೆರಳಿದನು. ಮನೆಯಲ್ಲಿ ಕುಳಿತಿರಲು ಅವನ ಮನವು ಒಡಂಬಡದೆ ಅನಂತರತ್ನನಿಗೆ ಏನೋ ವಿಪತ್ತು ಸಂಭವಿಸಿರಬೇಕೆಂದು ಸಿದ್ಧಾಂತಮಾಡಿಕೊಂಡವನಾಗಿ ಪರಂತಪನು ಆವನನ್ನು ಹುಡುಕುವುದಕ್ಕಾಗಿ ವೇಷವನ್ನು ತಾಳಿಕೊಂಡು ಬೀದಿಯಲ್ಲಿ ಹೊರಟನು. ಆಗ ವೀರಭದ್ರಕಾಲರುದ್ರರು ಮಾತನಾಡಿಕೊಂಡು ಹೋಗುತ್ತಿದ್ದರು.

ಪರಂತಪನು ಇವರನ್ನು ನೋಡಿದ ಕೂಡಲೆ ತಾನು ಒಳ್ಳೆಯ ಮುಹೂರ್ತದಲ್ಲಿಯೇ ಮನೆಯನ್ನು ಬಿಟ್ಟು ಹೊರಟಿರುವೆನೆಂದು ತಿಳಿದವನಾಗಿ ಅವರ ಕಣ್ಣಿಗೆ ಬೀಳದ ಹಾಗೆ ಅವರ ಹಿಂದೆಹಿಂದೆಯೇ ಹೊರಟನು. ಕಳ್ಳರಿಬ್ಬರೂ ಮಾತನಾಡಿಕೊಂಡು ಹೋಗುತ್ತಿದ್ದರೆಂದು ಮೊದಲೆ ಸೂಚಿತವಾಗಿರುವುದಷ್ಟೇ? ಪರಂತಪನು ಅವರ ಸಂಭಾಷಣವನ್ನು ಹೇಗೆ ಕೇಳಿದನೋ ಹಾಗೆಯೇ ಅದನ್ನು ನಮ್ಮ ಪ್ರಿಯ ಪಾಠಕ ಮಹಾಶಯರ ಅವಗಾಹನೆಗಾಗಿ ಇಲ್ಲಿ ವಿವರಿಸುವೆವು.

## ಸಂಭಾಷಣೆ

ವೀರಭದ್ರ—ಕಾಲರುದ್ರ! ಈ ದಿನ ನನಗೆ ಒಳ್ಳೆಯ ಬೇಟೆಯೇ ಸಿಕ್ಕಿತು.

ಕಾಲರುದ್ರ—ಇಲ್ಲಿ ನೋಡು ವೀರಭದ್ರ? ನನಗೂ ನಿನಗೂ ಇಂದಿನ ಪರಿಚಯವಲ್ಲ. ನಮ್ಮಿಬ್ಬರಿಗೂ ಬಹು ಕಾಲದಿಂದಲೂ ಸದ್ಭಾವವಿರುವುದು. ಹೀಗಿರುವಲ್ಲಿ ನೀನು ಮಟ್ಟಿಗೆ ನನ್ನ ವಿಷಯದಲ್ಲಿ ನಿರ್ವಂಚನೆಯಾಗಿ ವರ್ತಿಸುತ್ತಿರಬೇಕು, ಕಂಡೆಯಾ? ನಿನಗೆ ಸಿಕ್ಕಿದ ಬೇಟೆಯೆಂಥದು?

ವೀರ—ಒಳ್ಳೆಯ ಸೌಭಾಗ್ಯದೇವತೆ.

ಕಾಲ—ಅರ್ಥವಾಗಲಿಲ್ಲ.

ವೀರ—ಕಮಲಾಕಾಂತನ ಪಾಲಿತ ಕನ್ಯೆಯಾದ ಕುಂದನಂದಿನಿ.

ಕಾಲ—ಕುಂದನಂದಿನಿಯೇ! ಹಿಂದೊಂದು ದಿನ—

ವೀರ—ಅಹುದಹುದು. ಹಿಂದೊಂದು ದಿನ.

ಕಾಲ—ಅಯ್ಯೋ ಪಾಪ! ಆ ಹುಡುಗಿಯು ಮಾಡಿದ ಅಪರಾಧವಾದರೂ ಏನು?

ವೀರ—ನಮ್ಮ ಧನವೃದ್ಧ ಮಹಾಶಯರ ಇಚ್ಛೆ.

ಕಾಲ—ಧನವೃದ್ಧ ಮಹಾಶಯರಾರು? ನಮ್ಮ ಅರವಿಂದಸುಂದರಿಯ ತಂದೆಯೇ?

ವೀರ—ಅವರೇ. ಅವರ ಅಪ್ಪಣೆಯಂತೆಯೇ ನಾನು ಕೆಲಸವನ್ನು ಸಾಂಗವಾಗಿ ನೆರವೇರಿಸಿರುವೆನು. ಅವರು ಹುಡುಗಿಯನ್ನು ಕೊಂದುಬಿಡುವುದಾಗಿಯೇ ಅಪ್ಪಣೆಮಾಡಿದ್ದರು, ಆದರೆ ಅಂತಹ ತ್ರಿಪುರಸುಂದರಿಯನ್ನು ಕೊಲ್ಲಲು ನನಗೆ ಇಷ್ಟವುಂಟಾಗಲಿಲ್ಲ. ನಾನು ಆಕೆಯನ್ನು ವಿವಾಹಮಾಡಿಕೊಳ್ಳುವುದಾಗಿ ಹೇಳಿ ಆ ಮುದುಕನ ಮನಸ್ಸು ಬದಲಾಯಿಸುವ ಹಾಗೆ ಮಾಡಿಬಿಟ್ಟೆನು. ಕೊಂಚ ದಿನಗಳೊಳಗಾಗಿಯೇ ನಾನು ಕುಂದನಂದಿನಿಯನ್ನು ಮದುವೆಯಾಗಿ ಸುಖದಿಂದ ಬಾಳುವೆನು.

ಕಾಲ—ಇದೇನಚ್ಚರಿ! ಆ ಮುದುಕನು ನನಗೂ ಒಂದು ಕೆಲಸವನ್ನು ಅಂಟಿಸಿದ್ದನು. ಅಯ್ಯಾ ವೀರಭದ್ರ! ನೀನು ಕುಂದನಂದಿನಿಯನ್ನು ಸ್ವಾಧೀನಪಡಿಸಿಕೊಂಡೆಯಾ?

ವೀರ—ಅಹುದು, ಸ್ವಾಧೀನಪಡಿಸಿಕೊಂಡು ಆಕೆಯನ್ನು ಅದೊಂದು ಗೋಪ್ಯವಾದ ಸ್ಥಾನದಲ್ಲಿ ಅವಿತಿಟ್ಟಿರುವೆನು. ಆ ಪ್ರದೇಶವು ಆರಿಗೂ ಗೋಚರವಾಗುವಂತಿಲ್ಲ.

ಕಾಲ—ನನಗೆ ಗೋಚರವಾಗದ ಸ್ಥಲವದೆಂಥದಯ್ಯಾ? ಎಲ್ಲಿದ್ದರೂ ಭೇದಿಸತಕ್ಕ ನನಗೂ ಮೃತ್ಯುದೇವತೆಗೂ ಗೋಚರವಾಗದ ಪ್ರದೇಶವಾವುದು?

ವೀರ—ಅದು ನಿನಗೆ ಗೊತ್ತಿಲ್ಲದೇ ಏನು? ಗಣೇಶಚಂದ್ರನ ಗಲ್ಲಿಯಲ್ಲಿ ೧೨ನೆಯ ನಂಬರಿನ ಮನೆಯನ್ನು ನೀನು ಕಾಣೆಯಾ?

ಕಾಲ—ಆ ಕಳ್ಳಹುಡುಗನ ತಾಯಿಯ ಮನೆಯೇ! ಅದನ್ನು ಕಾಣದವರಾರು?

ವೀರ—ಆಕೆಯ ಮನೆಯು ನಮ್ಮ ಕೆಲಸಕ್ಕೆ ಗೊಪ್ಯವಾಗಿ ಕಂಡುಬಂದುದರಿಂದ, ನಾನು ಕುಂದನಂದಿನಿಯನ್ನು ಅವಳ ಬಳಿಯಲ್ಲಿ ಭದ್ರಪಡಿಸಿ ಬಂದಿರುವೆನು. ಮಿತ್ರನೇ! ನಿನಗೆ ಅಪ್ಪಣೆಯಾಗಿದ್ದ ಕೆಲಸವಾವುದು?

ಕಾಲ—ನಂದಕುಮಾರನನ್ನು ನಿರ್ಮೂಲಮಾಡಬೇಕೆಂದು ನನಗೆ ಅಪ್ಪಣೆಯಾಗಿದ್ದಿತು.

ಕಾಲರುದ್ರನು ಹೀಗೆ ಹೇಳಿ ತಾನು ಮಾಡಿದ ಸಾಹಸವೆಲ್ಲವನ್ನೂ ವೀರ ಭದ್ರನಿಗೆ ತಿಳಿಯಪಡಿಸಿದನು.

ವೀರಭದ್ರನು ಅದೆಲ್ಲವನ್ನೂ ಕೇಳಿ—ಅಯ್ಯೋ ಮಿತ್ರನೇ! ಆ ಮುದುಕನು ಅತಿಭಯಂಕರನಾದ ನರಪಿಶಾಚನು. ಆತನ ಮಗಳನ್ನು ನಿನಗೆ ಕೊಟ್ಟು ವಿವಾಹ ವಾಗುವುದು ಸುಳ್ಳಿನ ಸುದ್ದಿಯು. ಇದರ ಮರ್ಮವನ್ನು ನಾವು ಹೊರಪಡಿಸಲೇ ಬೇಕು, ಎಂದನು.

ಕಾಲ—ನನಗೂ ಸಂಶಯವೇ ತೋರಿಬರುತ್ತಿರುವುದು.

ವೀರ—ನೀನು ಆ ಇಬ್ಬರು ಬಂದಿಗಳನ್ನು ಎಲ್ಲಿಟ್ಟು ಬಂದಿರುವೆ?

ಕಾಲ—ಆ ಮುದುಕನ ಮನೆಯ ಕೆಳಗಣ ಅಂತಸ್ತಿನಲ್ಲಿ ಒಂದು ಅಂಧ ಕಾರಮಯವಾದ ಕೋಣೆಯಿರುವುದು. ಅದರಲ್ಲಿ ಅವರಿಬ್ಬರನ್ನೂ ಭದ್ರಪಡಿ ಸಿಟ್ಟಿರುವೆನು.

ವೀರ—ನೀನು ಅವರಿಬ್ಬರನ್ನೂ ಕೊನೆಗೆ ಏನ ಮಾಡಬೇಕೆಂದಿರುವೆ? ಅವರಿಬ್ಬರನ್ನೂ ಕೊಂದುಬಿಡುವೆಯಾ ಹೇಗೆ?

ಕಾಲ—ಅವರು ಸಾಯುವುದೇನೋ ನಿಜ, ಆದರೆ ನಾನು ಅವರಿಬ್ಬ ರನ್ನೂ ನನ್ನ ಕೈಯಿಂದಲೇ ಕೊಲ್ಲುವುದಿಲ್ಲ. ಆ ಅಂಧಕಾರಕೂಪದಲ್ಲಿ ಅನ್ನ ಪಾನಾದಿಗಳನ್ನು ಕೊಡದೇ ಇದ್ದರಾಯಿತು. ಒಂದೆರಡು ದಿನಗಳಿನ್ನುವುದರೊಳ ಗಾಗಿಯೇ ಅವರೇ ಸತ್ತು ಹೋಗುವರು. ಸಾಯಿಸುವುದಕ್ಕೆ ಅನೇಕ ಮಾರ್ಗ ಗಳಿರುವಲ್ಲಿ ನಾವೇಕೆ ಕಯ್ಯಿಂದ ಕೊಲ್ಲಬೇಕು?

ಕಳ್ಳರಿಬ್ಬರ ಸಂಭಾಷಣೆಯು ಈ ರೀತಿಯಲ್ಲಿ ಕೊನೆಗಂಡಿತು. ಬಳಿಕ ಅವರಿಬ್ಬರೂ ತಮ್ಮತಮ್ಮ ಕೆಲಸದ ಮೇಲೆ ತೆರಳಿಬಿಟ್ಟರು. ಪರಂತಪನು ಇದೆಲ್ಲ ವನ್ನೂ ಚೆನ್ನಾಗಿಯೂ ಅರಿತುಕೊಂಡವನಾಗಿ ಆ ಧನವೃದ್ಧನ ಮನೆಯ ಕಡೆಗೆ ತೆರಳಿದನು.

---

## ಹದಿನೆಂಟನೆಯ ಸಂಧಿ

### ಮುಕ್ತಿ

ಪರಂತಪನು ಅತ್ಯಲ್ಪಕಾಲದೊಳಗಾಗಿ ಆ ವೃದ್ಧನ ಮನೆಯ ಹತ್ತಿರಕ್ಕೆ ಬಂದು, ಕಾಲರುದ್ರನು ವರ್ಣಿಸಿದ್ದ ಕೋಣೆಯನ್ನು ಗುರುತಿಸಿದನು. ಆ ಕೋಣೆಯ ಬಾಗಿಲಿಗೆ ಬೀಗವು ಹಾಕಲ್ಪಟ್ಟಿದ್ದಿತು. ಪರಂತಪನು ತನ್ನ ಕಿಸೆಯಿಂದ ಆವ ಬೀಗವನ್ನಾದರೂ ತೆಗೆಯ ಬಹುದಾದ ಮೊಳೆಯೊಂದನ್ನು ಹೊರಗೆ ತೆಗೆದು ಬೀಗ ವನ್ನು ಸಡಲಿಸುವುದಕ್ಕೆ ಸಿದ್ಧನಾದನು.

ದೈವಯೋಗದಿಂದ ಬೀಗವು ತೆರೆದುದಾಯಿತು. ಬಳಿಕ ಪರಂತಪನು ಆ ಕೋಣೆಯೊಳಗೆ ಪ್ರವೇಶಮಾಡಿ ನೋಡಲಾಗಿ ಇಬ್ಬರೂ ಬಂದಿಗಳಾಗಿ ನೆಲದ ಮೇಲೆ ಬಿದ್ದಿದ್ದರು. ಅವರಲ್ಲಿ ಒಬ್ಬನು ನಂದಕುಮಾರನು; ಮತ್ತೊಬ್ಬನು ಸರಕಾರದ ಪತ್ತೇದಾರನೆನಿಸಿದ ಅನಂತರತ್ನನು. ಪರಂತಪನು ಇವರಿಬ್ಬರನ್ನೂ ನೋಡಿದ ಕೂಡಲೆ ಆನಂದಪರವಶನಾಗಿ ಒಂದು ಚೂರಿಯ ಸಾಹಾಯ್ಯದಿಂದ ಅವರಿಬ್ಬರ ಬಂಧನವನ್ನೂ ನಿಮಿಷಮಾತ್ರದಲ್ಲಿ ಕತ್ತರಿಸಿ ಹಾಕಲು, ಅವರಿಬ್ಬರೂ ಎದ್ದು ನಿಂತು ಪರಂತಪನು ಮಾಡಿದ ಉಪಕಾರಕ್ಕೆ ಬಲುವಾಗಿ ಸಂತಸಗೊಂಡು ತಮ್ಮನ್ನು ಉದ್ಧಾರಮಾಡಿದಾತನಿಗೆ ಅನಂತಾನಂತ ವಂದನೆಗಳನ್ನರ್ಪಿಸಿದರು. ಪರಂತಪನು ತಾನು ಕರ್ತವ್ಯವನ್ನು ಮಾಡಿರುವನೆಂದೂ, ಅದಕ್ಕಾಗಿ ಇಷ್ಟು ವಂದನೆಗಳಿಗೆ ತಾನು ಅವಾಗಲೂ ಯೋಗ್ಯನಲ್ಲವೆಂದೂ, ಎಲ್ಲವೂ ಭಗವಂತನ ಲೀಲೆಯೆಂದೂ, ಆತನನ್ನೇ ಪ್ರತಿಯೊಬ್ಬನೂ ಕೊಂಡಾಡಬೇಕೆಂದೂ ಹೇಳಿ ಸುಮ್ಮನಾದನು.

ಪರಂತಪನು ಇಷ್ಟನ್ನು ಹೇಳಿದ ಬಳಿಕ ವೀರಭದ್ರ ಕಾಲರುದ್ರರಿಗೆ ನಡೆದ ಸಂಭಾಷಣೆಯನ್ನೂ ವಿವರಿಸಿ ಹೇಳಿದನು. ಇದನ್ನು ಕೇಳಿ ನಂದಕುಮಾರನು ಅನಂತರತ್ನನನ್ನು ಕುರಿತು—ಮಹಾಶಯ! ಕುಂದನಂದಿನಿಗೆ ಸಂಭವಿಸಿರುವ ವಿಪತ್ತನ್ನು ಜ್ಞಾಪಿಸಿಕೊಂಡರೆ ನನ್ನ ಎದೆಯು ಚೂರ್ಣವಾಗಿ ಹೋಗುವುದು. ಪರಂತಪ ಮಹಾಶಯರು ಈ ಸಂವಾದವನ್ನು ಕೇಳದಿದ್ದರೆ, ನಮ್ಮಗಳ ಪಾಡು ನಾಯ ಪಾಡಾಗಿ ಹೋಗುತ್ತಿದ್ದಿತು. ನಮ್ಮ ಭಾಗದ ದೇವರೇ ಇವರಾಗಿ ಬಂದು ನಮ್ಮನ್ನು ಉದ್ಧಾರ ಮಾಡಿದನು. ಅವ್ಯಾಜಕರುಣಾಪೂರ್ಣನಾದ ಭಗವಂತನ ಮಹಿಮೆಯು ಅಪ್ರಮೇಯವಾದುದು, ಎಂದು ನುಡಿದನು.

ಈ ಮಾತನ್ನು ಕೇಳಿದ ಅನಂತರತ್ನನು ಮುಗುಳು ನಗೆಯೊಂದನ್ನು ನಕ್ಕು—ನಂದಕುಮಾರ! ಪರಂತಪ ಮಹಾಶಯನಿಗೆ ಇದೇನೂ ಹೊಸದಲ್ಲ;

ಅನೇಕ ವೇಳೆಗಳಲ್ಲಿ ಈತನು ನನ್ನನ್ನು ವಿಪತ್ಪರಂಪರೆಗಳಿಂದ ಉದ್ಧಾರಮಾಡಿರುವನು. ಅದಕ್ಕಾಗಿ ನಾನು ಈತನಿಗೆ ಅನಂತಕಾಲದ ವರೆಗೂ ಋಣಿಯಾಗಿರುವೆನು. ಸಮಯಕ್ಕೆ ತಕ್ಕ ಹಾಗೆ ಕೆಲಸ ಮಾಡುವುದರಲ್ಲಿ ಈತನನ್ನು ಬಿಟ್ಟರೆ ಲೋಕದಲ್ಲಿ ಮತ್ತಾರೂ ಇಲ್ಲ. ಕಾಲದ ತತ್ತ್ವವನ್ನು ಅರಿತವರಲ್ಲಿ ಈತನೇ ಅಗ್ರಗಣ್ಯನು. ಈತನಂತಹ ಪ್ರಸಿದ್ಧರಾದ ಪತ್ತೇದಾರರು ಅತಿ ವಿರಳರೆಂದೇ ಹೇಳಬೇಕು, ಎಂದು ಶ್ಲಾಘಿಸಿದನು.

ಪರಂತಪನು ಈ ಸ್ತೋತ್ರ ಭಾಗವನ್ನು ಕೇಳಿ ನಾಚುಗೆ ಗೊಂಡವನಾಗಿ ಅಲ್ಲಿ ಒಂದು ಕ್ಷಣಕಾಲವೂ ನಿಲ್ಲದೆ ಹೊರಟು ಹೋದನು. ಅನಂತರದಲ್ಲಿ ಅನಂತ ರತ್ನ ನಂದಕುಮಾರರು ಕುಂದನಂದಿನಿಯನ್ನು ಹುಡುಕಿಕೊಂಡು ಬರುವುದಕ್ಕಾಗಿ ತೆರಳಿದರು.

ಪರಂತಪನು ಕುಂದನಂದಿನಿಯಿರುವ ಸ್ಥಲದ ಕುರುಹನ್ನು ಆವ ರೀತಿಯಲ್ಲಿ ತಿಳಿಸಿ ಹೊರಟುಹೋದನೋ, ಅದಕ್ಕನುಸಾರವಾಗಿಯೇ ಅನಂತರತ್ನನೂ ನಂದಕುಮಾರನೂ ನಡೆದುಕೊಳ್ಳುತ್ತಾ ಕಟ್ಟಕಡೆಗೆ ಗಣೇಶಚಂದ್ರನ ಗಲ್ಲಿಯಲ್ಲಿನ ೧೭ನೆಯ ನಂಬರಿನ ಮನೆಗೆ ಬಂದು ನೋಡಲಾಗಿ ಅಲ್ಲಿ ಕುಂದನಂದಿನಿಯಿರಲಿಲ್ಲ. ಅಲ್ಲಿ ಕುಂದನಂದಿನಿಯು ಸಿಕ್ಕಲಿಲ್ಲವೆಂದೊಡನೆಯೇ ನಂದಕುಮಾರನು ತಲೆಯ ಮೇಲೆ ಕೈಗಳನ್ನು ಹೊತ್ತುಕೊಂಡು ಭೂಮ್ಯಾಕಾಶಗಳನ್ನು ಚಿಂತಿಸುತ್ತಾ ಕುಳಿತುಬಿಟ್ಟನು. ಅನಂತರತ್ನನು ನಂದಕುಮಾರನ ಈ ದುರವಸ್ಥೆಯನ್ನು ನೋಡಿ ಕನಿಕರದಿಂದ—ನಂದಕುಮಾರ! ನೀನು ಇಷ್ಟು ಅಧೀರನಾಗಲು ಕಾರಣವೇನಿರುವುದು? ಪರಂತಪನು ಕೇಳಿದುದನ್ನು ಕೇಳಿದ ಹಾಗೆಯೇ ನಮಗೆ ತಿಳಿಸಿದನು. ಅದರಲ್ಲಿ ತಪ್ಪೇನಿರುವುದು? ವೀರಭದ್ರನು ಕಾಲರುದ್ರನಿಗೆ ಕುಂದನಂದಿನಿಯ ವಿಷಯದಲ್ಲಿ ಸುಳ್ಳಿನ ಸುದ್ದಿಯನ್ನು ಹೇಳಿರಬಹುದು. ಒಬ್ಬರನ್ನು ಮತ್ತೊಬ್ಬರು ನಂಬದಿರುವುದು ಮಾಯಾವಿಗಳ ಸ್ವಭಾವವೇ ಆಗಿರುವುದು. ಏನಾದರೂ ಆಗಲಿ, ನೀನು ಮನೆಗೆ ತೆರಳು. ನಾನು ಇದರ ತತ್ತ್ವವನ್ನು ಅರಿತುಕೊಳ್ಳದೆಯೇ ಹಿಂದಿರುಗಿ ಬರುವವನಾಗಿಲ್ಲ, ಎಂದು ಸಮಾಧಾನದಿಂದ ಮಾತನಾಡಿದನು.

ನಂದಕುಮಾರನು ಅನಂತರತ್ನನ ಮಾತಿಗೆ ಪ್ರತಿಯಾಗಿ ಆಡದೆ, ದುಃಖದ ಭಾರದಿಂದ ಕುಗ್ಗಿದವನಾಗಿ ಮೆಲ್ಲ ಮೆಲ್ಲನೆ ತಾನಿದ್ದ ಮನೆಗೆ ಬಂದು, ಅನಂತ ರತ್ನನು ಹಿಂದಿರುಗಿ ಬರುವುದನ್ನೇ ಇದಿರುನೋಡುತ್ತಾ ಕುಳಿತಿದ್ದನು.

ನಂದಕುಮಾರನು ವ್ಯಸನದಿಂದ ಮೈಮರೆತು ತನ್ನ ಕೋಣೆಯಲ್ಲಿ ಕುಳಿತು ಕೊಂಡಿರುವ ಸಮಯದಲ್ಲಿ ರಮಣೀಮಣಿಯೊಬ್ಬಳು ಆತನಿದ್ದಲ್ಲಿಗೆ ಬಂದು— ನಂದಕುಮಾರ! ಇಷ್ಟು ಹೊತ್ತಿನ ವರೆಗೂ ನೀನು ಎಲ್ಲಿಗೆ ಹೋಗಿದ್ದೆ? ನಾನು ಇದಕ್ಕೆ ಹಿಂದೆ ಒಂದು ಸಲ ಬಂದು ನೋಡಿದೆನು; ಆಗ ನೀನು ಮನೆಯಲ್ಲಿರ ಲಿಲ್ಲ. ಈಗಲೂ ನೀನು ಇರುವೆಯೋ ಇಲ್ಲವೋ ಎಂಬ ಶಂಕೆಯಿಂದಲೇ ಇಲ್ಲಿಗೆ ಬಂದೆನು. ನೀನು ಇಲ್ಲಿರುವುದನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ನಿನ್ನೊಡನೆ ನಾನು ವಿಶೇಷವಾಗಿ ಮಾತನಾಡಬೇಕೆಂದು ಬಂದಿರುವೆನು, ಎಂದು ನಗುನಗುತೆ ಮಾತನಾಡಿದಳು.

ನಂದಕುಮಾರನು ತಲೆಯೆತ್ತಿ ನೋಡಿ—ಅದೆಂತಹ ಮಾತು, ಅರವಿಂದ? ಎಂದನು.

ಅರವಿಂದ—ನಾನು ನಿನ್ನ ಉದ್ಧಾರಕ್ಕಾಗಿ ಒಂದು ಉಪಾಯವನ್ನು ಹುಡುಕಿಕೊಂಡು ಬಂದಿರುವೆನು.

ನಂದ—ನಾನು ಈಗ ಬಂದಿಯಾಗಿಲ್ಲ—ಎಂದ ಮೇಲೆ, ನನಗೆ ಉದ್ಧಾರ ವೆಂದರೇನು? ಈಗ ನಾನು ಪರಾಧೀನನಲ್ಲ, ಸ್ವಾಧೀನದಲ್ಲಿಯೇ ಇರುವೆನು.

ಅರವಿಂದ—ಏನ ಹೇಳಿದೆ? ಇಷ್ಟರೊಳಗಾಗಿಯೇ ನನ್ನ ತಂದೆಯ ಸಾಲವನ್ನು ತೀರಿಸಿ ಋಣಮುಕ್ತನಾದೆಯಾ?

ನಂದ—ಇಲ್ಲ, ಅರವಿಂದಾ! ಈಗ ನನ್ನಲ್ಲಿ ಒಂದು ಕವಡೆಯೂ ಇಲ್ಲ ವೆಂದು ನಾನು ನಿನಗೆ ಮೊದಲೇ ತಿಳಿಸಿರಲಿಲ್ಲವೇ? ಹೀಗಿರುವಲ್ಲಿ ೧೦,೦೦೦ ರೂಪಾಯಿಗಳನ್ನು ಸಂಗ್ರಹಿಸುವುದು ಸಾಮಾನ್ಯವಾದ ಕೆಲಸವಲ್ಲ. ಈದಸೆಯಲ್ಲಿ ನನ್ನನ್ನು ನೋಡಿ ಕನಿಕರ ಪಡುವವರಂತೂ ಇಲ್ಲವೇ ಇಲ್ಲ. ನಾನು ಒತ್ತಾಸೆ ಯಾಗಿ ನಿಂತು ಆರಿಗೆ ಹಣವನ್ನು ಸಾಲವಾಗಿ ಕೊಡಿಸಿದೆನೋ ಆತನು ನನಗೆ ಪರಮಶತ್ರುವೇ ಆಗಿರುವನು.

ಅರವಿಂದ—ನಂದಕುಮಾರ! ಕನಿಕರಪಡುವವರು ಆರೂ ಇಲ್ಲವೆಂದು ನೀನು ಕೊರಗಬೇಕಾದುದೇನೂ ಇರುವುದಿಲ್ಲ. ನಿನ್ನನ್ನು ಈ ವಿಪತ್ತಿನಿಂದ ಪಾರಗಾಣಿಸಬೇಕೆಂದೆಣಿಸಿ, ನಾನು ೧೦,೦೦೦ ರೂಪಾಯಿಗಳನ್ನು ತಂದಿರುವೆನು. ನೀನು ಇದನ್ನು ತೆಗೆದುಕೊಂಡು ಹೋಗಿ ನನ್ನ ತಂದೆಗೆ ಕೊಟ್ಟು ಋಣದಿಂದ ಮುಕ್ತನಾಗು. ನೀನು ನನ್ನ ಈ ಪ್ರಾರ್ಥನೆಯನ್ನು ನೆರವೇರಿಸಿ ಕೊಡಬೇಕೆಂದು ನಾನು ಸೆರಗೊಡ್ಡಿ ಬೇಡುವೆನು.

ನಂದ—ಅರವಿಂದಾ! ನನ್ನನ್ನು ನಿರ್ಬಂಧಪಡಿಸಬೇಡ. ನಿನ್ನಿಂದ ಹಣವನ್ನು ತೆಗೆದುಕೊಳ್ಳುವುದಕ್ಕೆ ನನಗೆ ಇಷ್ಟವಿಲ್ಲ. ಇದರ ಮೇಲೂ ನೀನು ಇನ್ನೂ ಹುಡುಗಿ; ನಿನ್ನ ಬಳಿಯಲ್ಲಿ ಅಷ್ಟು ಹಣವು ಎಲ್ಲಿಂದ ಬಂದಿತು?

ಅರವಿಂದ—ನನ್ನಲ್ಲಿ ಹಣ ಬಂದ ಬಗೆಯನ್ನು ಆಮೇಲೆ ತಿಳಿಸುವೆನು. ನಿನಗಾಗಿ ನಾನು ಎಷ್ಟೋ ಶ್ರಮಪಟ್ಟು ಹಣವನ್ನು ತಂದಿರುವಲ್ಲಿ, ನೀನು ಒಂದೇ ಮಾತಿನಿಂದ ತೆಗೆದುಕೊಳ್ಳುವುದಕ್ಕೆ ಆಗಲಾರದೆಂದು ಹೇಳಿಬಿಡುವುದಾದರೆ, ನಾನು ಈ ಸಂಕಟವನ್ನು ಹೇಗೆ ತಾನೇ ಸಹಿಸಿಕೊಂಡು ಬದುಕಿರಲಿ? ನೀನು ಹೀಗೆ ತಿರಸ್ಕರಿಸುವುದಕ್ಕೆ ನಾನು ಮಾಡಿದ ಅಪರಾಧವಾದರೂ ಏನು?

ನಂದ—ಅರವಿಂದಾ! ನನಗಾಗಿ ನೀನು ಇಷ್ಟು ತೊಂದರೆಯನ್ನು ತೆಗೆದು ಕೊಳ್ಳಲು ಕಾರಣವೇನು? ಇದರಲ್ಲಿ ನಿನ್ನ ಉದ್ದೇಶವಾದರೂ ಏನು? ಇದರಲ್ಲಿ ನಿನಗೆ ಸ್ವಾರ್ಥವೇನೋ ಇರಬೇಕೆಂದು ನಾನು ಊಹಿಸಲೇ ಬೇಕಾಗುವುದು.

ಅರವಿಂದ—ಲೋಕದಲ್ಲಿ ಪ್ರಾಣಿಸಾಮಾನ್ಯವೆಲ್ಲವೂ ಸ್ವಾರ್ಥದಲ್ಲಿ ದೃಷ್ಟಿ ಯುಳ್ಳುದಾಗಿಯೇ ಇರುವುದು. ನನ್ನಲ್ಲಿ ಒಂದು ಬಗೆಯ ಸ್ವಾರ್ಥವಿರುವುದಾದರೆ, ನಿನ್ನಲ್ಲಿ ಮತ್ತೊಂದು ಬಗೆಯ ಸ್ವಾರ್ಥವು ಇದ್ದೇ ಇರುವುದು. ನೀನು ಇದನ್ನು ಸ್ವೀಕರಿಸಬೇಕು, ಇಲ್ಲವಾದರೆ ನನಗೆ ತುಂಬಾ ದುಃಖವುಂಟಾಗುವುದು.

ನಂದ—ಇದರಲ್ಲಿ ನಿನ್ನ ಸ್ವಾರ್ಥವಾದರೂ ಏನು?

ಅರವಿಂದ—ನಂದಕುಮಾರ! ನಾನು ನಿನ್ನನ್ನು ಪ್ರೀತಿಸುವುದೇ ನನ್ನ ಸ್ವಾರ್ಥವು. ಆವ ದಿನದ ಸುಮುಹೂರ್ತದಲ್ಲಿ ನನಗೆ ನಿನ್ನ ಪ್ರಥಮದರ್ಶನ ವಾಯಿತೋ, ಅಂದು ಮೊದಲು ನನ್ನ ಮನವು ನಿನ್ನ ರೂಪಿನಲ್ಲಿ ಮುಗ್ಧವಾಗಿ ಹೋ ಗಿರುವುದು. ನಿನಗೆ ಕೊಂಚ ಕಷ್ಟವಾದರೂ, ನಿನ್ನಲ್ಲಿಯೇ ಲೀನವಾಗಿ ಹೋಗಿರುವ ನನ್ನ ಪ್ರಾಣವು ತುಟುಗುಟ್ಟುವುದು. ಆದುದರಿಂದಲೇ ನಾನು ಇಷ್ಟು ಹಣ ವನ್ನು ಸಂಗ್ರಹ ಮಾಡಿಕೊಂಡು ನಿನ್ನಲ್ಲಿಗೆ ಬಂದಿರುವೆನು.

ನಂದ—ಅರವಿಂದಸುಂದರಿ! ನನಗೆ ನಿನ್ನ ಹಣವು ಬೇಡ; ನಾನು ಆವಾಗಲೂ ನಿನ್ನ ಹಣವನ್ನು ಮುಟ್ಟತಕ್ಕವನಲ್ಲ.

ಅರವಿಂದ—ಇದೇನು, ನಂದಕುಮಾರ? ಮೊದಲು ನನ್ನನ್ನು ಪ್ರೀತಿ ಸುತ್ತಿದ್ದುದೇನು? ನನ್ನ ಕೆಲಸಗಳನ್ನು ಆದರದಿಂದ ನೆರವೇರಿಸಿ ಕೊಡುತ್ತಿದ್ದು ದ್ದೇನು? ಈಗ ಈ ರೀತಿಯಾಗಿ ಮಾತನಾಡುವುದೇನು? ಇದರ ಮರ್ಮವೇ ನನಗೆ ಗೊತ್ತಾಗಲೊಲ್ಲದು.

ನಂದ—ನಾನೇನ ಹೇಳಲಿ, ಅರವಿಂದಾ ? ನೀನು ಅಪೂರ್ವಸುಂದರಿ; ನಿನ್ನನ್ನು ನೋಡಿ ಅನೇಕರು ಮೋಹಗೊಂಡಿರುವರು. ನಿನ್ನನ್ನು ಆರು ಮದುವೆ ಯಾಗುವರೋ ಅವರು ತಮ್ಮನ್ನು ಪರಮಧನ್ಯರೆಂದು ತಿಳಿದುಕೊಳ್ಳುವರು.

ಅರವಿಂದ—ತಮ್ಮ ಈ ಮಾತುಗಳಿಗೆ ಅರ್ಥವಾದರೂ ಏನು? ತಾವು ವಿವಾಹ ಮಾಡಿಕೊಳ್ಳುವುದಿಲ್ಲವೆಂಬ ಅಭಿಪ್ರಾಯ ಪಟ್ಟಂತೆ ತೋರಿಬರುತ್ತಿರುವುದು.

ನಂದ—ಅರವಿಂದಾ ! ನಿನ್ನ ಊಹೆಯು ಸತ್ಯವಾದುದು. ನಾನು ಹೃದಯವನ್ನು ಬಿಚ್ಚಿ ಹೇಳುವೆನು, ಕೇಳು. ನಾನು ಮೊದಲಿನಿಂದಲೂ ಮತ್ತೊಬ್ಬಳನ್ನು ನನ್ನ ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸುತ್ತಿರುವೆನು. ನಾನು ಆಕೆಯನ್ನೇ ಮದುವೆಯಾಗಬೇಕೆಂದು ಸಂಕಲ್ಪಮಾಡಿಕೊಂಡಿರುವೆನು. ನನ್ನ ದುರ್ದೈವ ಯೋಗದಿಂದ ಆ ಸಂಕಲ್ಪವು ನೆರವೇರದೇ ಹೋಗುವುದಾದರೆ, ನಾನು ಈ ಜನ್ಮದಲ್ಲಿ ಮತ್ತಾರನ್ನೂ ಮದುವೆಯಾಗೆನು—ನಾನು ಬ್ರಹ್ಮಚಾರಿಯಾಗಿಯೇ ಇದ್ದುಕೊಂಡು ಭಗವಂತನನ್ನು ಆರಾಧಿಸಿ ಈ ಜನ್ಮವನ್ನು ಸಾರ್ಥಕಮಾಡಿಕೊಳ್ಳುವೆನು. ಅರವಿಂದಾ! ನಾನು ನಿನಗೊಂದು ಪ್ರಶ್ನೆ ಹಾಕಬೇಕೆಂದಿರುವೆನು. ಅದಕ್ಕೆ ನೀನು ಸತ್ಯವಾಗಿ ಉತ್ತರ ಕೊಡಬಲ್ಲೆಯಾ?

ಅರವಿಂದ—ಕೇಳೋಣವಾಗಲಿ.

ನಂದ—ಈ ಹಣವನ್ನು ನೀನು ಎಲ್ಲಿಂದ ಸಂಗ್ರಹಿಸಿದೆ?

ಅರವಿಂದ—ಆರಿಗೂ ತಿಳಿಯದ ಹಾಗೆ, ನಾನು ತಂದೆಯ ಪೆಟ್ಟಿಗೆಯಿಂದ ೧೦,೦೦೦ ರೂಪಾಯಿಗಳನ್ನು ನಿನಗಾಗಿ ತಂದೆನು.

ನಂದ—ಅರವಿಂದಾ! ನನಗಾಗಿ ನೀನು ಇಷ್ಟು ಕೆಲಸಮಾಡಿದುದು ನ್ಯಾಯಸಮ್ಮತವಾಗಿಲ್ಲ. ನೀನು ಈ ಕೆಲಸ ಮಾಡಿ ಇಬ್ಬಗೆಯಾದ ದೋಷಕ್ಕೆ ಪಾತ್ರವಾದೆ. ಒಂದು ಕಡೆ ಕಳ್ಳತನ ಮಾಡಿದ ದೋಷವೂ, ಮತ್ತೊಂದು ಕಡೆ ತಂದೆಗೆ ವಿಶ್ವಾಸಘಾತಿನಿಯಾಗಿ ಪರಿಣಮಿಸಿದ ದೋಷವೂ ನಿನ್ನ ಹೆಗಲೇರಿರುವುವು. ನೀನು ಇನ್ನೂ ಹುಡುಗಿ; ನಮಾಜು ಮಾಡುವುದಕ್ಕೆ ಹೋಗಿ ಮಸೀತಿಯನ್ನು ತಲೆಯ ಮೇಲೆ ಕೆಡಹಿಕೊಂಡೆ. ಅಂತೂ ನೀನು ಮಾಡಿದ ಕೆಲಸವು ಪ್ರಯೋಜನಕಾರಿಯಾಗಲಿಲ್ಲ.

ಅರವಿಂದ—ಈ ಮಾತನ್ನು ತಾವಾಡಬಾರದು. ತಾವು ನನ್ನನ್ನು ಪ್ರೀತಿಸುತ್ತಿದ್ದರೆ, ಇಲ್ಲ ಇಲ್ಲ, ತಪ್ಪಾಯಿತು; ತಾವು ಮತ್ತಾರನ್ನಾದರೂ ಪ್ರಾಣ

ಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರೆ, ತಮ್ಮ ಬಾಯಿಂದ ಇಂತಹ ಮಾತು ಹೊರಡುತ್ತಲೇ ಇರಲಿಲ್ಲ.

.ನಂದ—ಅರವಿಂದಾ! ನಾನಾಡಿದ ಮಾತು ತಪ್ಪಾಯಿತು. ನಾನು ಇಂದು ನಿನಗೆ ಪರಾಜಿತನಾದೆನು. ಈಗ ನೀನೊಂದು ಕೆಲಸವನ್ನು ಮಾಡು; ಆರಿಗೂ ಕಾಣದ ಹಾಗೆ ನೀನು ತಂದ ಹಣವನ್ನು ಆರಿಗೂ ಕಾಣದ ಹಾಗೆಯೇ ತೆಗೆದುಕೊಂಡು ಹೋಗಿ ಅದರ ಸ್ಥಾನದಲ್ಲಿ ಸೇರಿಸಿಬಿಡು.

ಅರವಿಂದ—ಈಗ ನಾನು ಹಾಗೆಯೇ ಮಾಡಬೇಕಲ್ಲದೆ ಬೇರೆಯ ಮಾರ್ಗವಿಲ್ಲ. ನಾನು ಮಾಡಿದ ತಪ್ಪಿಗಾಗಿ ತಾವು ನನ್ನನ್ನು ಮನ್ನಿಸೋಣವಾಗಬೇಕು. ತಾವು ಈ ಸಂಗತಿಯನ್ನು ಮತ್ತಾರಲ್ಲಿಯೂ ತಿಳಿಸಕೂಡದೆಂಬುದೇ ನನ್ನ ಚರಮ ಪ್ರಾರ್ಥನೆ. ನಾನು ತಮ್ಮ ಚರಣಸನ್ನಿಧಾನದಲ್ಲಿ ಮತ್ತೊಂದು ವಿಷಯವನ್ನು ಅರಿಕೆಮಾಡಿಕೊಳ್ಳಬೇಕೆಂದಿರುವೆನು.

ನಂದ—ಅದೇನು, ಅರವಿಂದಾ? ತಿಳಿಸು.

ಅರವಿಂದ—ಸ್ವಾಮಿ! ತಾವು ಆರನ್ನು ಪ್ರೀತಿಸೋಣವಾಗಿದೆ? ತಮ್ಮ ನಿರ್ದುಷ್ಟವಾದ ಪ್ರೀತಿಗೆ ಪಾತ್ರವೆನಿಸಿದ ಆ ಪುಣ್ಯಶಾಲಿನಿ ಯಾರು? ಭಯವಿಲ್ಲದೆಯೇ ತಿಳಿಸೋಣವಾಗಲಿ. ನನ್ನಿಂದ ಆಕೆಗೆ ಕಿಂಚಿತ್ತಾದರೂ ಅನಿಷ್ಟವುಂಟಾಗಲಾರದು. ನಾನು ಆಕೆಯ ಹೆಸರನ್ನಾದರೂ ಕೇಳಿ, ಈ ಜನ್ಮವೆತ್ತಿದುದಕ್ಕೆ ಧನ್ಯತೆಯನ್ನಾದರೂ ಪಡೆದುಕೊಳ್ಳುವೆನು.

ನಂದಕುಮಾರನು ನಾಚುಗೆಯಿಂದ ತಲೆವಾಗಿದವನಾಗಿ—ಆಕೆಯ ಹೆಸರು— "ಕುಂದನಂದಿನಿ," ಎಂದು ಹೇಳಿ ಸುಮ್ಮನಾಗಿಬಿಟ್ಟನು.

---

## ಹತ್ತೊಂಬತ್ತನೆಯ ಸಂಧಿ

### ಶತ್ರುವೇ, ಮಿತ್ರೆಯೇ?

"ಕುಂದನಂದಿನಿ! ಆಕೆಯು ತಮ್ಮ ಮನೆಯಲ್ಲಿಯೇ ಪಾಲಿಸಲ್ಪಡುತ್ತಿರುವಳಲ್ಲವೇ?" ಎಂದು ಅರವಿಂದಸುಂದರಿಯು ಆದರದಿಂದ ನಂದಕುಮಾರನನ್ನು ಪ್ರಶ್ನೆಮಾಡಿದಳು.

ಅದಕ್ಕೆ ಪ್ರತ್ಯುತ್ತರವಾಗಿ ನಂದಕುಮಾರನು ನಾಚುಗೆಯಿಂದ—ಅಹುದು, ಅರವಿಂದಾ! ಅಹುದು, ಎಂದನು.

ಅರವಿಂದ—ಸರ್ವನಾಶ! ಆಕೆಗೆ ವಿಪತ್ತಿನ ಮೇಲೆ ವಿಪತ್ತು. ಆಕೆಯನ್ನು ಕಳ್ಳರು ಎತ್ತಿಕೊಂಡು ಹೋಗಿರುವರೆಂದು ನಾನು ಕೇಳಿದೆನು. ಕಳ್ಳರ ಈ ಅತ್ಯಾಚಾರವು ನನ್ನ ಸೈರಣೆಗೆ ಎಂದಿಗೂ ತಕ್ಕುದಲ್ಲ. ನನ್ನ ಪ್ರೀತಿಗೆ ಪಾತ್ರವಾದ ತಮಗೆ ಪ್ರೇಮಾಸ್ಪದೆಯಾದ ಕುಂದನಂದಿನಿಯು ನನಗೆ ಸರ್ವಸ್ವಸ್ವರೂಪೆಯು. ನಂದಕುಮಾರ! ನಾನು ಈಗಳೆಯೇ ತೆರಳುವೆನು; ಅಪ್ಪಣೆಕೊಡೋಣವಾಗಲಿ. ಸಾಧ್ಯವಾಗುವುದಾದರೆ ನಾನು ಕುಂದನಂದಿನಿಯನ್ನು ವಿಪತ್ತಿನಿಂದ ಉದ್ಧಾರಮಾಡುವೆನು; ಇಲ್ಲವಾದರೆ ಆಕೆಗಾಗಿ ಈ ಪ್ರಾಣವನ್ನಾದರೂ ಒಪ್ಪಿಸುವೆನು.

ಹೀಗೆ ಹೇಳಿ ಅರವಿಂದಸುಂದರಿಯು ನಂದಕುಮಾರನಿಂದ ಉತ್ತರವನ್ನು ನಿರೀಕ್ಷಿಸದೆಯೇ ಅಲ್ಲಿಂದೆದ್ದು ಹೊರಗೆ ಹೊರಟು ಹೋದಳು.

ನಂದಕುಮಾರನು ಅರವಿಂದಸುಂದರಿಯ ಅದ್ಭುತ ಪ್ರೇಮದ ಮಹಿಮೆಯನ್ನು ನೋಡಿ ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡನು. ಆಗ ಆಕೆಯನ್ನು ಹಿಡಿದು ನಿಲ್ಲಿಸುವುದಕ್ಕೆ ನಂದಕುಮಾರನಿಗೆ ಸಾಹಸವೇ ಉಂಟಾಗಲಿಲ್ಲ.

ಅರವಿಂದಸುಂದರಿಯು ಅಲ್ಲಿಂದೆದ್ದು ಹೊರಟವಳು ನೆಟ್ಟಗೆ ಮನೆಗೆ ಬಂದು ತನ್ನ ತಂದೆಯ ಕೋಣೆಗೆ ಹೋಗಿ ಗುಪ್ತವಾದ ರೀತಿಯಲ್ಲಿಯೇ ಆ ಹಣವನ್ನು ಸ್ವಸ್ಥಾನದಲ್ಲಿಟ್ಟು ಮನೆಯಿಂದ ಹೊರ ಹೊರಟು ವೀರಭದ್ರನು ಕುಂದನಂದಿನಿಯನ್ನು ಆವ ಗೃಹದಲ್ಲಿ ಅವಿತಿಟ್ಟಿದ್ದನೋ ಆ ಮನೆಗೆ ಬಂದು ಸೇರಿದಳು. ಆ ಮನೆಯಲ್ಲಿ ಆರೂ ಇದ್ದಂತೆ ಕಂಡುಬರಲಿಲ್ಲ. ಆದರೂ ಆಕೆಯು ಮನೆಯ ಸನ್ನಿವೇಶವನ್ನು ಚೆನ್ನಾಗಿಯೂ ಪರೀಕ್ಷಿಸಿ ನೋಡಿ ಮನೆಯ ಮಹಡಿಯ ಮೇಲೆ ಜನರಿರುವುದಾಗಿ ತಿಳಿದುಕೊಂಡು ಮೆಟ್ಟಲುಗಳನ್ನೇರಿ ಮಹಡಿಯ ಬಾಗಿಲನ್ನು ತಟ್ಟಿದಳು.

ಕೂಡಲೆಯೇ ಮುದುಕಿಯೊಬ್ಬಳು ಬಾಗಿಲ ಬಳಿಗೆ ಬಂದು ಕಿಂಡಿಯಿಂದ ನೋಡುತ್ತಾ—ಮಗು! ನೀನಾರಮ್ಮಾ? ನಿನ್ನನ್ನು ನಾನು ಆವಾಗಲೂ ನೋಡಿದಂತೆ ಜ್ಞಾಪಕವಿಲ್ಲ. ನಿನಗಾಗಬೇಕಾದುದೇನಮ್ಮಾ? ಎಂದಳು.

ಅರವಿಂದ—ವೀರಭದ್ರನು ಇಲ್ಲಿರುವನೇನು?

ಮುದುಕಿ—ಇಲ್ಲ; ಅವನಿನ್ನೂ ಬಂದಿಲ್ಲ.

ಅರವಿಂದ—ಒಳ್ಳೆಯ ಕೆಲಸವಾಯಿತಲ್ಲಾ ! ನಾನು ಇಷ್ಟು ಹೊತ್ತಿನೊಳಗಾಗಿ ಆತನನ್ನು ನೋಡಿಯೇ ನೋಡಬೇಕಾಗಿದ್ದಿತು. ಆತನು ಇನ್ನೂ ಬಂದಿಲ್ಲವೆಂಬುದು ನಿನಗೆ ಚೆನ್ನಾಗಿಯೂ ಗೊತ್ತೇ, ತಾಯಿ ?

ಮುದುಕಿ—ಚೆನ್ನಾಗಿಯೂ ಗೊತ್ತು ; ಆತನಿನ್ನೂ ಬಂದಿಲ್ಲ.

ಅರವಿಂದ—ಹಾಗಾದರೆ ಆ ಹುಡುಗಿಯಿರುವ ಕೋಣೆಯನ್ನಾದರೂ ತೋರು, ತಾಯಿ ?

ಮುದುಕಿ—ಹುಡುಗಿಯೇ ? ಆಕೆಯಾರು ? ಇಲ್ಲಿ ಆವ ಹುಡುಗಿಯೂ ಇಲ್ಲವಲ್ಲಾ !

ಅರವಿಂದ—ತಾಯಿ ! ನನ್ನಲ್ಲಿ ಇಂತಹಚಾತುರ್ಯದ ಮಾತು ಸಾಗದು. ನಾನು ವೀರಭದ್ರನಿಂದ ಎಲ್ಲವನ್ನೂ ಕೇಳಿ ತಿಳಿದುಕೊಂಡಿರುವೆನು. ವೀರಭದ್ರನೇ ಆಕೆಯನ್ನು ಮುಂದೆ ವಿವಾಹವಾಗುವನು. ಈ ಮನೆಯಲ್ಲಿಯೇ ವಿವಾಹ ಮಹೋತ್ಸವವು ನಡೆಯುವ ಸಂಭವವುಂಟು. ನಾನು ವೀರಭದ್ರನ ಸಮೀಪದ ಬಂಧುವು. ಆತನೊಡನೆಯೇ ಮಾತನಾಡಬೇಕೆಂದು ನಾನು ಇಲ್ಲಿಗೆ ಬಂದುದು. ಆತನು ಇಲ್ಲಿಗೆ ಬರುವ ವರೆಗೂ ನಾನು ಎಲ್ಲಿಗೂ ಹೋಗುವುದಿಲ್ಲ. ಬೇಗನೆ ಆ ಕೋಣೆಯನ್ನು ತೋರು.

ಮುದುಕಿ—ಅಮ್ಮಾ ಮಗು ! ನಾನು ಆ ಕೋಣೆಯನ್ನು ತೋರುವೆನು, ಆದರೆ ವೀರಭದ್ರನು ಬರುವ ವರೆಗೂ ನೀನು ಈ ಮನೆಯನ್ನು ಬಿಟ್ಟು ಹೋಗಲಾಗದು. ವೀರಭದ್ರನ ಅಪ್ಪಣೆಯು ಘೋರವಾದುದು. ಮಗು ! ನನ್ನೊಡನೆಯೇ ಒಳಗೆ ಬಾರಮ್ಮಾ.

ಮುದುಕಿಯು ಹೀಗೆ ಹೇಳಿ ಅರವಿಂದಮ್ಮನನ್ನು ಒಳಗೆ ಕರೆದುಕೊಂಡು ಹೋಗಿ ಕುಂದನಂದಿನಿಯ ಬಳಿಯಲ್ಲಿ ಬಿಟ್ಟಳು. ಅರವಿಂದಮ್ಮನು ಕುಂದನಂದಿನಿಯನ್ನು ನೋಡಿ ಪರಮಾನಂದ ಭರಿತೆಯಾಗಿ ಆಕೆಯನ್ನೇ ಎವೆಯಿಕ್ಕದೆ ನೋಡುತ್ತಾ ನಿಂತಳು. ಮುದುಕಿಯು ಅರವಿಂದಮ್ಮನನ್ನು ಒಳಗೆ ಬಿಟ್ಟು ಹೊರಗೆ ಬಂದು ಬಿಟ್ಟಳು ; ಬಳಿಕ ಅರವಿಂದಮ್ಮನು ಆ ಕೋಣೆಯ ಬಾಗಿಲನ್ನು ಒಳಗಡೆಯಿಂದ ಭದ್ರಪಡಿಸಿ ಕುಂದನಂದಿನಿಯನ್ನು ಸಂಬೋಧಿಸಿ—ಕುಂದ ! ನಿನ್ನ ಪ್ರಭುವು ಎಲ್ಲಿಯ ವರೆಗೂ ಇಲ್ಲಿಗೆ ಬರುವುದಿಲ್ಲವೋ, ಅಲ್ಲಿಯ ವರೆಗೂ ನಾನು ನಿನ್ನ ಬಳಿಯಲ್ಲಿಯೇ ಇರುವೆನು. ಒಬ್ಬಳೇ ಇರುವುದಾದರೆ ಕಷ್ಟವಾಗುವುದೆಂದು ನಿನ್ನ ಪ್ರಭುವು ನನ್ನನ್ನು ನಿನ್ನ ಬಳಿಗೆ ಕಳುಹಿರುವನು, ಎಂದು ಮಾತನಾಡಿಸಿದಳು,

ಕುಂದನಂದಿನಿಯು ಅರವಿಂದಮ್ಮ ನಾಡಿದ ಮಾತನ್ನು ಕೇಳಿ ಅಸಹ್ಯ ಪಟ್ಟುಕೊಂಡು—ತಾಯಿ! ನನ್ನ ಪ್ರಭುವಾರಮ್ಮಾ? ಎಂದು ಕೇಳಿದಳು.

ಅರವಿಂದಮ್ಮನು ನಗುತ್ತಾ—ನಿನ್ನನ್ನು ಆವನು ಮದುವೆಯಾಗುವನೋ ಆತನೇ. ಹೆಂಗುಸಿನ ಪ್ರಾಣೇಶ್ವರನೇ ಪ್ರಭುವು, ಎಂದು ಉತ್ತರವಿತ್ತಳು.

ಕುಂದ—ನನ್ನನ್ನು ಆರು ಮದುವೆಯಾಗುವರು? ಆತನ ಹೆಸರಾದರೂ ಏನು?

ಅರವಿಂದ—ನಿನ್ನನ್ನು ಆವಾತನು ಇಲ್ಲಿಗೆ ಕರೆತಂದನೋ ಆತನೇ ನಿನ್ನನ್ನು ವರಿಸುವನು.

ಕುಂದ—ಆತನು ಒಬ್ಬ ದರೋಡೆಗಳ್ಳನು. ಆತನು ಮೋಸಮಾಡಿ ನನ್ನನ್ನು ಇಲ್ಲಿಗೆ ಬಂದಿಯಾಗಿ ಕರೆತಂದಿರುವನು. ಈ ಸುದ್ದಿಯು ನನ್ನ ತಂದೆಗೇನಾದರೂ ಗೊತ್ತಾಯಿತೆಂದರೆ, ಕದ್ದವನಿಗೆ ಉಳಿಬಾಳಿರುವುದಿಲ್ಲ. ಇದು ಹೇಗಾದರೂ ಇರಲಿ. ನೀನಾರಮ್ಮ? ಮಿತ್ರೆಯೇ-ಇಲ್ಲವೆ, ಅಮಿತ್ರೆಯೇ?

---

## ಇಪ್ಪತ್ತನೆಯ ಸಂಧಿ

### ದಸ್ತಗಿರಿ

ಅರವಿಂದಸುಂದರಿಯು ಈ ಮಾತನ್ನು ಕೇಳಿ ಮತ್ತೆ ನಕ್ಕಳು. ಈ ನಗೆಯನ್ನು ನೋಡಿ ಕುಂದನಂದಿನಿಯ ಮನದಲ್ಲಿ ಆಶಾಸಂಚಾರವಾಯಿತು. ಬಳಿಕ ಕುಂದಳು ವಿಶ್ವಾಸದಿಂದ—ನಿನ್ನ ಹೆಸರಾದರೂ ಏನಮ್ಮ? ಎಂದು ಕೇಳಿದಳು.

ಅರವಿಂದಮ್ಮನು ಮುಗುಳು ನಗೆಯಿಂದ—ನನ್ನ ಹೆಸರು ಅರವಿಂದಸುಂದರಿ. ನೀನು ಕುಂದನಂದಿನಿಯಲ್ಲವೇ? ಎಂದಳು.

ಕುಂದ—ಅರವಿಂದ! ನನ್ನ ಹೆಸರು ನಿನಗೆ ಗೊತ್ತಾದುದು ಹೇಗೆ? ನೀನು ಇಲ್ಲಿಗೆ ಬರಲು ಕಾರಣವೇನು? ನಿನ್ನನ್ನು ಆರು ಇಲ್ಲಿಗೆ ಕಳುಹಿರುವರು?

ಅರವಿಂದ—ಒಂದೇ ತಡವೆಗೆ ಇಷ್ಟು ಪ್ರಶ್ನೆಹಾಕಿದರೆ, ನನಗೆ ಭ್ರಾಂತಿಯುಂಟಾಗಿ ಒಂದಕ್ಕೂ ಉತ್ತರ ಕೊಡುವುದಕ್ಕಾಗುವುದಿಲ್ಲ. ಒಂದೊಂದಾಗಿ ಪ್ರಶ್ನೆಹಾಕಿದರೆ, ತಿಳಿದಷ್ಟು ಮಟ್ಟಿಗೆ ಉತ್ತರವನ್ನು ಕೊಡಬಹುದು.

ಕುಂದ! ನಾನು ನಿನಗೆ ಅಪರಿಚಿತೆಯಾದ ಬಂಧುವು. ನಿನ್ನನ್ನು ಅಪಹರಿಸಿ ಕೊಂಡು ಬಂದ ಕಳ್ಳನು ಇಲ್ಲಿಗೆ ಬರುವ ವರೆಗೂ ನಾನು ಇಲ್ಲಿಯೇ ಇರುವೆನು. ಅವನು ಬಂದಕೂಡಲೆ, ನಿನ್ನನ್ನು ಈ ವಿಪತ್ತಿನಿಂದ ಉದ್ಧಾರಮಾಡುವುದಾಗಿ ಪ್ರತಿಜ್ಞೆಮಾಡಿ ಬಂದಿರುವೆನು.

ಕುಂದ—ಅರವಿಂದಾ! ಆತನು ದುರ್ದಾಂತನಾದ ಕಳ್ಳನು. ನನ್ನಂತೆಯೇ ಹುಡುಗಿಯಾದ ನೀನು ಆ ಕಳ್ಳನ ದಸೆಯಿಂದ ನನ್ನನ್ನು ಹೇಗೆ ಉದ್ಧಾರ ಮಾಡಬಲ್ಲೆ?

ಅರವಿಂದ—ಕುಂದ! ನಾನು ಅಸ್ತ್ರವಿಲ್ಲದೆಯೇ ಇಲ್ಲಿಗೆ ಬಂದಿಲ್ಲ. ನನ್ನಲ್ಲಿ ಐದು ತೋಟಾಗಳ ಪಿಸ್ತೂಲಿರುವುದು. ಇದರಿಂದ ನಾನು ಆರನ್ನು ಬೇಕಾದರೂ ಹೊಡೆದು ಕೊಲ್ಲಬಹುದು.

ಕುಂದ—ನಾನಿರುವ ಸ್ಥಲವು ನಿನಗೆ ಗೊತ್ತಾದುದು ಹೇಗೆ?

ಅರವಿಂದ—ವೀರಭದ್ರನು ಸ್ನೇಹಿತನೊಡನೆ ತನ್ನ ಪರಾಕ್ರಮವನ್ನು ಕೊಚ್ಚಿಕೊಳ್ಳುವುದಕ್ಕಾಗಿ ನಿನ್ನನ್ನು ಅಪಹರಣಮಾಡಿದ ರೀತಿಯೆಲ್ಲವನ್ನೂ ತಿಳಿಸುತ್ತಿದ್ದನು. ನಾನು ಅದನ್ನು ಮರೆಯಲ್ಲಿದ್ದುಕೊಂಡೇ ತಿಳಿದೆನು. ಆಗ ನಿನ್ನನ್ನು ಉದ್ಧಾರಮಾಡಬೇಕೆಂಬ ಉದ್ದೇಶವು ನನಗಿರಲಿಲ್ಲ.

ಕುಂದ—ಅರವಿಂದಾ! ನಿನ್ನ ಹೃದಯವು ಬಲು ಸರಳವಾದುದು. ನಿನ್ನ ಮಾತನ್ನು ಕೇಳುವುದಕ್ಕೆ ನನಗೆ ತುಂಬಾ ಕುತೂಹಲವುಂಟಾಗುತ್ತಿರುವುದು. ಮೊದಲು ನನ್ನನ್ನು ಉದ್ಧಾರಮಾಡಲು ಇಷ್ಟವಿಲ್ಲದ ನೀನು ಈಗ ಉದ್ಧಾರ ಮಾಡಲು ಬಂದುದು ಚೋದ್ಯವಾಗಿರುವುದು. ನೀನು ಆರಮಾತಿಗಾಗಿ ನನ್ನನ್ನು ಉದ್ಧಾರಮಾಡುವುದಕ್ಕೆಂದು ಇಲ್ಲಿಗೆ ಬಂದಿರುವೆ?

ಅರವಿಂದ—ಆರೂ ನನ್ನನ್ನು ಪ್ರೇರಿಸಿಲ್ಲ. ನಾನೇ ಈ ಗುರುತರವಾದ ಕಾರ್ಯಭಾರವನ್ನು ವಹಿಸಿಕೊಂಡು ಇಲ್ಲಿಗೆ ಬಂದಿರುವೆನು.

ಕುಂದ—ನಿನಗೆ ಈ ಬುದ್ಧಿ ಹುಟ್ಟಲು ಕಾರಣವೇನು?

ಅರವಿಂದ—ಕುಂದ! ಹೇಳುವೆನು, ಕೇಳು. ಆರು ನಿನ್ನನ್ನು ಪ್ರೀತಿಸುವರೋ, ನಾನು ಅವರನ್ನು ನನ್ನ ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿರುವೆನು. ನಿನಗೆ ಆರು ಪ್ರಿಯನೋ, ಆತನು ನನಗೆ ಪ್ರಿಯತಮನು. ಆದುದರಿಂದ ನೀನೂ ನನಗೆ ಅತ್ಯಂತ ಪ್ರಿಯೆಯು. ನಿನಗೆ ಸಂತೋಷವುಂಟುಮಾಡಿ

ದರೂ, ನಿನ್ನನ್ನು ಈ ವಿಪತ್ತಿನಿಂದ ಉದ್ಧಾರಮಾಡಿದರೂ ಆತನಿಗೆ ಪರಮಾನಂದವಾಗುವುದು, ಆತನನ್ನು ನೋಡಿ ನನಗೂ ಪರಮಾನಂದವಾಗುವುದು. ನಿನ್ನ ಸುಖದಲ್ಲಿ ಆತನಿಗೆ ಸುಖವು; ಆತನ ಸುಖದಲ್ಲಿ ನನಗೂ ಸುಖವು. ಕುಂದ! ಈಗ ಗೊತ್ತಾಯಿತೇ?

ಕುಂದ—ಅರವಿಂದಾ! ನೀನು ಮಾನವಿಯಲ್ಲ, ನೀನು ಸತ್ಯವಾಗಿಯೂ ಪರಲೋಕದ ದೇವತೆ. ಇಂತಹ ಸ್ವಾರ್ಥತ್ಯಾಗವು ಮಾನವ ಜಾತಿಯಲ್ಲಿಯೇ ಇಲ್ಲ. ನಿನ್ನಲ್ಲಿರುವ ಅವ್ಯಾಜ ಪ್ರೀತಿರಸಾಯನವು ಪರಲೋಕದ ಸಾಮಗ್ರಿಯಿಂದ ಸಾಧಿಸಲ್ಪಟ್ಟಿದೇ ಹೊರತು ಈ ಲೋಕದ ಪಾರ್ಥಿವವಸ್ತು ಸಂಯೋಜನದಿಂದ ಲಭಿಸತಕ್ಕದಲ್ಲ.

ಕುಂದನಂದಿನಿಯು ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಕೋಣೆಯ ಬಾಗಿಲು ದಢೀರೆಂದು ತೆರೆಯಲ್ಪಟ್ಟಿತು. ಆ ಕೂಡಲೆಯೇ ವೀರಭದ್ರನೂ, ಮುದುಕಿಯೂ, ಮುದುಕಿಯ ಮಗನೂ ಕುಂದಳ ಕೋಣೆಯೊಳಗೆ ಪ್ರವೇಶಮಾಡಿದರು. ವೀರಭದ್ರನು ಪ್ರವೇಶಮಾಡಿದ ಕೂಡಲೆಯೇ ಅರವಿಂದಸುಂದರಿಯನ್ನು ಕಂಡನು. ಆತನಿಗೂ ಅರವಿಂದಳ ತಂದೆಗೂ ಮೊದಲಿನಿಂದಲೂ ಸ್ನೇಹವಿದ್ದಿತು, ಅದರ ಬಲದಿಂದಲೇ ಆಕೆಯ ತಂದೆಯು ಅನೇಕ ಕಾರ್ಯಗಳನ್ನು ನೆರವೇರಿಸಿಕೊಂಡು ಬರುತ್ತಿರುವನು. ಅರವಿಂದಳು ಅಲ್ಲಿರುವುದನ್ನು ನೋಡಿ, ವೀರಭದ್ರನು ಆಶ್ಚರ್ಯಪಟ್ಟುಹೋದನು. ವೀರಭದ್ರನು ಆಕೆಯ ದರ್ಶನದಿಂದ ಬೆರಗಾಗಿ ಒಂದು ಕ್ಷಣಕಾಲ ಆವ ಮಾತನ್ನೂ ಆಡಲಾರದವನಾಗಿ ಅಲ್ಲಿಯೇ ನಿಂತು ಬಿಟ್ಟನು.

ವೀರಭದ್ರನು ಕೊಂಚಹೊತ್ತಿನ ಮೇಲೆ ತನ್ನ ಮನವನ್ನು ಸಮಾಧಾನಕ್ಕೆ ತಂದುಕೊಂಡು ಅರವಿಂದಳನ್ನು ದುರದುರನೆ ನೋಡಿದನು. ಆಗ ಅವನ ಕಣ್ಣುಗಳಿಂದ ಕೋಪವೆಂಬ ಬೆಂಕಿಯ ಕಿಡಿಗಳೇ ಉದುರುತ್ತಿದ್ದುವು. ಆತನು ಕೋಪಾವೇಶದಿಂದ ಹುಲಿಯಂತೆ ಅಬ್ಬರಿಸುತ್ತಾ ಅರವಿಂದಳನ್ನು ಕುರಿತು—ಎಲೌ ಅರವಿಂದಾ! ನೀನು ಇಲ್ಲಿಗೆ ಏತಕ್ಕೆ ಬಂದೆ? ಆವ ಕೆಲಸವನ್ನು ನಿಮಿತ್ತಮಾಡಿಕೊಂಡು ನೀನು ಇಲ್ಲಿಗೆ ಬಂದಿರುವೆ? ಎಂದು ಕೇಳಿದನು.

ಅರವಿಂದಳು ವೀರಭದ್ರನ ಅಬ್ಬರದ ಮಾತನ್ನು ಕೇಳಿ ಸಹಿಸಲಾರದವಳಾಗಿ ನಿಮಿಷಮಾತ್ರದಲ್ಲಿ ತನ್ನ ಸೊಂಟದಲ್ಲಿ ಅಡಗಿಸಿಟ್ಟಿದ್ದ ಪಿಸ್ತೂಲನ್ನು ಹೊರಗೆ ತೆಗೆದು ಅದನ್ನು ವೀರಭದ್ರನ ಮುಖಕ್ಕೆ ಸರಿಯಾಗಿ ಹಿಡಿದುಕೊಂಡು—ಈ ಬಾಲಿಕೆಗೆ ಆವ ಬಗೆಯಿಂದಲೂ ಅನಿಷ್ಟವುಂಟಾಗಬಾರದೆಂದು ನಾನು ಇಲ್ಲಿಗೆ ಬಂದಿರುವೆನು. ಎಚ್ಚರಿಕೆ! ನೀನು ಒಂದು ಹಜ್ಜೆಯಷ್ಟು ಮುಂದಕ್ಕೆ ಸರಿದು ಬರುವುದಾದರೂ ನಿನಗೆ ರಕ್ಷಣೆಯು ದೊರೆಯಲಾರದು, ಎಂದು ಅರಚಿದಳು.

ಅರವಿಂದಳು ಈ ರೀತಿಯಾಗಿ ಹೇಳಿದ ಕೂಡಲೆ ವೀರಭದ್ರನ ಮೇಲೆ ತೋಟಾಗಳನ್ನು ಹಾರಿಸಿಬಿಟ್ಟಿದ್ದರೂ ಚೆನ್ನಾಗಿರುತ್ತಿದ್ದಿತು. ದೈವೇಚ್ಛೆಯು ಬೇರೊಂದು ಬಗೆಯಾಗಿರುವಲ್ಲಿ, ಪ್ರಕೃತಿ ನಿಯಮಗಳಿಗೆ ಕೇವಲವಾಗಿ ಅಧೀನನಾದ ಮಾನವನು ಅದಕ್ಕೆ ವಿರೋಧವಾಗಿ ನಡೆಯುವುದೆಂದರೇನು? ಆವಾಗಲೂ ದೈವೇಚ್ಛೆಯೇ ಫಲಿಸೀತು.

ಅರವಿಂದಳ ಮಾತು ಮುಗಿಯುವುದರೊಳಗಾಗಿ ವೀರಭದ್ರನು ತಟ್ಟನೆ ಒಂದೇ ಹಾರು ಹಾರಿ ಅರವಿಂದಳ ಕೈಗಳನ್ನು ಬಲವಾಗಿ ಹಿಡಿದು ಬಿಟ್ಟನು. ಅರವಿಂದಳು ಆತ್ಮರಕ್ಷಣೆಗಾಗಿ ಎಷ್ಟೋ ಹೋರಾಡಿ ನೋಡಿದಳು, ಆದರೆ ಅದರಿಂದ ಏನೂ ಪ್ರಯೋಜನವಾಗದೇ ಹೋಯಿತು.

ಇವರಿಬ್ಬರಿಗೂ ಕೇಶಾಕೇಶಿ ಯುದ್ಧವು ಪ್ರಬಲವಾಗಿ ನಡೆಯುತ್ತಿರುವಲ್ಲಿ, ದುರ್ದೈವದಿಂದಲೋ ಎಂಬಂತೆ ಪಿಸ್ತೂಲಿನ ತೋಟಾಗಳು ದುಘುಂ ದುಘುಂ ಎಂದು ಘೋರವಾದ ಶಬ್ದದೊಡನೆ ಹಾರಿದುವು. ಕೂಡಲೆಯೇ ಅರವಿಂದಳು ಅಸ್ಫುಟವಾದ ಧ್ವನಿಗೆಯ್ಯುತ್ತಾ ಜ್ಞಾನತಪ್ಪಿ ನೆಲದ ಮೇಲೆ ಬಿದ್ದು ಬಿಟ್ಟಳು.

ಈ ದಾರುಣವಾದ ದೃಶ್ಯವನ್ನು ಕಣ್ಣಾರೆ ನೋಡುತ್ತಿದ್ದ ಕುಂದನಂದಿನಿಯು ಅತಿಯಾಗಿ ಕತಿಗೊಂಡು ಕಾತರ ಸ್ವರದಿಂದ—ಸರ್ವನಾಶವಾಯಿತು! ಸರ್ವನಾಶವಾಯಿತು! ಪಿಸ್ತೂಲಿನ ಏಟನಿಂದ ಅರವಿಂದಳು ಪ್ರಾಣವನ್ನು ಬಿಟ್ಟಳು! ಅಕಟಕಟ! ಅರವಿಂದಾ! ಭಾಗ್ಯಹೀನೆಯಾದ ನನ್ನನ್ನು ಉದ್ಧಾರಮಾಡುವುದಕ್ಕಾಗಿ ಹೋರಾಡಿ ಪ್ರಾಣಬಿಟ್ಟೆಯಾ? ಅರವಿಂದಾ! ನಿನ್ನ ಪರೋಪಕಾರ ಸ್ವಭಾವವನ್ನು ನಾನು ಎಷ್ಟೆಂದು ಕೊಂಡಾಡಲಿ? ಎಂದು ಚೀತ್ಕಾರಮಾಡಿದಳು.

ವೀರಭದ್ರನು ಇದನ್ನು ನೋಡಿ ತಿರಸ್ಕಾರ ಸೂಚಕವಾದ ನಗೆಯನ್ನು ನಕ್ಕು—ಆಕೆಯಲ್ಲಿ ನಿನ್ನಾದರವೇನು? ಆಕೆಯು ಕರ್ಮಕ್ಕೆ ತಕ್ಕ ಫಲವನ್ನೇ ಅನುಭವಿಸಿದಳು. ಇದಕ್ಕಾಗಿ ಆರೇನು ವ್ಯಸನ ಪಡತಕ್ಕುದಿದೆ? ಎಂದು ನುಡಿಯುತ್ತಿರುವಷ್ಟರೊಳಗಾಗಿಯೇ ಅನಂತರತ್ನನು ಕೆಲವು ಮಂದಿ ಪೋಲೀಸಿನವರನ್ನು ಜತೆಯಲ್ಲಿ ಕರೆದುಕೊಂಡು ಆ ಕೋಣೆಯೊಳಗೆ ನುಗ್ಗಿಬಂದು ವೀರಭದ್ರನನ್ನೂ ಮುದುಕಿಯನ್ನೂ ಮುದುಕಿಯ ಮಗನನ್ನೂ ದಸ್ತಗಿರಿ ಮಾಡಿ ವೀರಭದ್ರನಿಗೆ ಮೊದಲು ಮಾಡಬೇಕಾದ ಅಶಾಸ್ತ್ರೀಯವಾದ ದಂಡವಿಧಾನವನ್ನು ಮನದಣಿಯೆ ತೀರಿಸಿಕೊಂಡು ಪೋಲೀಸಿನವರು ಆ ಮೂವರನ್ನೂ ಠಾಣೆಯ ಕಡೆಗೆ ಎಳೆದುಕೊಂಡು ತೆರಳಿದರು.

ಕುಂದನಂದಿನಿಯು ಅಸಜ್ಜನರ ಸಹವಾಸದಿಂದ ಮುಕ್ತಿಲಾಭವನ್ನು ಪಡೆದು ಕೊಂಡು ಕಮಲಾಕಾಂತನ ಮನೆಗೆ ತೆರಳಿದಳು. ಕಮಲಾಕಾಂತನೂ ಮದಯಂತಿಯೂ ಕುಂದನಂದಿನಿಯನ್ನು ಕಂಡ ಕೂಡಲೆ ಆನಂದ ಪಟ್ಟವರಾದರೂ ಅದನ್ನು ಮಟ್ಟಿಗೆ ತೋರ್ಪಡಿಸಲಿಲ್ಲ.

ಕೊಂಚಕಾಲವೆನ್ನುವುದರೊಳಗಾಗಿ ಈ ಸುದ್ದಿಯು ನಂದಕುಮಾರನಿಗೂ ಅರವಿಂದಸುಂದರಿಯ ತಂದೆಗೂ ಇನ್ನೂ ಇತರರಿಗೂ ಗೊತ್ತಾಯಿತು. ನಂದಕುಮಾರನು ಈ ಶುಭಸಮಾಚಾರವನ್ನು ಕೇಳಿದ ಕೂಡಲೆ ಪರಂತಪನನ್ನು ಕಂಡುಕೊಂಡು ಆತನಿಗೆ ಪರಿಪಯಾಗಿ ಧನ್ಯವಾದಗಳನ್ನು ಅರ್ಪಿಸಿದನು.

ಅರವಿಂದಳ ತಂದೆಯು ತನ್ನ ಮಗಳ ಮರಣಕ್ಕಾಗಿ ಸಂಕಟಪಟ್ಟವನಾದರೂ, ಕೈಯಿಂದ ಹಣಕಾಸುಗಳು ತಪ್ಪಿಹೋಗುವುದಾದರೆ ಆವ ವ್ಯಸನವುಂಟಾಗುವುದೋ ಅದಕ್ಕಿಂತಲೂ ಮಗಳ ಮರಣವು ಅತಿಶಯವೇನೂ ಅಲ್ಲವೆಂದು ಧನವೃದ್ಧನು ತಿಳಿದವನಾಗಿ ಸುಮ್ಮನಿದ್ದು ಬಿಟ್ಟನು. ಹಾ ಹಣವೇ! ನಿನ್ನ ಮಹಿಮೆಯಾದರೂ ಏನು? ನಿನ್ನ ಪ್ರಭಾವದಿಂದ ನಿನ್ನೊಡೆಯನ ಹೃದಯವನ್ನೂ ಕಲ್ಲಾಗಿ ಮಾಡಿಬಿಡುವೆಯಲ್ಲಾ! ಈ ಸಂಭ್ರಮಕ್ಕಾಗಿಯೇ ಜನರು ನಿನ್ನನ್ನು ಬಯಸುವರೇನು? ಹಣಗಾರರು ಹಣದಲ್ಲಿ ಗುಣವಿದೆಯೆಂದು ಹೇಳುವುದು ಇದೇ ಅಲ್ಲವೇ? ಅಕಟ! ಮಾನವನನ್ನು ಪಿಶಾಚನನ್ನಾಗಿ ಮಾರ್ಪಡಿಸಿ ಕೆಳಗಿಳಿಸುವ ಹಣಕ್ಕೆ ಧಿಕ್ಕಾರ! ಧಿಕ್ಕಾರ!! ಧಿಕ್ಕಾರ!!!

ವೀರಭದ್ರನು ಅನನ್ಯಗತಿಕನಾಗಿ ಇದ್ದುದನ್ನು ಇದ್ದ ಹಾಗೆಯೇ ತನ್ನ ಹೇಳಿಕೆಯನ್ನು ಕೊಟ್ಟುಬಿಟ್ಟನು. ಇದರಿಂದ ಧನವೃದ್ಧ ಮಹಾಶಯನ ಸ್ವಾರ್ಥದ ಚಾತುರ್ಯವೆಲ್ಲವೂ ನಿಮಿಷಮಾತ್ರದಲ್ಲಿ ಎಲ್ಲೆಲ್ಲಿಯೂ ಬಯಲಾಯಿತು. ವೃದ್ಧಮಹಾಶಯನು ತನ್ನ ಸಾಯುವ ಕಾಲದಲ್ಲಿ ನ್ಯಾಯಸ್ಥಾನದ ಮೆಟ್ಟಲುಗಳನ್ನು ಹತ್ತಿ ಧರ್ಮಾವತಾರನ ಇದಿರಿನಲ್ಲಿ ನಿಂತು ತಾನು ಮಾಡಿದ ದುರ್ವರ್ತನಗಳೆಲ್ಲವನ್ನೂ ಒಂದೊಂದಾಗಿ ಒಪ್ಪಿಕೊಳ್ಳಬೇಕಾಯಿತು. ಆತನ ಸಂಪತ್ತೆಲ್ಲವನ್ನೂ ಸರಕಾರದವರು ತಮ್ಮ ರಕ್ಷಣಾವೇಕ್ಷಣೆಗೆ ಒಳಪಡಿಸಿಕೊಂಡರು.

ಪರಿಣಾಮದಲ್ಲಿ ಧನವೃದ್ಧನು ತನ್ನ ಕುಕಾರ್ಯಗಳಿಗೆ ಸರಿಯಾದ ಫಲವನ್ನೇ ಅನುಭವಿಸಿದನು. ತನ್ನ ಜೀವಿತಶೇಷವು ಅಪಾರವಾದ ದುಃಖಕ್ಕೆ ತವರೂರಾದುದೆಂದು ವೃದ್ಧನು ಅರಿತುಕೊಂಡವನಾದರೂ, ಹಣವು ಕೈಬಿಟ್ಟು ಹೋದುದಕ್ಕಾಗಿ ಹುಚ್ಚನಂತೆ ಆವಾಗಲೂ ಹಣವನ್ನು ಕುರಿತು ಪ್ರಲಾಪಿಸುತ್ತಾ ಈ ಲೋಕದಲ್ಲಿಯೇ ನರಕದ ದುಃಖಾನುಭವವನ್ನು ಪಡೆದುಕೊಂಡು ದಿನಗಳನ್ನು ಕಳೆಯಲಾರಂಭಿಸಿದನು.

ಜಯತು ಭಗವಾ‌ನ್

# ಕಮಲಾಕಾಂತನ ಉಯಿಲು

## ದ್ವಿತೀಯ ಖಂಡ

### ಮೊದಲನೆಯ ಸಂಧಿ

#### ನೂತನ ಬಂಧು

ಬೆಳಗಾಯಿತು. ಪ್ರತಿನಿತ್ಯವೂ ಮಾಡಿದುದನ್ನೇ ಮತ್ತೆ ಮತ್ತೆ ಮಾಡುತ್ತಿರ ಬೇಕೆಂಬ ವಿವೇಕವಿಲ್ಲದ ಪ್ರಕೃತಿಯ ನಿಯಮವನ್ನು ಜ್ಞಾಪಕಕ್ಕೆ ತಂದುಕೊಂಡು ಸೂರ್ಯದೇವನು ತನ್ನ ದುರ್ದೈವವನ್ನು ಪರಿಪರಿಯಾಗಿ ನಿಂದಿಸಿ ಕೆಂಪೇರಿದ ಮುಖವುಳ್ಳವನಾಗಿ ಯತ್ನವಿಲ್ಲದೆಯೇ ತನ್ನ ಕೆಲಸದ ಮೇಲೆ ತೆರಳಿದನು. ಕೋಪದ ಪರಿಣಾಮದಿಂದ ದಿನಮಣಿಯು ಕಂಡಕಂಡವರ ಮೇಲೆಲ್ಲಾ ರೇಗಿರೇಗಿ ಬೀಳು ವನೋ ಎಂಬಂತೆ ತನ್ನ ಪ್ರಖರವಾದ ಕಿರಣಗಳನ್ನು ಜಗತ್ತಿನ ಮೇಲೆ ಬೀರ ಲಾರಂಭಿಸಿದನು. ಆರಾರು ಎಷ್ಟೆಷ್ಟು ರೇಗಿರೇಗಿ ಬಿದ್ದರೂ ತಮ್ಮ ತಮ್ಮ ಕೆಲಸ ಗಳನ್ನು ನಿಯಮಕ್ಕೆ ಅನುಸಾರವಾಗಿಯೇ ನಡೆಯಿಸುತ್ತಿರಬೇಕೆಂದು ಜಗದೀಶ್ವರನ ಮಹಾಮಹಿಮವುಳ್ಳ ಅಧಿಕಾರಸಂಪತ್ತು ಉದ್ಘೋಷಿಸುತ್ತಿರುವುದು. ಜಗದಾದಿ ಯಿಂದಲೂ ಇದನ್ನು ಅನ್ಯಥಾಮಾಡುವುದಕ್ಕೆ ಪ್ರತಿಯೊಬ್ಬನೂ ಯತ್ನಮಾಡಿ ನೋಡುತ್ತಲೇ ಇರುವನು. ಇದು ಮಟ್ಟಿಗೆ ಹಿಂದೆ ಸಾಧ್ಯವಾಗಲೂ ಇಲ್ಲ, ಇಂದು ಸಾಧ್ಯವಾಗುತ್ತಲೂ ಇಲ್ಲ, ಮುಂದೆ ಸಾಧ್ಯವಾಗುವ ಹಾಗೂ ಇಲ್ಲ. ಹೇ ಭಗವಂತ! ನಿನ್ನ ಜಾತಕದಲ್ಲಿ ಗ್ರಹಗಳು ಶುದ್ಧವಾದ ಉಚ್ಚಸ್ಥಾನಗಳನ್ನು ಪಡೆದುಕೊಂಡು ದೃಶ್ಯಾದೃಶ್ಯ ಪ್ರಪಂಚವನ್ನೆಲ್ಲಾ ಸ್ವಾಧೀನಕ್ಕೆ ತೆಗೆದುಕೊಂಡಿರುವುದೇ ನಿನ್ನ ಪೂರ್ವಪುಣ್ಯದ ಪ್ರಭಾವವು. ಇದನ್ನು ಕಟ್ಟಿಕೊಂಡು ನಮಗಾಗುವುದೇನು?

ಸೂರ್ಯದೇವನು ತನ್ನ ಕೆಲಸದ ಮೇಲೆ ತೆರಳಿದನು. ಎಂದಿನಂತೆಯೇ ಕಾಲಚಕ್ರವು ಸುತ್ತುವುದಕ್ಕೆ ಮೊದಲು ಮಾಡಿತು. ಪ್ರಾತಃಕಾಲವಾಗಿದ್ದುದು ಕ್ರಮಕ್ರಮವಾಗಿ ಹತ್ತು ಗಂಟೆಯ ಹೊತ್ತಾಯಿತು.

ಎಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾಗಿರುವರು. ಸಣ್ಣ ಸಣ್ಣ ಮಕ್ಕಳು ಹೊಟ್ಟೆಗಾಗಿ ಅಳುತ್ತಿರುವರು; ಹುಡುಗರು ಆಡುತ್ತಿರುವರು, ಹೆಂಗುಸರು ಮನೆಯ ಕೆಲಸವನ್ನು ಅಣಿಮಾಡುತ್ತಿರುವರು. ಯುವಕರು ತಮ್ಮ ತಮ್ಮ ಕೆಲಸದ ಮೇಲೆ ಹೊರಗೆ ಹೋಗಿರುವರು. ಮುದುಕರು ಮನೆಯಲ್ಲಿಯೇ ಕುಳಿತುಕೊಂಡು ಲೊಟಗುಟ್ಟುತ್ತಿರುವರು.

ಬಡವನು ಬೆಳಗಿನ ಜಾವದಲ್ಲೆದ್ದು ತನ್ನ ನಿತ್ಯಕೃತ್ಯಗಳನ್ನು ತೀರಿಸಿಕೊಂಡು ಬೀದಿ ಬೀದಿಗಳಲ್ಲಿ ಭಿಕ್ಷೆಗಾಗಿ ಜೀವನಯಾತ್ರೆಗೆ ತೆರಳುತ್ತಿರುವನು. ಧನಕುಬೇರನು ತನ್ನ ಹಂಸತೂಲಿಕಾತಲ್ಪದ ಮೇಲೆ ಪವಡಿಸಿ ನಿದ್ರೆಬಾರದಿರುವುದರಿಂದಲೋ—ಇಲ್ಲವೇ, ಮತ್ತಾವ ಕಾರಣದಿಂದಲೋ ಹೊರಳಾಡುತ್ತಿದ್ದು ಪ್ರಾತಃಕಾಲದಲ್ಲಿ ನಿದ್ರೆಮಾಡಿ ಮೆಲ್ಲ ಮೆಲ್ಲನೆ ಹೊರಗೆ ಬರುತ್ತಿರುವನು. ದಾಸದಾಸಿಯರು ಯಜಮಾನನ ದೃಷ್ಟಿಗೆ ಬೀಳಬೇಕೆಂದು ಸೇವೆಗಾಗಿ ನಾನು ಮುಂದೆ ತಾನು ಮುಂದೆ ಎಂದು ಮುಂದೆ ಬಂದು ನಿಲ್ಲುವವರಾಗಿರುವರು. ಈ ವಿಚಿತ್ರವಾದ ಪ್ರಪಂಚದ ಪರಿಪಾಟಿಯನ್ನು ವರ್ಣಿಸಲು ಆದಿಶೇಷನಿಗೂ ಅಳವಲ್ಲವು.

ಕಮಲಾಕಾಂತನೂ ಒಬ್ಬ ಧನಕುಬೇರನಾಗಿದ್ದುದರಿಂದ ಆತನ ಮನೆಯಲ್ಲಿಯೂ ನಿತ್ಯನೈಮಿತ್ತಿಕ ಕಾರ್ಯಗಳು ಯಥಾರೀತಿಯಾಗಿ ನೆರವೇರುತ್ತಿರುವುವು. ಕೆಲವರು ಮನೆಯನ್ನು ಗುಡಿಸುತ್ತಿರುವರು, ಕೆಲವರು ಪಾತ್ರೆಗಳನ್ನು ಬೆಳಗುತ್ತಿರುವರು, ಕೆಲವರು ಬಟ್ಟೆಗಳನ್ನು ಒಗೆಯುತ್ತಿರುವರು, ಕೆಲವರು ಸ್ನಾನಕ್ಕೆ ಅಣಿಮಾಡುತ್ತಿರುವರು, ಕೆಲವರು ಅಂಗಡಿಗಳಿಂದ ಆಹಾರಾದಿ ಸಾಮಗ್ರಿಗಳನ್ನು ತಂದುಕೊಡುತ್ತಿರುವರು, ಕೆಲವರು ಕಾಯಿಪಲ್ಯಗಳನ್ನು ಹೆಚ್ಚುತ್ತಿರುವರು, ಕೆಲವರು ಅಡುಗೆಯಲ್ಲಿ ನಿರತರಾಗಿರುವರು, ಕೆಲವರು ಶೃಂಗಾರಮಾಡಿಕೊಳ್ಳುತ್ತಿರುವರು, ಕೆಲವರು ಕೆಲಸವಿದ್ದವರಂತೆ ಅಲೆದಾಡುತ್ತಿರುವರು, ಕೆಲವರು ಪರನಿಂದೆಯನ್ನೂ ಆತ್ಮ ಪ್ರಶಂಸೆಯನ್ನೂ ಮಾಡಿಕೊಳ್ಳುತ್ತಿರುವರು, ಕೆಲವರು ಜಗಳವಾಡುತ್ತಿರುವರು, ಕೆಲವರು ಕದಿಯುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿರುವರು, ಕೆಲವರು ನಿಂತಿರುವರು, ಕೆಲವರು ಕುಳಿತಿರುವರು, ಕೆಲವರು ನೆಪವನ್ನು ಹೂಡಿಕೊಂಡು ಮಲಗಿರುವರು. ಯಜಮಾನನು ಇದೆಲ್ಲವನ್ನೂ ನೋಡಿಕೊಂಡು, ಬಾಯಬಿಟ್ಟರೆ ಬಣ್ಣಗೇಡೆಂದು ಸುಮ್ಮನಿರುವನು.

ಎಲ್ಲರೂ ನೋಡುತ್ತಿದ್ದ ಹಾಗೆಯೇ ಹನ್ನೊಂದು ಗಂಟೆಯ ಹೊತ್ತಾಯಿತು. ಆ ಸಮಯದಲ್ಲಿ ಭೃತ್ಯನೊಬ್ಬನು ಮಾರಕುಮಾರನ ಬಳಿಗೆ ಬಂದು—ಸ್ವಾಮಿಾ! ಭೋಜನಕ್ಕೆ ಬಿಜಯ ಮಾಡಿಸಬೇಕೆಂದು ಹೇಳಿ ಹೊರಟು ಹೋದನು.

ಮಾರಕುಮಾರನು ಊಟದ ಮನೆಗೆ ಹೋಗಿ ನೋಡಿದನು. ಅಲ್ಲಿ ಭೋಜನ ಮಾಡುವವರಿಗೆಂದು ಮೂರು ಎಲೆಗಳು ಸಿದ್ಧಪಡಿಸಲ್ಪಟ್ಟಿದ್ದುವು. ಇನ್ನೂ ಆರೂ ಬಂದು ಎಲೆಯ ಮುಂದೆ ಕುಳಿತಿರಲಿಲ್ಲ. ಮಾರಕುಮಾರನು ತನಗೆ ಏರ್ಪಡಿಸಲ್ಪಟ್ಟಿದ್ದ ಎಲೆಯ ಮುಂಗಡೆಯಲ್ಲಿ ಕುಳಿತು ಇತರರು ಬರುವುದನ್ನೇ ಇದಿರು ನೋಡುತ್ತಿದ್ದನು. ಅಷ್ಟು ಹೊತ್ತಿಗೆ ಮದಯಂತಿಯು ಅಲ್ಲಿಗೆ ಬಂದು ನೋಡಿದಳು.

ಮದಯಂತಿಯು ಈಗ ಕಮಲಾಕಾಂತನ ಮನೆಗೆ ಸರ್ವಾಧಿಕಾರಿಣಿಯು. ಕಮಲಾಕಾಂತನು ಮದಯಂತಿಯನ್ನು ಇನ್ನೂ ವಿವಾಹವಿಧಿಯಿಂದ ವರಿಸಿರಲಿಲ್ಲವಾದರೂ, ಮದಯಂತಿಯ ಮಾತಿಗೆ ಅಡ್ಡಿಯಿರಲಿಲ್ಲ. ಆಕೆಗೆ ಪ್ರತಿಯಾಗಿ ಮಾತನಾಡುವವರಂತೂ ಆ ಮನೆಯಲ್ಲಿ ಹುಟ್ಟಿಯೇ ಇರಲಿಲ್ಲ. ಚಿಕ್ಕ ಹೆಂಡಿತಿಯನ್ನು ಮದುವೆಯಾದ ವೃದ್ಧನು ಹೇಗೆ ಆಕೆಗೆ ಪರಾಧೀನನಾಗಿಬಿಡುವನೋ ಹಾಗೆಯೇ ಕಮಲಾಕಾಂತನೂ ಮದಯಂತಿಯನ್ನು ವಿವಾಹ ಮಾಡಿಕೊಳ್ಳುವುದಕ್ಕೆ ಮೊದಲೇ ಆಕೆಗೆ ಅಧೀನನಾಗಿಬಿಟ್ಟಿದ್ದನು. ಮದಯಂತಿಯು ಕೂಡೆಂದರೆ, ಕಮಲಾಕಾಂತನು ಕೂಡುವನು, ಏಳೆಂದರೆ ಎದ್ದು ನಿಲ್ಲುವನು. ಕಾರಣವೇನೆಂದರೆ—ಯಜಮಾನನು ತನ್ನ ಇಚ್ಛೆಯನ್ನೆಲ್ಲಾ ಮದಯಂತಿಗೆ ಮಾರಿಬಿಟ್ಟಿದ್ದನು. ಬಲು ಮಾತೇಕೆ? ಮದಯಂತಿಯ ಇಷ್ಟವೇ ಆತನ ಇಷ್ಟವು; ಆಕೆಯ ಅನಿಷ್ಟವೇ ಆತನಿಗೂ ಅನಿಷ್ಟವು.

ಇಂತಹ ಮದಯಂತಿಯು ಊಟದ ಮನೆಗೆ ಬಂದು ನೋಡಲಾಗಿ ಭೋಜನಕ್ಕೋಸ್ಕರ ಮೂರು ಎಲೆಗಳು ಸಿದ್ಧಪಡಿಸಲ್ಪಟ್ಟಿದ್ದುವು. ಇದನ್ನು ನೋಡಿ ಮದಯಂತಿಯು ಭೃತ್ಯನನ್ನು ಕುರಿತು—ಇಂದು ಮೂರು ಎಲೆಗಳಿಗೆ ಕಾರಣವೇನು? ನನ್ನ ಮನೆಯಲ್ಲಿ ನಿನ್ನ ಉದಾರತ್ವವು ದಿನದಿನಕ್ಕೆ ಹೆಚ್ಚುತ್ತಿರುವುದು. ಒಂದು ಎಲೆಯನ್ನು ಎತ್ತಿಬಿಡು, ಎಂದು ಅಪ್ಪಣೆಮಾಡಿದಳು.

"ಇಂದು ಹೊಸಬರಾರೋ ಬರುವುದರಿಂದ ಮೂರೆಲೆಗಳನ್ನು ಸಿದ್ಧಪಡಿಸಬೇಕೆಂದು ಯಜಮಾನರ ಅಪ್ಪಣೆಯಾಗಿರುವುದು," ಎಂದು ಭೃತ್ಯನು ಉತ್ತರವಿತ್ತನು.

ಮದಯಂತಿಯು ಮಾರಕುಮಾರನನ್ನು ನೋಡಿ—ಮಾರಕುಮಾರ! ಆತನಾರೆಂಬುದು ನಿನಗೇನಾದರೂ ಗೊತ್ತುಂಟೇ? ಎಂದು ಕೇಳಿದಳು.

ಮದಯಂತಿಗೂ ಮಾರಕುಮಾರನಿಗೂ ಮೊದಲಿನಿಂದಲೂ ಸರಿಬೀಳುತ್ತಿರಲಿಲ್ಲ. ಕಾರಣವೇನೆಂದರೆ—ಮಾರಕುಮಾರನು ಮದಯಂತಿಯನ್ನು ಪ್ರೀತಿಸು

ತ್ತಿದ್ದರೂ, ಮದಯಂತಿಯು ಈತನನ್ನು ದ್ವೇಷಿಸಿ ನಂದಕುಮಾರನನ್ನೇ ಪ್ರೀತಿಸು ತ್ತಿದ್ದಳು. ನಂದಕುಮಾರನನ್ನು ತನ್ನ ಬುಟ್ಟಿಯೊಳಗೆ ಹಾಕಿಕೊಳ್ಳಬೇಕೆಂದು ಮದಯಂತಿಯು ಮಾಡಿದ ಸಾಹಸವನ್ನು ಒಂದು ದೊಡ್ಡ ಗ್ರಂಥದಲ್ಲಿ ವರ್ಣಿ ಸಿದರೂ ಸಾಲದುದಾಗಿದೆ. ಆದರೆ ನಂದಕುಮಾರನು ಗುಣಾಢ್ಯನಾದುದರಿಂದ, ಅಯೋಗ್ಯವಾದ ಪ್ರೀತಿಗೆ ಬಾಧ್ಯಪಡತಕ್ಕವನಾಗಿರಲಿಲ್ಲ. ಮದಯಂತಿಯು ಇದನ್ನು ಚೆನ್ನಾಗಿಯೂ ಅರಿತುಕೊಂಡವಳಾಗಿ ನಂದಕುಮಾರನನ್ನು ಕೈಬಿಟ್ಟು ಮಾರಕುಮಾರನನ್ನಾದರೂ ಆಶ್ರಯಿಸೋಣವೆಂದು ಸಂಕಲ್ಪಮಾಡಿಕೊಂಡು ತನ್ನ ಪ್ರಣಯ ಪ್ರವಾಹವನ್ನು ಮಾರಕುಮಾರನ ಕಡೆಗೆ ತಿರುಗಿಸಿದಳು. ಮಾರಕುಮಾ ರನು ಮೊದಲಿನಿಂದಲೂ ಮದಯಂತಿಯ ಮೇಲೆ ಕಣ್ಣಿಟ್ಟಿದ್ದುದರಿಂದ, ಮದ ಯಂತಿಗೆ ಮಾರಕುಮಾರನನ್ನು ಸ್ವಾಧೀನಪಡಿಸಿಕೊಳ್ಳುವುದು ಅಷ್ಟಾಗಿ ಕಷ್ಟ ವೇನೂ ಆಗಲಿಲ್ಲ. ಇವರಿಬ್ಬರ ಪ್ರೀತಿಯು ಪರಸ್ಪರವಾಗಿ ಮಿಳಿತವಾದ ಕೂಡಲೆ, ಇವರಿಬ್ಬರೂ ಒಂದು ತೆರನಾಗಿ ಸ್ನೇಹಭಾವದಿಂದಲೇ ಇರುತಿದ್ದರು. ಈ ಸ್ನೇಹ ಭಾವದಿಂದಲೇ ಮದಯಂತಿಯು ಮಾರಕುಮಾರನನ್ನು ಪ್ರಶ್ನೆಮಾಡಿದುದು.

ಮಾರಕುಮಾರನು ಆ ಪ್ರಶ್ನೆಗೆ ಉತ್ತರವಾಗಿ—ನನ್ನ ಬಾಲ್ಯ ಮಿತ್ರ ನೊಬ್ಬನು ಇಂದು ಇಲ್ಲಿಗೆ ಬರುವವನಾಗಿರುವನು. ನನ್ನ ಅಜ್ಜನಿಗೂ ಈ ಸುದ್ದಿ ಯನ್ನು ತಿಳಿಸಿದ್ದೆನು. ಆದುದರಿಂದಲೇ ಯಜಮಾನನು ಮೂರೆಲೆಗಳನ್ನು ಸಿದ್ಧ ಪಡಿಸಬೇಕೆಂದು ಭೃತ್ಯನಿಗೆ ಅಪ್ಪಣೆಮಾಡಿರಬಹುದು, ಎಂದನು.

ಮದಯಂತಿ—ನಿನ್ನ ಮಿತ್ರನ ಹೆಸರೇನು?

ಮಾರ—ಶ್ರೀಯುತ ರಾಮರಮಾರಮಣರಾಯರು.

ಮದ—ಅವರು ಈವೂರಿನವರೇ?

ಮಾರ—ಅಲ್ಲ, ಅವರು ಸುಂದರವಾಡಿಯವರು.

ಮದ—ಹಾಗಾದರೆ ಅವರು ಇಲ್ಲಿಯೇ ಕೆಲವು ದಿನಗಳು ವಾಸವಾಗಿರ ಬಹುದೆಂದು ತೋರುವುದು.

ಮಾರ—ಅವರು ಇತ್ತಕಡೆ ಎಂದೂ ಬಂದವರಲ್ಲವಾದುದರಿಂದ, ಇಲ್ಲಿ ಯೇ ಕೆಲವು ದಿನಗಳಿದ್ದು ಹೋಗಬಹುದು. ಇದು ನನ್ನ ಊಹೆಮಾತ್ರವು.

ಮದ—ಅವರ ವಯಸ್ಸೆಷ್ಟಿರಬಹುದು?

ಮಾರ—ನನ್ನ ವಯಸ್ಸಿಗೆ ಹೆಚ್ಚುಕಡಮೆಯಾಗಿರುವರು. ಅವರು ಈಗ ಇಲ್ಲಿಯೇ ಬರುತ್ತಿರುವರು.

ಮಾರಕುಮಾರನು ಹೀಗೆ ಹೇಳುತ್ತಿರುವಷ್ಟರೊಳಗಾಗಿಯೇ ಕಮಲಾಕಾಂತನು ರಾಮರಮಾರಮಣರಾಯರನ್ನು ಜತೆಯಲ್ಲಿಯೇ ಕರೆದುಕೊಂಡು ಭೋಜನ ಶಾಲೆಗೆ ಬಂದನು. ಬಳಿಕ ಮಾರಕುಮಾರನು ಅಲ್ಲಿ ಕುಳಿತಿರುವುದನ್ನು ನೋಡಿ, ಕಮಲಾಕಾಂತನು—ಮಗು! ನಿನ್ನ ಬಾಲ್ಯಮಿತ್ರರು ಬಂದಿರುವರು. ಇವರು ಬಲು ದೊಡ್ಡ ಮನುಷ್ಯರು. ಇವರೊಡನೆ ಮಾತನಾಡುವುದೆಂದರೆ ನನಗೆ ಪರಮಾನಂದವಾಗುವುದು. ಇವರು ಈ ಭಾರತ ಭೂಮಿಯನ್ನು ಮೂರು ಸಲ ಬಲಗೊಂಡು ಬಂದಿರುವರು, ಆದರೂ ನಮ್ಮ ನಗರವನ್ನು ಮಟ್ಟಿಗೆ ಒಂದು ಸಲವಾದರೂ ನೋಡಲಿಲ್ಲವಂತೆ. ಇವರ ಮಾತಿನಲ್ಲಿ ಈ ವಿಚಾರಮಟ್ಟಿಗೆ ನನಗೆ ಪರಮಾನಂದವನ್ನುಂಟುಮಾಡಿತು. ಇವರು ಈ ನಗರವನ್ನು ನೋಡುವುದಕ್ಕಾಗಿ ಬಂದವರು, ನನ್ನಲ್ಲಿಯೇ ಕೆಲವು ಕಾಲವಿರುವರು, ಎಂದು ಹೇಳಿದ ಕೂಡಲೆ, ಮಾರಕುಮಾರನು ಎದ್ದು ನಿಂತು ಆತನಿಗೆ ವಂದನೆಯನ್ನರ್ಪಿಸಿದನು. ಅಲ್ಲಿಯೇ ನಿಂತು ನೋಡುತ್ತಿದ್ದ ಮದಯಂತಿಯು ಆಗಂತುಕನನ್ನು ಕಂಡಕೂಡಲೆ ಆವ ಕಾರಣದಿಂದಲೋ ಕಂಗೆಟ್ಟು ಹೋದಳು. ಆಕೆಯ ಕೈಕಾಲುಗಳೆಲ್ಲವೂ ಅರಳಿಯೆಲೆಯಂತೆ ಥರಥರನೆ ನಡುಗಲಾರಂಭವಾದುವು. ಕೂಡಲೆಯೇ ಮದಯಂತಿಯು ಜ್ಞಾನತಪ್ಪಿದವಳಾಗಿ ನಿಂತ ಹಾಗೆಯೇ ದಢೀರೆಂದು ನೆಲದ ಮೇಲೆ ಬಿದ್ದು ಬಿಟ್ಟಳು.

---

## ಎರಡನೆಯ ಸಂಧಿ

### ವಿಷಮ ಸಮಸ್ಯೆ

ರಾಮರಮಾರಮಣನು ಮೂರ್ಛೆಗೊಂಡ ಮದಯಂತಿಯನ್ನು ನೋಡಿ ಆರೆಂಬುದನ್ನು ಅರಿತುಕೊಂಡನು. ಅದರ ಸಮಸಮಯದಲ್ಲಿಯೇ ಆವುದಕ್ಕಾಗಿ ಮದಯಂತಿಯು ತಟ್ಟನೆ ಮೂರ್ಛೆಗೊಂಡಳೆಂಬುದನ್ನೂ ಅರಿತುಕೊಂಡನು, ಆದರೆ ಅದನ್ನು ಮಟ್ಟಿಗೆ ಹೊರಗೆ ತೋರ್ಪಡಿಸದೆಯೇ ಆಕೆಗೆ ಜ್ಞಾನ ಬರುವುದಕ್ಕೆ ಏನ ಮಾಡಬೇಕೋ ಅದೆಲ್ಲವನ್ನೂ ಮಾಡತೊಡಗಿದನು.

ಕೊಂಚ ಕಾಲವೆನ್ನುವುದರೊಳಗಾಗಿಯೇ ಮದಯಂತಿಗೆ ಜ್ಞಾನೋದಯವಾಗಲು, ಆಕೆಯು ನಾಚುಗೆಯಿಂದ ಕುಗ್ಗಿದ ಸ್ವರವುಳ್ಳವಳಾಗಿ—ಈ ಮನೆ

ಯಲ್ಲಿನ ತಾಪವು ಸಹಿಸುವುದಕ್ಕೆ ಅಸಾಧ್ಯವಾದುದು. ಈ ಮನೆಗೆ ನಾನು ಬಂದೆ ನೆಂದರೆ, ನನ್ನ ಶರೀರದಲ್ಲಿ ಆವುದಾದರೊಂದು ವಿಪರ್ಯಾಸವು ಕಂಡೇ ಕಾಣು ವುದು. ಹಿಂದೆರಡು ಸಲ ನನಗೆ ಈರೀತಿಯಾಗಿಯೇ ಆಗಿದ್ದಿತು. ನಾನು ಬೇರೆಯ ಸ್ಥಲದಲ್ಲಿದ್ದರೆ, ನನಗೆ ಈ ತೊಂದರೆಯೇ ಉಂಟಾಗುವುದಿಲ್ಲ, ಎಂದುಸುರಿದಳು.

ಕಮಲಾಕಾಂತನು ಮದಯಂತಿಯ ದುಃಖದಲ್ಲಿ ದುಃಖಗೊಂಡವನಾಗಿ— ಮದಯಂತಿ! ಇಲ್ಲಿಗೆ ಬರುವುದರಿಂದ ನಿನಗೆ ತೊಂದರೆಯಾಗುವುದೆಂದು ತಿಳಿದ ಮೇಲೆ, ನೀನು ಇಲ್ಲಿಗೆ ಬರಬೇಕಾದುದೇನೂ ಇಲ್ಲ. ನಿನ್ನ ಕೋಣೆಯಲ್ಲಿಯೇ ಇದ್ದುಕೊಂಡಿರು. ಪರಿಚಾರಕರು ನಿನಗೆ ಅಲ್ಲಿಯೇ ಭೋಜನವನ್ನು ತಂದು ಬಡ್ಡಿಸುವರು. ಸೌಟು ಇರುವಾಗ ಕೈಗಳನ್ನು ಏತಕೆ ಸುಟ್ಟುಕೊಳ್ಳಬೇಕು? ಎಂದು ವೃದ್ಧಾಭಿಮಾನದ ಮಾತುಗಳನ್ನಾಡಿದನು.

ಮದಯಂತಿಯು ಏನೋ ಕಾರಣದಿಂದ ರೋಗ ಪೀಡಿತೆಯಾಗಿರಬೇಕೆಂದು ತಿಳಿದು ಮಾರಕುಮಾರನು ಮದಯಂತಿಯನ್ನುದ್ದೇಶಿಸಿ—ಮದಯಂತಿ! ನೀನು ದಿನದಿನಕ್ಕೂ ಹೀಗೇಕೆ ಆಗುತ್ತಿರುವೆ? ಮೊದಮೊದಲು ನೀನು ಅರೋಗ ದೃಢಕಾಯೆಯಾಗಿದ್ದವಳು ಬರುಬರುತ್ತಾ ರೋಗದಿಂದ ದುರ್ಬಲೆಯಾಗುತ್ತಿರುವ ಕಾರಣ, ನೀನು ಬೇರೆಯ ಸ್ಥಲಕ್ಕೆ ಹೋಗಿ ಅಲ್ಲಿ ಕೆಲವು ಕಾಲವಾದರೂ ವಾಸ ವಾಗಿದ್ದು ಬರುವುದು ಒಳ್ಳೆಯದೆಂದು ತೋರುವುದು. ವಾಯು ಪರಿವರ್ತನವೂ ರೋಗನಿವಾರಣೆಯಲ್ಲಿ ಅದೊಂದು ಮಹೌಷಧವೆಂದು ಬಲ್ಲವರು ನುಡಿವರು, ಎಂದನು.

ಮದಯಂತಿಯು ಇದಾವುದಕ್ಕೂ ಉತ್ತರ ಕೊಡದೆ ಊಟದ ಮನೆಯಿಂದ ಹೊರಗೆ ಬಂದು ಬಿಟ್ಟು ಮಾರಕುಮಾರ ಕಮಲಾಕಾಂತರಿಬ್ಬರಿಗೂ ತಿಳಿಯದ ಹಾಗೆ ಕಣ್ಣ ಸೈಗೆಯಿಂದ ಆಗಂತುಕನಿಗೆ ತನ್ನನ್ನು ಅನುಸರಿಸಿ ಬರುವಂತೆ ತಿಳಿಸಿ ಒಂದೆಡೆಯಲ್ಲಿ ಮರೆಯಾಗಿ ನಿಂತುಕೊಂಡು ಆತನನ್ನೇ ನಿರೀಕ್ಷಿಸುತ್ತಿದ್ದಳು.

ರಾಮರಮಾರಮಣನು ಮದಯಂತಿಯ ಅಭಿಪ್ರಾಯವನ್ನು ಅರಿತವನಾಗಿ ಆವುದೋ ಒಂದು ನೆಪವನ್ನು ಹೂಡಿಕೊಂಡು ಹೊರಗೆ ಕಾದುಕೊಂಡು ನಿಂತಿದ್ದ ಮದಯಂತಿಯ ಹತ್ತಿರಕ್ಕೆ ಬಂದ ಕೂಡಲೆ, ಆಕೆಯು ಆತನನ್ನು ಕುರಿತು—ಈ ದಿನದ ಸಂಧ್ಯಾಕಾಲದಲ್ಲಿ ನನ್ನನ್ನು ಇದೇ ಸ್ಥಲದಲ್ಲಿಯೇ ಬಂದು ನೋಡಬೇಕು. ನಾನು ನಿನಗಾಗಿಯೇ ಕಾದು ನಿಂತಿರುವೆನು, ಎಂದು ಹೇಳಿ ಹೊರಟು ಹೋದಳು. ರಾಮರಮಾರಮಣನೂ ಮತ್ತೆ ಊಟದ ಕೋಣೆಗೆ ಬಂದು ಎಲೆಯ ಮುಂದೆ ಭೋಜನಕ್ಕೆ ಕುಳಿತನು.

ಸಂಧ್ಯಾಕಾಲಕ್ಕೆ ಮೊದಲು, ವಿನೋದ ಕೂಟಕ್ಕೆ ಆಹೂತರಾಗಿದ್ದ ಕಮಲಾಕಾಂತನೂ ಮಾರಕುಮಾರನೂ ಮಿತ್ರನೊಬ್ಬನ ಮನೆಗೆ ತೆರಳಿದರು. ಇದೇ ಸರಿಯಾದ ಸಮಯವೆಂದು ರಾಮರಮಾರಮಣನು ಮದಯಂತಿಯನ್ನು ಸಂಧಿಸಿದನು.

ಮದಯಂತಿಯು ಆತನನ್ನು ಕಂಡ ಕೂಡಲೆ—ನಾನು ಇಲ್ಲಿರುವುದು ನಿನಗೆ ಗೊತ್ತಾದ ಬಗೆ ಹೇಗೆ, ಭೂತನಾಥ? ಎಂದು ಪ್ರಶ್ನೆಮಾಡಿದಳು.

ರಾಮ—ಇಲ್ಲಿ ನಾನು ಶ್ರೀಯುತ ರಾಮರಮಾರಮಣರಾಯರು. ನನ್ನನ್ನು ನೀನು ಈ ಹೆಸರಿನಿಂದಲೇ ಸಂಬೋಧಿಸಬೇಕು. ನೀನು ನನ್ನನ್ನು ನೋಡಿದ ಕೂಡಲೆ ಅದೇಕೆ ಮೂರ್ಛೆಗೊಂಡೆ?

ಮದ—ಹಠಾತ್ತಾಗಿ ನಿನ್ನನ್ನು ಇಲ್ಲಿ ಕಂಡ ಕೂಡಲೆ, ನನಗೆ ಭಯವಾಯಿತು, ಬಳಿಕ ತಲೆ ತಿರುಗಿ ನಾನು ಬಿದ್ದುಬಿಟ್ಟೆನು. ರಾಮ! ನಾನು ಇಲ್ಲಿರುವುದು ನಿನಗೆ ಹೇಗೆ ಗೊತ್ತಾದುದು?

ರಾಮ—ಅದೇಕೆ ಹೀಗೆ ಕೇಳುವೆ? ನೀನು ಇಲ್ಲಿರುವುದು ಆರಿಗೂ ಗೊತ್ತಿಲ್ಲವೆಂದು ತಿಳಿದೆಯಾ ಹೇಗೆ? ನೀನು ಎಲ್ಲಿ ಅವಿತುಕೊಂಡರೂ ನಾನು ಬಿಡೆನು.

ಮದ—ರಾಮ! ಇದೆಲ್ಲಾ ಹಾಗಿರಲಿ; ನಿನಗೆ ಹೇಳಿದವರಾರು? ಮೊದಲು ತಿಳಿಸು.

ರಾಮ—ನೀನು ನಮ್ಮ ಹೈಮವತಿಯನ್ನು ಬಲ್ಲೆಯಷ್ಟೇ? ನಾನು ಆ ಅನಾಥೆಯಾದ ಬಾಲಿಕೆಯನ್ನು ಬಹುಕಾಲದಿಂದಲೂ ಸಾಕುತ್ತಿರುವೆನು.

ಮದ—ನಾನು ಹೈಮವತಿಯನ್ನು ಕಾಣೆನೇ? ಅವಳು ಒಬ್ಬ ಬೀದಿಯ ಬಿಕಾರಿಯ ಮಗಳು. ನಾನು ಆ ಹುಡುಗಿಯ ತಾಯಿಯನ್ನೂ ಬಲ್ಲೆನು. ಈಗ ಆಕೆಗೆ ತಾಯಿತಂದೆಗಳಾರೂ ಇಲ್ಲ. ಹಾಳ ಹೊಟ್ಟೆಗಾಗಿ ಪರಸೇವೆಯನ್ನು ಮಾಡಿಕೊಂಡು ಎಂತಹ ಕಷ್ಟಗಳನ್ನು ಅನುಭವಿಸಬೇಕಾಗುವುದು! ಭೂತನಾಥ! ಅಲ್ಲ ಅಲ್ಲ—ರಾಮರಮಾರಮಣ! ನನ್ನ ಬಳಿಯಲ್ಲಿ ನೀನು ಸುಳ್ಳನ್ನು ಮಟ್ಟಿಗೆ ಹೇಳಬೇಡ, ಕಂಡೆಯಾ? ನಾನು ನಿನ್ನ ವಿಷಯವೆಲ್ಲವನ್ನೂ ಬಲ್ಲೆನು.

ರಾಮ—ನಿನ್ನನ್ನು ಕಾಣದವರಾರು? ನೀನು ಹೇಳುವುದೆಲ್ಲವೂ ನಿಜ, ನಾನು ಹೇಳುವುದೆಲ್ಲವೂ ಸುಳ್ಳು, ಅಲ್ಲವೇ? ನೀನಿರುವ ಸ್ಥಲವನ್ನು ನನಗೆ

ಹೈಮವತಿಯೇ ತಿಳಿಸಿದವಳು. ನೀನು ಎಲ್ಲಿಯಾದರೂ ಇರುವಲ್ಲಿಯೇಕೆ, ನನ್ನಿಂದ ತಪ್ಪಿಸಿಕೊಂಡು ನೀನು ಎಲ್ಲಿಗೂ ಓಡಿ ಹೋಗಲಾರೆ.

ಮದ—ರಾಮು! ಒಂದಾನೊಂದು ಕಾಲದಲ್ಲಿ ನೀನು ನನ್ನನ್ನು ಎಷ್ಟರ ಮಟ್ಟಿಗೆ ಪ್ರೀತಿಸುತ್ತಿದ್ದೆ, ಎಷ್ಟರಮಟ್ಟಿಗೆ ನನ್ನನ್ನು ರಕ್ಷಿಸಿಕೊಂಡು ಬರುತ್ತಿದ್ದೆ; ಆಗ ನನ್ನನ್ನು ಒಂದು ಕ್ಷಣಕಾಲ ಕಾಣದೇ ಹೋದರೆ ಪ್ರಾಣವನ್ನೇ ಬಿಟ್ಟು ಬಿಡುತ್ತಿದ್ದೆ. ಈಗಲಾದರೋ ನೀನು ಹೇಗೆಯೋ ಆಗಿಬಿಟ್ಟಿರುವೆ. ನನಗೆ ಸರ್ವ ನಾಶವನ್ನುಂಟುಮಾಡಿ ಇನ್ನೂ ನೀನು ತೃಪ್ತನಾಗದೇ ಇರಬೇಕಾದರೆ, ನಾನು ನಿನಗೆ ಮಾಡಿದ ಅಪರಾಧವಾದರೂ ಏನು?

ರಾಮು—ನಾನು ನಿನಗೆ ಆವ ಪ್ರಕಾರದಿಂದಲೂ ಅಪಕಾರಮಾಡುವುದಕ್ಕಾಗಿ ಇಲ್ಲಿಗೆ ಬಂದವನಲ್ಲ, ಮದಯಂತಿ! ನಾನು ನಿನ್ನನ್ನು ಮೊದಲಿನಂತೆಯೇ ಈಗಲೂ ಪ್ರೀತಿಸುತ್ತಿರುವೆನು. ನಮ್ಮಿಬ್ಬರಿಗೂ ಜನಿಸಿದ್ದ ಮಗುವು ಪ್ರಾಣದಿಂದ ಇರುತಿದ್ದರೆ, ನಾವಿಬ್ಬರೂ ಹೀಗೆ ಬೇರೆಬೇರೆಯಾಗಿ ಅಲೆದಾಡಬೇಕಾಗಿದ್ದಿತೇ? ನಮ್ಮ ಉದ್ದೇಶವೇ ಒಂದು ಬಗೆಯಾದರೆ, ದೈವ ವಿಲಾಸವೇ ಒಂದು ಬಗೆ.

ಮದ—ರಾಮು! ನೀನು ಹೇಳುವುದು ಸತ್ಯ. ಈಗ ಆ ಮಾತಿನಿಂದ ಪ್ರಯೋಜನವೇನು? ಈಗ ಅದನ್ನು ಜ್ಞಾಪಿಸಿಕೊಂಡರೆ ನನ್ನ ಎದೆಯು ನಡುಗುವುದು. ನೀನು ನನ್ನನ್ನು ಹೇಗೆ ಪ್ರೀತಿಸುವೆಯೋ ಹಾಗೆಯೇ ನಾನೂ ನಿನ್ನನ್ನು ಪ್ರೀತಿಸುವೆನು, ಆದರೆ ನಮ್ಮ ಪ್ರೀತಿಯೆಂಬುದು ಮಾತಿನದಲ್ಲ. ಅದು ಹೋಗಲಿ. ಪ್ರಕೃತದ ಮಾತನ್ನಾಡುವ. ನೀನು ಇಲ್ಲಿಗೆ ಬಂದುದೇತಕೆ? ನಿಜವಾಗಿಯೂ ನೀನು ನನಗಾಗಿ ಬಂದವನಲ್ಲ. ನನ್ನನ್ನು ನೋಡುವುದು ನಿನಗೆ ಇಷ್ಟದಲ್ಲಿಯೇ ಇರಲಿಲ್ಲ. ಇಲ್ಲಿಗೆ ಬರಲು ನಿನಗೆ ಬೇರೆಯ ಉದ್ದೇಶವಿರಬೇಕು.

ರಾಮು—ನನ್ನ ಉದ್ದೇಶವೇನೇ? ಕಂಡೇ ಇದೆ. ನನಗೆ ಬೇಕಾಗಿರುವುದು ಹಣ.

ಮದ—ಹಣವೆಲ್ಲಿಂದ ಬರಬೇಕು? ನಾನು ಕಂಡವರ ಮನೆಯಲ್ಲಿ ಅನ್ನಕ್ಕೆ ಬಿದ್ದಿರುವೆನು. ನನ್ನ ಬಳಿಯಲ್ಲಾದರೋ ಒಂದು ಕಾಸೂ ಇಲ್ಲ.

ರಾಮು—ಅದೆಂತಹ ಮಾತು? ನೀನು ಎಷ್ಟೋ ದಿನಗಳಿಂದಲೂ ಧನ ಕುಬೇರನ ಮನೆಯಲ್ಲಿ ವಾಸಮಾಡಿಕೊಂಡಿರುವೆ. ಆದರೂ ಕಯ್ಯಲ್ಲಿ ಒಂದು ಕಾಸೂ ಇಲ್ಲವೆಂದು ಅಭಿನಯಿಸುವೆ. ನಿನ್ನ ಮಾತಿನಲ್ಲಿ ನನಗಾದರೋ ಸ್ವಲ್ಪವೂ ವಿಶ್ವಾಸವಿಲ್ಲ.

ಮದ—ನಾನು ನಿಜವಾಗಿಯೂ ಹೇಳುವೆನು, ನನ್ನ ಬಳಿಯಲ್ಲಿ ಒಂದು ಕಾಸೂ ಇಲ್ಲ. ನೀನು ಗಲಭೆಗೆ ಆಸ್ಪದ ಕೊಡದೆ ಕೊಂಚ ಕಾಲ ಸುಮ್ಮನಿರು. ನಾನು ಈ ಮನೆಗೆ ಯಜಮಾನಿಯಾಗುವ ಸುಯೋಗವೊಂದು ಒದಗಿಬರುತ್ತಿರುವುದು.

ರಾಮ—ನನಗೆ ಇದರ ಅರ್ಥವಾಗಲಿಲ್ಲ, ಅರ್ಥವನ್ನು ಬಿಡಿಸಿ ಹೇಳು.

ಮದ—ಕಮಲಾಕಾಂತನು ನನ್ನನ್ನು ಮದುವೆಯಾಗ ಬೇಕೆಂದಿರುವನು.

ರಾಮ—ಇದು ನಿಜವೇ? ಮುದುಕನಿಗೆ ಈ ಚಪಲವೇತಕೆ?

ಮದ—ನನ್ನನ್ನು ಉದ್ಧಾರಮಾಡುವುದಕ್ಕಾಗಿ. ಆತನು ನನ್ನನ್ನು ಮದುವೆಮಾಡಿಕೊಂಡನೆಂದರೆ, ಆತನ ಸಂಪತ್ತೆಲ್ಲವೂ ನನ್ನದೇ ಆಗುವುದು. ಬಳಿಕ ನೀನು ಆ ಹಣವನ್ನು ಬೇಕಾದ ಹಾಗೆ ವೆಚ್ಚಮಾಡಬಹುದು, ಆದರೆ ನೀನು ಮಟ್ಟಿಗೆ ನನಗೆ ಸಹಾಯನಾಗಿರಬೇಕು.

ರಾಮ—ನಾನು ನಿನಗೆ ಹೇಗೆ ಸಾಹಾಯ್ಯವನ್ನೆಸಗಲಿ?

ಮದ—ನನಗೂ ನಿನಗೂ ಇರುವ ಸಂಬಂಧವನ್ನು ನೀನು ಬಹಿರಂಗ ಪಡಿಸದೇ ಹೋದರೆ, ಅದೇ ನನಗೆ ನಿನ್ನಿಂದ ತುಂಬಾ ಸಾಹಾಯ್ಯವು.

ರಾಮ—ಸರಿ; ನೀನು ನನಗೆ ಹಣವನ್ನು ಕೊಟ್ಟರೆ, ನಾನು ಬಾಯ ಮುಚ್ಚಿಕೊಂಡು ಸುಮ್ಮನಿರುವೆನು.

ಮದ—ನಿನಗೆ ಬೇಕಾದುದೇನು? ನಾನು ನಿನಗೆ ಎಷ್ಟು ಹಣವನ್ನು ಕೊಟ್ಟರೆ ನೀನು ಸುಮ್ಮನಿರುವೆ?

ರಾಮ—ನೀನು ಆ ಮುದಿ ಹದ್ದನ್ನು ಮದುವೆಯಾದರೆ, ಆತನ ಆಸ್ತಿಯೆಲ್ಲವೂ ನಿನ್ನ ಕೈಸೇರುವುದು. ಆ ಆಸ್ತಿಯಲ್ಲಿ ನೀನು ನನಗೆ ಅರ್ಧವನ್ನಾದರೂ ಕೊಡಬೇಕು. ಆಗಳೇ ನಾನು ನಿನಗೆ ಒತ್ತಾಸೆಯಾಗಿ ನಿಲ್ಲುವೆನು.

ಮದ—ಅಬ್ಬಬ್ಬಾ! ಆಸ್ತಿಯಲ್ಲಿ ಅರ್ಧವೇ?

ರಾಮ—ಅಹುದು, ಅರ್ಧ. ಅದಕ್ಕೆ ಕೊಂಚವೂ ಕಡಮೆಯಾಗ ಕೂಡದು.

ಮದ—ನಮ್ಮ ಮದುವೆಯ ಮುಹೂರ್ತವು ಇನ್ನೂ ನಿಷ್ಕರ್ಷೆಯಾಗಿಲ್ಲ. ನೀನು ಎಷ್ಟು ದಿನ ನಿರೀಕ್ಷಿಸ ಬಲ್ಲೆ?

ರಾಮ—ನಿನ್ನ ಮದುವೆಯು ಬೇಗನೆಯೇ ನಡೆಯುವಂತೆ ಏರ್ಪಾಡು ಮಾಡುವೆನು.

ಮದ—ನಿನ್ನ ಪ್ರಯತ್ನವು ಫಲಿಸದೇ ಹೋದರೆ ?

ರಾಮ—ಫಲಿಸಲೇ ಬೇಕು. ನಿನ್ನಲ್ಲಿ ಇನ್ನೂ ರೂಪಯೌವನಗಳು ಇರುವುದರಿಂದ ಅಸಾಧ್ಯವಾವುದು ?

ಈ ಮಾತನ್ನು ಕೇಳಿ ಮದಯಂತಿಯು ನಕ್ಕಳು. ಬಳಿಕ ರಾಮರಮಾ ರಮಣನನ್ನು ಹೊರಗೆ ಕಳುಹುವುದಕ್ಕೆ ಬಾಗಿಲನ್ನು ತೆರೆಯುವುದಕ್ಕೋಸ್ಕರ ಮದಯಂತಿಯು ಯತ್ನಪಟ್ಟಾಗ, ಒಂದು ವ್ಯಕ್ತಿಯು ಆ ಬಾಗಿಲ ಹತ್ತಿರದಿಂದ ದೂರ ಸರಿದು ಹೋದಂತಾಯಿತು.

---

## ಮೂರನೆಯ ಸಂಧಿ

### ಹಾಗೆಂದರೇನು ?

ಕಮಲಾಕಾಂತನೂ ಮಾರಕುಮಾರನೂ ವಿನೋದ ಕೂಟಕ್ಕೆ ತೆರಳಿದ್ದರೆಂದು ಮೊದಲೇ ಸೂಚಿಸಿರುವೆವಷ್ಟೇ ? ವಿನೋದ ಕೂಟದ ಭೋಜನಾದಿಗಳನ್ನು ತೀರಿಸಿಕೊಂಡು ಮಾರಕುಮಾರನು ಅಲ್ಲಿ ನಿಲ್ಲದೆಯೇ ಮನೆಗೆ ಹೊರಟು ಬಂದನು. ಕಮಲಾಕಾಂತನು ಹೊತ್ತನ್ನು ಕಳೆವುದಕ್ಕಾಗಿ ತನ್ನ ಮಿತ್ರರೊಡನೆ ಮಾತನಾಡುತ್ತಾ ಅಲ್ಲಿಯೇ ಕುಳಿತಿದ್ದನು.

ಮಾರಕುಮಾರನು ಮನೆಗೆ ಬಂದ ಕೂಡಲೆ, ತನ್ನ ಬಾಲ್ಯ ಮಿತ್ರನನ್ನು ಹುಡುಕಿದನು. ಆತನು ತನ್ನ ಸ್ಥಾನದಲ್ಲಿ ಇಲ್ಲದಿರುವುದನ್ನು ಕಂಡು, ಮಾರ ಕುಮಾರನು ಅಚ್ಚರಿಗೊಂಡವನಾಗಿ ಮನೆಯೆಲ್ಲವನ್ನೂ ಹುಡುಕುತ್ತಾ ಕಡೆಗೆ ಭೋಜನ ಶಾಲೆಗೆ ಬಂದು ನೋಡಿದನು. ಅಲ್ಲಿ ಬಾಗಿಲು ಒಳಗಡೆಯಿಂದ ಬಂಧಿಸಲ್ಪಟ್ಟದ್ದಿತು. ಒಳಗೆ ಆರಿರಬಹುದೆಂದು ಮಾರಕುಮಾರನು ಬಾಗಿಲ ಬಿರಿಕಿನಿಂದ ನೋಡಲಾಗಿ, ರಾಮರಮಾರಮಣನು ಮದಯಂತಿಯೊಡನೆ ಮಾತನಾಡುತ್ತಾ ಕುಳಿತಿದ್ದನು. ಮಾರಕುಮಾರನು ಸಂಶಯ ಪಟ್ಟವನಾಗಿ ಇದರ ಮೂಲತತ್ತ್ವವನ್ನು ಅರಿಯಬೇಕೆಂದು ಸಂಕಲ್ಪಮಾಡಿಕೊಂಡು ಅಲ್ಲಿಯೇ ನಿಂತು ಅವರ ಮಾತುಗಳನ್ನು ಆಲಿಸ ತೊಡಗಿದನು. ಅವರ ಮಾತುಕತೆಗಳು ಮುಗಿದ ಮೇಲೆ ಮದಯಂತಿಯು ಬಾಗಿಲನ್ನು ತೆರೆಯುವುದಕ್ಕೆ ಬಂದ ಕೂಡಲೆ,

ಮಾರಕುಮಾರನು ಬೇರೊಂದು ಕಡೆಗೆ ಓಡಿಹೋದನು. ಹಿಂದೆ ಹೇಳಿದ ವ್ಯಕ್ತಿಯೇ ಈ ಮಾರಕುಮಾರನು.

ಮರುದಿನ ಭೋಜನಾನಂತರದಲ್ಲಿ ರಾಮರಮಾರಮಣನೂ ಮಾರಕುಮಾರನೂ ವಿಶ್ರಾಂತಿ ಸುಖವನ್ನು ಅನುಭವಿಸುತ್ತಾ ಒಂದೆಡೆಯಲ್ಲಿ ಕುಳಿತಿರುವಾಗ, ಮಾರಕುಮಾರನು ತನ್ನ ಮಿತ್ರನನ್ನು ಸಂಬೋಧಿಸಿ—ರಾಮ! ನಾವಿಬ್ಬರೂ ಬಾಲ್ಯದಲ್ಲಿ ಒಂದೇ ಪಾಠಶಾಲೆಯಲ್ಲಿ ಸಹಾಧ್ಯಾಯಿಗಳಾಗಿದ್ದ ಕಾಲವು ನಿನ್ನ ಜ್ಞಾಪಕದಲ್ಲಿರುವುದೇ? ಆಗಣ ಸಂತೋಷವೇ ಸಂತೋಷ, ಎಂದು ಮಾತನ್ನು ಪ್ರಾರಂಭಿಸಿದನು.

"ಜ್ಞಾಪಕದಲ್ಲಿ ಇಲ್ಲದೇ ಏನು, ಮಾರಕುಮಾರ? ಆದುದರಿಂದಲೇ ನಾನು ನಿನ್ನನ್ನು ಹುಡುಕಿಕೊಂಡು ಬಂದು ಇಂದು ನಿನ್ನೊಡನೆ ಮಾತನಾಡುತ್ತಿರುವುದು" ಎಂದನು.

ಶ್ರೀಯುತ ಪಾಠಕ ಮಹಾಶಯ! ನಮ್ಮ ರಾಮರಮಾರಮಣರಾಯರನ್ನು ಬಲ್ಲಿರಾ? ಆತನು ರಾಮರಮಾರಮಣರಾಯನಲ್ಲ, ಆತನು ನಮ್ಮ ಪೂರ್ವ ಪರಿಚಿತನಾದ ಭೂತನಾಥನೆಂಬ ದರೋಡೆಗಳ್ಳನು. ಆತನು ಭಯಂಕರ ಸ್ವರೂಪವುಳ್ಳವನು. ಪರಸ್ವಾಪಹರಣ, ಪರದಾರಾಪಹರಣ, ಪರಪ್ರಾಣಾಪಹರಣಗಳೇ ಅವನ ನಿತ್ಯ ಜೀವಿಕೆಯು.

ಭೂತನಾಥನಿಗೂ ಮಾರಕುಮಾರನಿಗೂ ಆವಾಗಲೂ ಪರಸ್ಪರ ಪರಿಚಯವೆಂಬುದೇ ಇಲ್ಲ. ಆದರೆ ಮಾರಕುಮಾರನಿಗೆ ಬಾಲ್ಯದಲ್ಲಿ ರಾಮರಮಾರಮಣನೆಂಬ ಸಹಾಧ್ಯಾಯಿಯೊಬ್ಬನು ಪರಿಚಿತನಾಗಿರುತ್ತಿದ್ದನು. ಆತನಿಗೂ ಭೂತನಾಥನಿಗೂ ಒಂದು ತೆರನಾಗಿ ಹೋಲಿಕೆಯಿದ್ದಿತು. ಈ ತತ್ತ್ವವನ್ನು ಭೂತನಾಥನು ಮೊದಲಿನಿಂದಲೂ ಅರಿಯದೇ ಇರಲಿಲ್ಲ.

ಭೂತನಾಥನು ಹೈಮವತಿಯಿಂದ ಮದಯಂತಿಯ ಗೊತ್ತುಗುರಿಯನ್ನು ಅರಿತುಕೊಂಡು, ಆವುದಾದರೂ ಒಂದು ಉಪಾಯವನ್ನವಲಂಬಿಸಿ ಮದಯಂತಿಯನ್ನು ನೋಡಲೇ ಬೇಕೆಂದು ಸಿದ್ಧಾಂತಮಾಡಿಕೊಂಡನು. ಆಗ ಆತನಿಗೆ ಮಾರಕುಮಾರನ ಬಾಲ್ಯಮಿತ್ರನಾದ ರಾಮರಮಾರಮಣನ ಜ್ಞಾಪಕ ಬಂದಿತು.

ಕೂಡಲೆಯೇ ಆತನೊಡನೆ ತನಗಿರುವ ಹೋಲಿಕೆಯು ಈ ಸಮಯದಲ್ಲಿ ಮಹೋಪಕಾರಕವೆಂದು ಭೂತನಾಥನು ತಿಳಿದು, ಮಾರಕುಮಾರನಿಗೆ ರಾಮರಮಾರಮಣನ ಹೆಸರಿನಿಂದ ಒಂದು ಪತ್ರವನ್ನು ಬರೆದನು.

## ಪತ್ರದ ಒಕ್ಕಣೆ

ಬಾಲ್ಯಮಿತ್ರನಾದ ಮಾರಕುಮಾರರಾಯ !

ಬಾಲ್ಯದಲ್ಲಿ ಪಾಠಶಾಲೆಯ ನಿನ್ನ ಸಹಾಧ್ಯಾಯಿಯಾದ ರಾಮರಮಾರಮಣನ ಪ್ರೀತಿ ಪೂರ್ವಕವಾದ ವಿಜ್ಞಾಪನೆಗಳು.

ಮಿತ್ರನೇ ! ನನ್ನ ಈ ಪತ್ರವನ್ನು ನೋಡಿ ನೀನು ಅಚ್ಚರಿಗೊಳ್ಳಬಹುದು. ಬಾಲ್ಯದ ಸ್ನೇಹಾಭಿಮಾನದಿಂದ ನಾನು ನಿನಗೆ ಈ ಪತ್ರವನ್ನು ಬರೆಯಲು ಧೈರ್ಯಗೊಂಡೆನು. ನಾನು ನನ್ನ ವಿದ್ಯಾಭ್ಯಾಸವನ್ನು ಶಕ್ತ್ಯಾನುಸಾರವಾಗಿ ಪೂರ್ತಿಗೊಳಿಸಿ ಈಗ ಸುಂದರವಾಡಿಯಲ್ಲಿ ಒಂದು ಗಣ್ಯವಾದ ಅಧಿಕಾರವನ್ನು ಪಡೆದುಕೊಂಡು ಸುಖದಿಂದಿರುವೆನು. ದೇಶಾಟನೆಯೂ ವಿದ್ಯಾರ್ಜನೆಯ ಚರಮಾವಯವವೆಂದು ತಿಳಿದು ನಾನು ಈ ಭಾರತ ಭೂಮಿಯನ್ನು ಮೂರುಸಲ ಬಲಗೊಂಡು ಬಂದಿರುವೆನು. ಆದರೆ ನಿನ್ನ ನಗರವನ್ನು ಒಂದು ಸಲವಾದರೂ ನೋಡಿಕೊಂಡು ಹೋಗುವುದಕ್ಕೆ ನನಗೆ ಅವಕಾಶ ದೊರೆಯದಿದ್ದುದಕ್ಕಾಗಿ ಅತಿಯಾಗಿ ಕತಿಗೊಂಡು ಕುಳಿತಿರಲು, ನಿನ್ನ ಜ್ಞಾಪಕವು ನನಗೆ ಬಂದಕೂಡಲೆ ತಟ್ಟನೆದ್ದು ಈ ಪತ್ರವನ್ನು ನಿನಗೆ ಬರೆಯಬೇಕಾಯಿತು. ನಾನು ಒಂದೆರಡು ದಿನಗಳೊಳಗಾಗಿ ನಿನ್ನಲ್ಲಿಗೆ ಬಂದು ಒಂದೆರಡು ದಿನಗಳ ವರೆಗಾದರೂ ಬಾಲ್ಯಮಿತ್ರನ ಸಹವಾಸದಲ್ಲಿದ್ದು ಪ್ರಾಪಂಚಿಕವ್ಯವಹಾರದ ಬೇಸರವನ್ನು ಕಳೆದುಕೊಳ್ಳಬೇಕೆಂದಿರುವೆನು.

ನಿನ್ನಿಂದ ಪ್ರತ್ಯುತ್ತರ ಬಂದ ಕೂಡಲೆ ನಿಮ್ಮಲ್ಲಿಗೆ ಹೊರಟು ಬರುವುದಕ್ಕೆ ಅಣಿಮಾಡಿಕೊಳ್ಳುವೆನು. ಬಾಲ್ಯಕಾಲದ ಸ್ನೇಹವೆಂಬುದು ಎಂತಹ ಅಭೇದ್ಯವಾದ ಸಂಬಂಧವೆಂಬುದನ್ನು ನಾನು ನಿನಗೆ ವಿವರಿಸಿ ಬರೆಯ ಬೇಕಾದುದೇನೂ ಇರುವುದಿಲ್ಲ. ಸಮಕ್ಷದಲ್ಲಿ ಪ್ರೀತಿವಿಶ್ವಾಸಗಳು ಬಳೆಯುವ ಹಾಗೆ ಪತ್ರಮುಖದಿಂದಾಗಲಾರದು.

ನಿನ್ನ ಯೋಗಕ್ಷೇಮಗಳನ್ನು ಕುರಿತು ಪ್ರತಿ ನಿಮಿಷವೂ ಪ್ರತ್ಯುತ್ತರವನ್ನು ಇದಿರು ನೋಡುತ್ತಿರುವ

" ನಿನ್ನ ಸಹಜ ಸ್ನೇಹಾಭಿಲಾಷಿ,

ಸೋಮವಾಸರ, " ರಾಮರಮಾರಮಣ,

" ಸುಂದರವಾಡಿ."

ಯಥಾಸಮಯದಲ್ಲಿ ಪತ್ರವು ಬಂದು ಸೇರಲು, ಮಾರಕುಮಾರನು ಆ ಪತ್ರವನ್ನು ಓದಿಕೊಂಡು ಆನಂದಿಸುತ್ತಾ, ಅದನ್ನು ತನ್ನ ಅಜ್ಜನಿಗೂ ತೋರಿದನು. ಕಮಲಾಕಾಂತನು ಆಗಬಹುದೆನ್ನಲು, ಮಾರಕುಮಾರನು ತನ್ನ ಒಪ್ಪಿಗೆಯನ್ನಿತ್ತು ಆ ಪತ್ರಕ್ಕೆ ಪ್ರತ್ಯುತ್ತರವನ್ನು ಬರೆದನು. ಅದಕ್ಕನುಸಾರವಾಗಿಯೇ ರಾಮರಮಾರಮಣನು ಹೊರಟು ಬಂದು ಕಮಲಾಕಾಂತನ ಮನೆಯಲ್ಲಿ ಕಾಲಿಟ್ಟನು.

ಮಾರಕುಮಾರನು ರಾಮರಮಾರಮಣನನ್ನು ನೋಡಿ ತನ್ನ ಬಾಲ್ಯಮಿತ್ರನೇ ಬಂದನೆಂದು ಎಂದೂ ಇಲ್ಲದ ಆನಂದವನ್ನೇ ಅನುಭವಿಸಿದನು. ಕಾಲವನ್ನು ಕಂಡ ಭೂತನಾಥನ ಚಾತುರ್ಯವನ್ನು ಅವನೆಂತರಿವನು !

ಈ ಪೂರ್ವಕಥೆಯು ಅದಂತಿರಲಿ. ಮಾರಕುಮಾರನು ರಾಮರಮಾರಮಣನಾಡಿದ ಮಾತನ್ನು ಕೇಳಿ—ರಾಮು ! ಅದೇನೋ ಸರಿಹೋಯಿತು. ನಾವು ಬಾಲ್ಯದಲ್ಲಿ ಏಕಾಂತದ ಮಿತ್ರರಾಗಿರಲಿಲ್ಲವೇ ? ಇದನ್ನು ನೀನು ಮರೆತಂತಿದೆ. ಆಗ ನಾವು ಎಷ್ಟೋ ಗೋಪ್ಯದ ಸುದ್ದಿಗಳನ್ನೆತ್ತಿ ಮಾತನಾಡುತ್ತಿರಲಿಲ್ಲವೇ ? ಆರಿಗೂ ತಿಳಿಯದ ಹಾಗೆ ನಾವು ಎಷ್ಟೋ ಕೆಲಸಗಳನ್ನು ಮಾಡುತ್ತಿರಲಿಲ್ಲವೇ ? ಈಗ ನೀನು ಅದೆಲ್ಲವನ್ನೂ ಮರೆತು ಹೊಸಬನಂತೆ ಕಾಣಿಸಿಕೊಳ್ಳುವೆಯಾದುದರಿಂದ, ನಿನ್ನ ಆಗಣ ಸ್ನೇಹವು ಕೃತ್ರಿಮವಾದುದೆಂದು ನಾನೇಕೆ ಊಹಿಸಬಾರದು ? ಎಂದು ನುಡಿದನು.

ಭೂತನಾಥನು ಇಷ್ಟಕ್ಕೆಲ್ಲಾ ಬೆರಗಾಗತಕ್ಕವನಲ್ಲ. ಆರಿಗೆ ಹೇಗಿರಬೇಕೋ ಹಾಗೆಯೇ ಇರಬಲ್ಲ ಭೂತನಾಥನಿಗೆ ಸಮಯವರಿತು ಮಾತನಾಡುವುದನ್ನು ಆರೂ ಹೇಳಿಕೊಡಬೇಕಾಗಿರಲಿಲ್ಲ. ಎಷ್ಟೋ ಮಾರಕುಮಾರರು ಭೂತನಾಥನ ಕಾಲ ಕೆಳಗಣಿಂದ ತೂರಿಹೋಗಿರುವರು. ಇಂತಹ ಭೂತನಾಥನು ಚಾತುರ್ಯದಿಂದ ನಗುತ್ತಾ—ನನಗೆ ಇದಾವುದೂ ಗೊತ್ತಿಲ್ಲವೆಂದೆಣಿಸಿದೆಯಾ ? ನಮ್ಮ ಬಾಲ್ಯದ ವ್ಯವಹಾರವನ್ನು ನಾನು ಮರೆತಿರುವೆನೆಂದು ನೀನು ಊಹಿಸಿದುದಾದರೂ ಹೇಗೆ ? ನಿನ್ನ ಸ್ವಭಾವವು ಆವ ರೀತಿಯಲ್ಲಿ ಮಾರ್ಪಟ್ಟಿರುವುದೆಂಬುದನ್ನು ಅರಿವುದಕ್ಕಾಗಿಯೇ ನಾನು ಈ ರೀತಿಯಾಗಿ ಮೌನವನ್ನು ತಾಳಿಕೊಂಡಿದ್ದೆನು. ಈಗೀಗ ನಿನ್ನ ಸ್ವಭಾವವೂ ನನ್ನ ಸ್ವಭಾವವೂ ಒಂದೇ ಎಂದು ಗೊತ್ತಾಗುತ್ತಾ ಬಂದುದು. ಇನ್ನು ನಾವುಗಳು ಬಿಗುಮಾನದಿಂದ ವರ್ತಿಸಬೇಕಾದ ಕಾರಣವಿಲ್ಲ. ನಾವು ನಿರ್ಭಯರಾಗಿ ಮೊದಲಿನಂತೆಯೇ ಮಾತುಕತೆಗಳನ್ನಾಡಿಕೊಂಡು ಸಂತೋಷದಿಂದ ಕಾಲವನ್ನು ಕಳೆಯುವ, ಎಂದು ರಸವತ್ತಾಗಿ ಮಾತನಾಡಿದನು.

ಮಾರ—ರಾಮ! ಇದೇ ಅಲ್ಲವೇ ಸನ್ಮಿತ್ರಲಕ್ಷಣವೆಂಬುದು, ಬಾಲ್ಯ ಕಾಲದ ಸ್ನೇಹಿತರು ಹೀಗಿರುವುದಾದರೆ, ಆ ಸ್ನೇಹವು ಚಿರಕಾಲ ನಿಲ್ಲುವುದು. ಕೆಲ ವರು ಅಧಿಕಾರ ಸಂಪತ್ತಿನಿಂದ ತಲೆದಿರುಗಿದವರಾಗಿ ಬಾಲ್ಯದ ಸ್ನೇಹಿತರನ್ನು ಮರತೇ ಬಿಡುವರು. ಇನ್ನು ಕೆಲವರು ಹಣಗಾರರಾದರೆಂದರೆ, ತಮ್ಮ ಬಾಲ್ಯದ ಸ್ನೇಹಿತರನ್ನು ಕಂಡರೆ "ನೀವಾರೋ ನಮಗೆ ತಿಳಿಯದು; ಇನ್ನು ಮೇಲೆ ಇಂತಹ ಸಂಬಂಧವನ್ನು ಕಲ್ಪಿಸಿಕೊಂಡು ನಮ್ಮಲ್ಲಿಗೆ ಬರಲಾಗದು, ಕಂಡಿರಾ?" ಎಂದು ಮೂದಲಿಸಿ ಕಳುಹುವರು. ಇನ್ನೂ ಕೆಲವು ಮಹನೀಯರಿರುವರು,—ಅಂಥವರನ್ನು ಸ್ಮರಿಸುವುದು ಕೂಡ ಪಾಪಹೇತುವು; ಅವರು ಬಾಲ್ಯದ ಸ್ನೇಹಿತ ರನ್ನು ಕಂಡೊಡನೆಯೇ ವಿಷವನ್ನು ಕಾರುತ್ತಾ ಅವರ ಹುಟ್ಟನ್ನೇ ಅಡಗಿಸುವ ವರೆಗೂ ಶಾಂತರಾಗಲಿಕ್ಕಿಲ್ಲ. ರಾಮರಮಾರಮಣ! ನಿನ್ನಂತಹ ಸ್ನೇಹಿತರು ಅತಿವಿರಳರು. ಬಾಲ್ಯದ ಸ್ನೇಹವನ್ನು ಇಷ್ಟರ ಮಟ್ಟಿಗೆ ನೀನು ಕಾಪಿಟ್ಟುಕೊಂಡು ಬಂದುದಕ್ಕಾಗಿ ನಾನು ನಿನಗೆ ಧನ್ಯವಾದಗಳನ್ನು ಅರ್ಪಿಸುವವನಾಗಿರುವೆನು. ನಿನಗೆ ಭಗವಂತನು ಸ್ನೇಹಾಭಿವೃದ್ಧಿಯನ್ನುಂಟುಮಾಡಲಿ.

ರಾಮ—(ವಿನಯದಿಂದ) ಮಿತ್ರನೇ! ಇದೆಲ್ಲವೂ ನಿನ್ನ ನಿರ್ದುಷ್ಟವಾದ ಅಭಿಮಾನವು. ನಿನ್ನಂತಹವರು ಈ ಪ್ರಪಂಚದಲ್ಲಿರುವುದರಿಂದಲೇ ಇದಕ್ಕೆ ಇಷ್ಟು ಸೌಭಾಗ್ಯವು.

ಮಾರ—ಮಿತ್ರನೇ! ಸಂತೋಷ, ಸಂತೋಷ. ನನ್ನದೊಂದು ಪ್ರಶ್ನೆ ಯುಂಟು. ನೀನು ಮದಯಂತಿಯನ್ನು ಬಲ್ಲೆಯಾ?

ರಾಮ—ಮದಯಂತಿ! ಗೊತ್ತಾಯಿತು, ಗೊತ್ತಾಯಿತು. ಈಕೆ ಯನ್ನಲ್ಲವೇ ನಿಮ್ಮ ಕಮಲಾಕಾಂತ ಚಕ್ರವರ್ತಿಯವರು ವಿವಾಹಮಾಡಿಕೊಳ್ಳ ಬೇಕೆಂದೆಣಿಸಿರುವರು? ಆಕೆಯು ಬಲು ಒಳ್ಳೆಯವಳಾಗಿ ಕಾಣುವಳು. ಆಕೆ ಯಲ್ಲಿ ರೂಪಯೌವನಗಳಿಗೆ ಅಭಾವವೇನೂ ಇಲ್ಲ. ಆಕೆಯ ಮೃದುಮಧುರವಾದ ಧ್ವನಿಯನ್ನು ಕೇಳಿದ ಕಿವಿಗೆ ವೀಣಾಧ್ವನಿಯೂ ಕರ್ಣಕಠೋರವೆಂದೇ ಹೇಳ ಬೇಕು.

ಮಾರ—ನಿನಗೂ ಆಕೆಗೂ ಎಷ್ಟು ದಿನಗಳಿಂದ ಪರಿಚಯವುಂಟು?

ರಾಮ—(ಗಂಭೀರನಾಗಿ) ಹಾಗೆಂದರೇನು? ಆಕೆಗೂ ನನಗೂ ಪರಿ ಚಯವು ಹೇಗಾಗಬೇಕು? ನಿನ್ನ ಮಾತಿನ ಭಾವವು ನನಗುಂಟಾಗಲಿಲ್ಲ. ಮದ ಯಂತಿಯು ಗೃಹಸ್ಥನ ಮಗಳು. ಇಂತಹ ಕುಲಕಾಮಿನಿಯರೊಡನೆ ನನಗೆ ಪರಿ ಚಯವೇ! ನಾನು ಈ ಮನೆಗೆ ಬರುವ ವರೆಗೂ ಆಕೆಯನ್ನು ನೋಡಿದವನೇ ಅಲ್ಲ.

ಮಾರ—ನಿನ್ನನ್ನು ನೋಡಿದ ಕೂಡಲೆ ಆಕೆಯು ಮೂರ್ಛೆಗೊಂಡುದರಿಂದ, ನನಗೆ ಸಂಶಯವುಂಟಾಗಿ, ನಿನಗೆ ಪರಿಚಯವಿದೆಯೇ ಎಂದು ಪ್ರಶ್ನೆ ಮಾಡಿದೆನು.

ರಾಮು—ಮಿತ್ರನೇ! ಅಂತಹ ಸಂಶಯಕ್ಕೇನೂ ಕಾರಣವಿರಲಾರದು ನನ್ನಲ್ಲಿ ನೀನು ಮತ್ತಾವ ಸಂಶಯವನ್ನಾದರೂ ಇಟ್ಟುಕೊಂಡು ಬೇರೆಯಾಗಿ ಭಾವಿಸುವುದಾದರೆ, ನನಗೆ ಈಗಳೇ ತಿಳಿಸಿಬಿಡು, ನಾನು ಕೂಡಲೆಯೇ ಗಂಟುಕಟ್ಟಿ ಹೊರಟುಹೋಗುವೆನು. ನಾನು ಒಳ್ಳೆಯ ಮುಹೂರ್ತದಲ್ಲಿಯೇ ಈ ಮನೆಯಲ್ಲಿ ಕಾಲಿಟ್ಟಂತಾಯಿತು!

ಮಾರ—ಮಿತ್ರನೇ! ನನ್ನದು ಅಪರಾಧವಾಯಿತು. ಕ್ಷಮಿಸು, ಕ್ಷಮಿಸು. ನಾನು ಸರಳಭಾವದಿಂದ ಹೀಗೆಲ್ಲಾ ಪ್ರಶ್ನೆಮಾಡಿದೆನೇ ಹೊರತು ನಿನ್ನ ಮನವನ್ನು ನೋಯಿಸಬೇಕೆಂದು ನಾನು ಎಂದಿಗೂ ಪ್ರಶ್ನೆಮಾಡಿದವನಲ್ಲ. ಇದಕ್ಕಾಗಿ ನೀನು ಕೋಪಮಾಡತಕ್ಕುದಲ್ಲ. ನನ್ನನ್ನು ಕ್ಷಮಿಸು.

ರಾಮು—ಮಿತ್ರನೇ! ನಿನ್ನೊಡನೆ ರಹಸ್ಯವೇನು? ಹೇಳುವೆನು, ಕೇಳು. ನಾನು ಮದಯಂತಿಯನ್ನು ನೋಡಿದ ಕೂಡಲೆ, ನನ್ನ ಮನವು ಸೋತಿತು. ನಾನು ಆಕೆಯನ್ನು ವಿವಾಹವಾಗಬೇಕೆಂದು ಕೇಳಿ ನೋಡಿದೆನು. ಆಕೆಯು ಈ ಮನೆಯ ಯಜಮಾನನನ್ನೇ ವಿವಾಹಮಾಡಿಕೊಳ್ಳುವುದಾಗಿ ತಿಳಿದು ಬಂದ ಮೇಲೆ ನಾನು ಸುಮ್ಮನಾದೆನು.

ಮಾರ—ರಾಮುರಮಾರಮಣ! ಇದು ನಿನಗೆ ಗೊತ್ತಾದ ಬಗೆ ಹೇಗೆ? ತಿಳಿಸಬಹುದಾದ ವಿಷಯವಾದರೆ ತಿಳಿಸು.

ರಾಮು—ಇದು ಕೇವಲ ಗೋಪ್ಯವಾದುದು. ನಮ್ಮಂಥವರು ಇದನ್ನು ಎತ್ತಿ ಆಡಬಾರದು. ನೀನು ಆದರದೊಡನೆ ಕೇಳುವುದರಿಂದ ನಾನು ಹೇಳಬೇಕಾಗಿರುವುದು. ಹೇಳುವೆನು, ಕೇಳು. ಮದಯಂತಿಯು ಯೌವನಕ್ಕೆ ತಕ್ಕ ಹಾಗೆ ಹಾವಭಾವಗಳನ್ನು ತೋರಿ ಮುಗುಳು ನಗೆಯಿಂದ ಮೃದುಮಧುರವಾದ ಪ್ರಿಯಾಲಾಪಗಳನ್ನು ಆಡುವುದನ್ನೂ, ಕಮಲಾಕಾಂತರಾಯನು ಅದನ್ನು ನೋಡಿ ಹಿಗ್ಗುತ್ತಾ ಪ್ರೇಮಪೂರಿತವಾದ ಕಟಾಕ್ಷವನ್ನು ಆಕೆಯ ಮೇಲೆ ಬೀರುವುದನ್ನೂ ಆವಾತ ನೋಡಿದರೂ ನನ್ನಂತೆಯೇ ಅಭಿಪ್ರಾಯಪಡುವನು.

ನಾನು ಇಲ್ಲಿಗೆ ಬಂದು ನಿಮ್ಮ ಮನೆಯಲ್ಲಿ ಕಾಲಿಟ್ಟ ಕೂಡಲೆ ಕಮಲಾಕಾಂತ ರಾಯರ ಕೋಣೆಯ ಬಾಗಿಲ ಹತ್ತಿರಕ್ಕೆ ಬಂದು ನೋಡಲಾಗಿ ಅವರಿಬ್ಬರೂ

ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು. ಇದಕ್ಕೆ ಅಡ್ಡಿಯಾಗಬಾರದೆಂದು ನಾನು ಹೊರಗಡೆಯೇ ನಿಂತುಬಿಟ್ಟೆನು. ಇದರಿಂದ ಅವರಿಬ್ಬರೂ ಶೀಘ್ರದಲ್ಲಿಯೇ ಸಂಬಂಧವನ್ನು ಬಳೆಯಿಸುವರೆಂದು ಮನದಲ್ಲಿ ತಂದುಕೊಂಡೆನು.

ಮಾರ—ಮಿತ್ರನೇ! ನೀನು ಎಷ್ಟೇ ಹೇಳಿದರೂ, ನನಗೆ ನುಟ್ಟಿಗೆ ಈ ಸಂಬಂಧದಲ್ಲಿ ಕೊಂಚವಾದರೂ ಇಷ್ಟವಿಲ್ಲ.

ರಾಮ—ಇಷ್ಟವಿಲ್ಲದಿರಲು ಕಾರಣವೇನು, ಮಹಾಶಯ?

ಮಾರ—ಕಾರಣವೇ? ಹೇಳುವೆನು, ಕೇಳು. ನಮ್ಮ ಅಜ್ಜನು ಮದಯಂತಿಯನ್ನು ವಿವಾಹ ಮಾಡಿಕೊಂಡ ಕೂಡಲೆ, ಆತನ ಸಂಪತ್ತೆಲ್ಲವೂ ಆಕೆಯ ವಶವಾಗುವುದು. ಆತನ ಸಂಪತ್ತಿಗೆ ನ್ಯಾಯಸಮ್ಮತನಾದ ಉತ್ತರಾಧಿಕಾರಿಯೆನಿಸಿದ ನನಗೆ ಸರ್ವನಾಶವೇ ಆಗಿಹೋಗುವುದು. ಬಳಿಕ ನಾನು ಮದಯಂತಿಯ ಭಿಕ್ಷಕ್ಕೆ ಕೈಯೊಡ್ಡಬೇಕು—ಇಲ್ಲವೇ, ತಲೆಯ ಮೇಲೆ ಗುಡ್ಡೆಯನ್ನಾದರೂ ಹಾಕಿಕೊಂಡು ಮನೆಯನ್ನು ಬಿಟ್ಟು ಹೊರಟುಹೋಗಬೇಕು.

ರಾಮ—ಮಾರಕುಮಾರ! ಈ ಸಂಬಂಧವನ್ನು ತಪ್ಪಿಸುವುದಕ್ಕೆ ಆವ ಉಪಾಯವೂ ಇಲ್ಲವೇ?

ಮಾರ—ನನಗೊಂದೂ ಗೊತ್ತಾಗಲೊಲ್ಲದು.

ರಾಮ—ಹಾಗಾದರೆ ನೀನು ಹೊಟ್ಟೆಗಿಲ್ಲದೆ ಮನೆಮನೆಗೂ ತಿರುಗಿ ತಿರುಗಿ ಭಿಕ್ಷೆಯೆತ್ತಲೇಬೇಕಾಗುವುದು.

ಮಾರ—ಅಷ್ಟೇ ಅಲ್ಲದೆ ಮತ್ತೊಂದು ವಿಷಯವೂ ಇರುವುದು. ನಾನು ಉತ್ತರಾಧಿಕಾರಿಯಾಗುವೆನೆಂಬ ಭರವಸೆಯಿಂದ ಕಂಡ ಕಂಡಲ್ಲಿ ಸಾಲಸೋಲಗಳನ್ನು ಮಾಡಿಬಿಟ್ಟಿರುವೆನು. ನಮ್ಮ ಸಂಪತ್ತು ಮದಯಂತಿಯ ಕೈ ಸೇರುವುದಾದರೆ, ನಾನು ಸಾಲವನ್ನು ತೀರಿಸಲಾರೆನು. ಬಳಿಕ ಸಾಲಗಾರರು ನನ್ನನ್ನು ಶೂಲಕ್ಕೇರಿಸಿ ಬಿಡುವರು. ಆದುದರಿಂದ, ನಾನು ಈ ಅನರ್ಥ ಪರಂಪರೆಯಿಂದ ಪಾರಾಗುವುದಕ್ಕೆ ಆವ ಮಾರ್ಗವೂ ತಲೆಗೆ ಹತ್ತಿಲ್ಲ.

ರಾಮ—(ದುಃಖವನ್ನು ನಟಿಸಿ) ಮಾರ ಮಹಾಶಯ! ಈ ವಿಷಯದಲ್ಲಿ ನನ್ನಿಂದ ನಿನಗೆ ಸಾಹಾಯ್ಯವೇನಾಗಬೇಕೆಂಬುದನ್ನು ತಿಳಿಸುವುದಾದರೆ, ನಾನು ಯೋಗ್ಯತೆ ಮೀರಿ ನಿನಗೆ ಒತ್ತಾಸೆಯಾಗಿ ನಿಲ್ಲುವೆನು.

ರಾಮರಮಾರಮಣನು ಮಾರಕುಮಾರನ ಮುಖೋಲ್ಲಾಸಕ್ಕಾಗಿ ಈ ರೀತಿಯಾಗಿ ಮಾತನಾಡಿದವನಾದರೂ, ಅವನ ಅಂತರ್ಯವು ಬೇರೆಯ ವಿಧವಾಗಿಯೇ ಇದ್ದಿತು. ಕಮಲಾಕಾಂತನು ಮದಯಂತಿಯನ್ನು ವಿವಾಹವಾಗಬೇಕೆಂಬುದೇ ಅವನ ಪರಮೋದ್ದೇಶವು. ಕಾರಣವೇನೆಂದರೆ—ಮದಯಂತಿಯು ಕಮಲಾಕಾಂತನನ್ನು ವರಿಸುವುದಾದರೆ, ಆತನ ಸಂಪತ್ತೆಲ್ಲವೂ ಮದಯಂತಿಯ ಕೈಸೇರುವುದು. ಇದರಿಂದ ತನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಗುವುದು. ಆವ ದಡ್ಡನು ತಾನೇ ತನಗೆ ಬರತಕ್ಕ ಲಾಭವನ್ನು ಹೋಗಲಾಡಿಸಿಕೊಂಡು ಹೆರರಿಗೆ ಉಪಕಾರಮಾಡಿಯಾನು ? ಸ್ವಾರ್ಥವನ್ನಾದರೂ ತ್ಯಾಗಮಾಡಿ ಪರಾರ್ಥಕ್ಕಾಗಿ ಜನ್ಮವೆತ್ತಿ ಕೆಲಸಮಾಡುವ ಮಹನೀಯರು ನಮಗೆ ಪೂಜ್ಯರೆನಿಸಿಕೊಂಡು ಒಂದೆಡೆಯಲ್ಲಿರಲಿ.

ರಾಮರಮಾರಮಣನ ವೇಷವನ್ನು ತಾಳಿದ್ದ ಭೂತನಾಥನು ಮಾರಕುಮಾರನ ಮನೋರಥವು ಈಡೇರದೇ ಇರುವುದಕ್ಕೆ ಆವ ಮಾರ್ಗವನ್ನು ಅವಲಂಬಿಸಬೇಕೋ ಅದನ್ನು ಸರಿಯಾಗಿ ಚಿಂತಿಸಿ ತನ್ನ ಕಾರ್ಯವು ಸುಮುಖವಾಗಿ ನೆರವೇರುವ ಬಗೆಗೆ ಯತ್ನಮಾಡ ತೊಡಗಿದನು.

---

## ನಾಲ್ಕನೆಯ ಸಂಧಿ

### ಬಳೆಗಾರ್ತಿ

"ಬಳೇ ಬೇಕೆ ಬಳೇ ? ಬೊಂಬಾಯಿ ಬಳೆ, ಸುರಿ ಮಳೆ !" ಎಂದು ಕೂಗುತ್ತಾ ಹದಿನೈದು ವರ್ಷದ ಹುಡುಗಿಯೊಬ್ಬಳು ಬೀದಿಯಲ್ಲಿ ಬರುತ್ತಿದ್ದಳು.

ಈ ಸಮಯದಲ್ಲಿ ಕುಂದನಂದಿನಿಯ ದಾಸಿಯೊಬ್ಬಳು ಅದೇ ಮಾರ್ಗವಾಗಿ ತನ್ನ ಕೆಲಸದ ಮೇಲೆ ಹೋಗುತ್ತಿದ್ದಳು. ಕುಂದನಂದಿನಿಯು ಕಳ್ಳರ ಕೈಯಿಂದ ಬಿಡುಗಡೆಯನ್ನು ಹೊಂದಿ ತನ್ನ ಮನೆಗೆ ಬಂದ ಸಂಗತಿಯನ್ನು ನಮ್ಮ ಪ್ರಿಯ ಪಾಠಕ ಮಹಾಶಯರು ಇನ್ನೂ ಜ್ಞಾಪಕದಲ್ಲಿಟ್ಟಿರಬಹುದು. ಕುಂದಳು ಮನೆಗೆ ಬಂದ ಕೂಡಲೆ ರೋಗದಿಂದ ದುರ್ಬಲೆಯಾದಳು. ಕಮಲಾಕಾಂತನು ಈಕೆಯನ್ನು ವಾಯು ಪರಿವರ್ತನೆಗಾಗಿ ತನ್ನ ಆತ್ಮೀಯನೊಬ್ಬನ ಮನೆಗೆ ಕಳುಹಿಸಿಕೊಟ್ಟನು ; ಆಗಿಂದಾಗ ಆಕೆಯ ಸ್ಥಿತಿಗತಿಗಳನ್ನೂ ಅರಿತುಕೊಳ್ಳುತ್ತಿದ್ದನು.

ಕುಂದನಂದಿನಿಯು ನೂತನ ಸ್ಥಲದಲ್ಲಿ ಆರೋಗ್ಯವನ್ನು ಪಡೆದುಕೊಂಡು ಆನಂದದಿಂದಿರುತ್ತಿದ್ದಳು. ಆಕೆಗೆ ಮದಯಂತಿಯ ಸಹವಾಸವಿಲ್ಲದಿದ್ದುದರಿಂದ,

ರೋಗವು ಬೇಗನೆಯೇ ವಾಸಿಯಾಯಿತೆಂದು ಹೇಳಿದರೂ ಅತ್ಯುಕ್ತಿಯಾಗ ಲಾರದು.

ಕುಂದನಂದಿನಿಗೆ ವಿಶ್ವಾಸಕ್ಕೆ ಪಾತ್ರವೆನಸಿದ ಇಬ್ಬರು ದಾಸಿಯರಿದ್ದರು. ಅವರಲ್ಲಿ ಒಬ್ಬಳು ಕುಂದಳ ಬಳಿಯಲ್ಲಿಯೇ ಇದ್ದಳು; ಮತ್ತೊಬ್ಬಳು ಕಮಲಾ ಕಾಂತನ ಮನೆಯಲ್ಲಿರುತಿದ್ದಳು. ಈಕೆಗೆ ಮದಯಂತಿಯಲ್ಲಿಯೂ ವಿಶ್ವಾಸವಿದ್ದಿತು.

ಈ ದಾಸಿಯು ಮದಯಂತಿಯ ಕೆಲಸಕ್ಕಾಗಿ ಹೊರಗೆ ಹೊರಟಿದ್ದಳು. ಈ ಕೆಯ ನಡೆವಳಿಯು ಅಷ್ಟಾಗಿ ಶುದ್ಧವಾಗಿರಲಿಲ್ಲ. ಈಕೆಯು ವಿಧವೆಯಾಗಿದ್ದರೂ ಕೈಯಲ್ಲಿ ಬಳೆಗಳೂ, ಕತ್ತಿನಲ್ಲಿ ಸರವೂ, ಮೂಗಿನಲ್ಲಿ ಮೂಗುತಿಯೂ ಆಶ್ರಯ ವನ್ನು ಪಡೆದಿದ್ದುವು. ಹುಡುಗಿಯು ಬಳೆಮಾರುತ್ತಿರುವುದನ್ನು ನೋಡಿ ಈ ದಾಸಿಗೆ ಬಳೆ ತೊಟ್ಟುಕೊಳ್ಳಬೇಕೆಂದು ಆಸೆಯಾಯಿತು. ಆದುದರಿಂದ ದಾಸಿಯು ಬಳೆಗಾರ್ತಿಯನ್ನು ಕುರಿತು—ನಿನ್ನಲ್ಲಿ ಎಂಥೆಂಥಾ ಬಳೆಗಳಿರುವುವು? ಅವುಗ ಳನ್ನು ತೋರು. ನಾನು ಕಣ್ಣಾರೆ ನೋಡಿ ಆರಿಸಿಕೊಳ್ಳುವೆನು, ಎಂದಳು.

ಬಳೆಗಾರ್ತಿಯು ಸಂತೋಷದಿಂದ—ನೋಡಮ್ಮಾ! ಒಳ್ಳೆಯ ಬಳೆಗಳು ನನ್ನಲ್ಲಿರುವುವು. ಅರಗಿನ ಬಳೆ, ಕನ್ನಡಿ ಬಳೆ, ಗಾಜಿನ ಬಳೆ, ಬೊಂಬಾಯಿ ಬಳೆ, ಸಕಲಾತಿ ಬಳೆ, ರೇಷ್ಮೆ ಬಳೆ, ತಳಕಿನ ಬಳೆ, ಕುಸರಿ ಬಳೆ, ಕೊಂಬಿನ ಬಳೆ ಮೊದ ಲಾದ ಸೊಗಸಿನ ಬಳೆಗಳು ನನ್ನಲ್ಲಿರುವುವು. ನೀನು ಆವುದನ್ನು ಬಯಸಿದರೂ ನಾನು ಅದನ್ನು ತೊಡಿಸುವೆನು. ಬಳೆಯ ಬೆಳೆಯು ಸುರಿಮಳೆಯಾಗಿ ಹೋಗಿರು ವುದು. ನಿನಗೆ ಇಷ್ಟವಿರುವುದಾದರೆ, ನಿನ್ನ ಸುಂದರವಾದ ಕೈಗೆ ಸುಂದರತರ ವಾದ ಬಳೆಗಳನ್ನೇ ತೊಡಿಸುವೆನು. ಅದನ್ನು ನೋಡಿಯೇ ಎಲ್ಲರೂ ನಿನ್ನನ್ನು—

ದಾಸಿ—(ಅಡ್ಡಗಿಸಿ) ಮಾತಿನ ಮಲ್ಲಿ! ನಿನ್ನ ಚೆಂದದ ಮಾತು ಸಾಕು. ನನ್ನ ಕೈಗಳಿಗೆ ಗುತ್ತನಾಗಿ ತೊಡಿಸಬೇಕು.

ಬಳೆ—ಅದೇ ನಮ್ಮ ಕೆಲಸವು; ಹಾಗೆ ಮಾಡದಿದ್ದರೆ ನಮ್ಮ ಹೊಟ್ಟೆ ತುಂಬುವ ಬಗೆ ಹೇಗೆ; ತಾಯಿ? ಬೀದಿಯಲ್ಲಿ ಕುಳಿತರೆ ಸರಿಹೋಗುವುದಿಲ್ಲ. ನಡೆ, ನಿಮ್ಮ ಮನೆಗಾದರೂ ಹೋಗುವ.

ದಾಸಿ—ನಮ್ಮ ಮನೆಯು ಇಲ್ಲಿಗೆ ದೂರವಾಗಿರುವುದರಿಂದ, ಅಲ್ಲಿಗೆ ಹೋಗಲು ಸಾಧ್ಯವಿಲ್ಲ.

ಬಳೆ—ನಿಮ್ಮ ಮನೆಯೆಲ್ಲಮ್ಮಾ?

ದಾಸಿ—ಕಮಲಾಕಾಂತ ಚಕ್ರವರ್ತಿಯವರ ಮನೆಯನ್ನು ಬಲ್ಲೆಯಷ್ಟೇ? ನಾನು ಆ ಮನೆಯ ದಾಸಿಯು.

ಬಳೆ—ಕಮಲಾಕಾಂತಪ್ಪನವರೇ? ನಾನು ಅವರ ಹೆಸರನ್ನು ಮಟ್ಟಿಗೆ ಕೇಳಿರುವೆನು. ತಾಯಿ! ಅವರ ಮನೆಯಿರುವ ಸ್ಥಲವು ನನಗೆ ತಿಳಿಯದು. ನನಗೆ ಆ ಮನೆಯನ್ನು ತೋರಿಸಮ್ಮಾ.

ದಾಸಿ—ಆ ಮನೆಯನ್ನು ಕಂಡುಕೊಂಡು ನಿನಗಾಗುವುದೇನು? ಇಲ್ಲಿಯೇ ಬಳೆಯನ್ನು ತೊಡಿಸಿ ಹಣವನ್ನು ತೆಗೆದುಕೊಂಡು ಹೊರಡು.

ಬಳೆ—ಅಲ್ಲಿ ನನಗೊಂದು ಕೆಲಸವುಂಟು.

ದಾಸಿ—ಅದೇನು ಕೆಲಸ?

ಬಳೆ—ಅಲ್ಲಿ ಭೂತನಾಥನೆಂಬುವನು ಇರುವನೇ? ಇರುವುದಾದರೆ, ನಾನು ಆತನನ್ನು ನೋಡಬೇಕು.

ದಾಸಿ—ಅಲ್ಲಿ ಭೂತನಾಥನೆಂಬ ಹೆಸರಿನವರಾರೂ ಇದ್ದಂತೆ ಕಂಡು ಬರಲಿಲ್ಲ. ಆ ಮನೆಯಲ್ಲಿ ಮೂವರೇ ಗಂಡಸರಿರುವರು. ಕಮಲಾಕಾಂತರಾಯರು, ಆತನ ಮಗನ ಮಗನಾದ ಮಾರಕುಮಾರರಾಯರು, ಅಲ್ಲದೆ, ರಾಮರಮಾರಮಣರಾಯರೆಂದು ಮತ್ತೊಬ್ಬರು ಹೊಸದಾಗಿ ಬಂದಿರುವರು. ಅವರು ಮಾರಕುಮಾರರಾಯರ ಬಾಲ್ಯದ ಸ್ನೇಹಿತರಂತೆ. ಇವರುಗಳು ಹೊರತಾಗಿ ಆ ಮನೆಯಲ್ಲಿ ಮತ್ತಾವ ಗಂಡಸರೂ ಇಲ್ಲ.

ಬಳೆ—ರಾಮರಮಾರಮಣರಾಯ? ಹೆಸರೇನೋ ಮುದ್ದಾಗಿರುವುದು. ಆತನು ಆ ಮನೆಯಲ್ಲಿ ಎಷ್ಟು ದಿನಗಳಿಂದ ವಾಸವಾಗಿರುವನು? ಹೇಳಮ್ಮಯ್ಯಾ!

ದಾಸಿ—ಆತನು ಬಂದು ತುಂಬಾ ದಿನಗಳೇನೂ ಆಗಿಲ್ಲ; ಇನ್ನೂ ಎರಡು ಮೂರು ದಿನಗಳೇ ಆಗಿರುವುವು. ನೀನು ಇಷ್ಟನ್ನು ಕೇಳುವುದಕ್ಕೆ ಕಾರಣವೇನಮ್ಮಾ?

ಬಳೆ—ಆತನು ನೋಡುವುದಕ್ಕೆ ಉದ್ದವಾಗಿರುವನಲ್ಲವೇ? ಅವನ ಮುಖದಲ್ಲಿ ಗಡ್ಡ ಮೀಸೆಗಳಿರುವುವಲ್ಲವೇ? ದಟ್ಟವಾಗಿ ಬಳೆದಿರುವ ಹುಬ್ಬುಗಳಲ್ಲಿ ಆತನ ಕಣ್ಣುಗಳು ಅಡಗಿಹೋಗಿರುವುವಲ್ಲವೇ? ಆತನ ಮೈಬಣ್ಣವು ಅಷ್ಟು ಕಪ್ಪೂ ಅಲ್ಲ, ಅಷ್ಟು ಕೆಂಪೂ ಅಲ್ಲ, ಅಷ್ಟು ಬಿಳಿದೂ ಅಲ್ಲ.

ದಾಸಿ—ಬಳೆಗಾರಮ್ಮ! ನೀನು ನಿನ್ನ ಭೂತನಾಥನನ್ನು ವರ್ಣಿಸುತ್ತಿರಬಹುದು. ನಮ್ಮಲ್ಲಿರುವವರು ಭೂತನಾಥನಲ್ಲ; ಅವರ ಹೆಸರು ಶ್ರೀಯುತ ರಾಮರಮಾರಮಣರಾಯರು.

ಬಳೆ—ತಾಯಿ! ನನಗೆ ಹೆಸರು ಮರೆತಿದ್ದಿತು. ನೀನು ಹೇಳಿದಾತನನ್ನೇ ನಾನು ನೋಡಬೇಕೆಂದಿರುವೆನು. ನೀನು ನನಗೊಂದು ಉಪಕಾರವನ್ನು ಮಾಡಬಲ್ಲೆಯಾ? ಹಾಗೆ ಮಾಡಿಕೊಡುವುದಾದರೆ, ನಾನು ನಿನ್ನಿಂದ ಹಣವನ್ನು ತೆಗೆದುಕೊಳ್ಳುವುದಿಲ್ಲ.

ದಾಸಿ—ಅದೆಂತಹ ಮಾತು! ನೀನು ಹೊಟ್ಟೆಗಾಗಿಯೇ ವ್ಯಾಪಾರ ಮಾಡುತ್ತಿರುವುದು. ನಿನಗೆ ಸರಿಯಾದ ಬೆಲೆಯನ್ನು ಕೊಡದೆ ನಾನು ಬಳೆಯನ್ನು ಹೇಗೆ ತಾನೇ ತೊಡುವುದಕ್ಕಾದೀತು? ನಾನು ಬೆಲೆಯನ್ನು ಸಲ್ಲಿಸಿಯೇ ಬಳೆಗಳನ್ನು ತೊಟ್ಟೇನು. ನಿನ್ನ ಕೆಲಸವಾದರೂ ಎಂಥದೆಂಬುದನ್ನು ತಿಳಿಸು.

ಬಳೆ—ಅವರು ನನ್ನನ್ನು ಒಂದು ಸಲ ನೋಡಿಕೊಂಡು ಹೋಗಬೇಕೆಂದು ತಿಳಿಸಬೇಕು. ಇಷ್ಟೇ ನನ್ನ ಕೆಲಸವು. ನಾನು ಅವರನ್ನು ಎಲ್ಲೆಲ್ಲಿಯೋ ಹುಡುಕಿ ಹುಡುಕಿ ಸಾಕಾಯಿತು. ನನಗೆ ಅವರು ಸಿಕ್ಕಲಿಲ್ಲ. ನೀನು ಇಷ್ಟು ಕೆಲಸ ಮಾಡಿಕೊಟ್ಟರೆ ನನಗೆ ಎಷ್ಟೋ ಉಪಕಾರಮಾಡಿದಂತಾಗುವುದು, ತಾಯಿ!

ದಾಸಿ—ನಾನು ಮನೆಯ ದಾಸಿಯು. ಗಂಡಸರೊಡನೆ ಮುಖಕೊಟ್ಟು ಹೇಗೆ ಮಾತನಾಡಲಮ್ಮಾ?

ಬಳೆ—ನಾನು ಬಡ ಹೆಂಗುಸು. ನನಗೆ ಉಪಕಾರ ಮಾಡಿದರೆ, ನಿನಗೆ ಭಗವಂತನು ಮಂಗಳವನ್ನುಂಟುಮಾಡಿಯಾನು? ಬಡವರು ಬಡವರಿಗೆ ಒತ್ತಾಸೆಯಾಗದಿದ್ದರೆ ಮತ್ತಾರಾಗಬೇಕು?

ದಾಸಿ—ಒಂದು ವೇಳೆ ಅವರು ನನ್ನ ಮಾತನ್ನು ಕೇಳಿ ರೇಗಿದರೆ?

ಬಳೆ—ರೇಗುವುದೇಕಮ್ಮಾ? ಆರ ಸ್ವತ್ತನ್ನು ಆರು ತಿಂದಿರುವರು? ಅಂತಹ ವಿಷಯವೇನೂ ಇಲ್ಲ. ನಾನು ಅವರನ್ನು ಪ್ರೀತಿಸುತ್ತಿರುವೆನು. ಅವರೂ ನನ್ನಲ್ಲಿ ಎಷ್ಟೋ ಪ್ರೀತಿಯುಳ್ಳವರಾಗಿರುವರು. ಇಷ್ಟರಲ್ಲಿಯೇ ನಮ್ಮಿಬ್ಬರಿಗೂ ವಿವಾಹವಾಗುವ ಸಂಭವವುಂಟು.

ಹೀಗೆ ಮಾತನಾಡಿದ ಬಾಲಿಕೆಯು ಆರಿರಬಹುದೆಂಬ ಶಂಕೆಯುಂಟಾಗಬಹುದು. ಈಕೆಯು ಮೊದಲನೆಯ ಖಂಡದ ಮೊದಲನೆಯ ಸಂಧಿಯಲ್ಲಿ ಕಳ್ಳತನಕ್ಕೆ ಹೊರಟಿದ್ದ ಮೂವರನ್ನೂ ಬಂಧನದಿಂದ ಬಿಡಿಸಿದ ಹೈಮವತಿ.

ಹೈಮವತಿಯ ಮಾತನ್ನು ಕೇಳಿ ದಾಸಿಯು ಬೆರಗಾಗಿ ನಿಂತಳು. "ಹುಡುಗಿ ಯಾದರೋ ಚದುರೆಯಾಗಿ ಕಾಣುವಳು. ಈಕೆಯು ಸುಳ್ಳನ್ನು ಹೇಳುತ್ತಿರ ಬಹುದೇ? ಇಲ್ಲವೇ ರಾಮರಮಾರಮಣನ ವಿಷಯದಲ್ಲಿ ರಹಸ್ಯವೇನಾದರೂ ಅಡಗಿರಬಹುದೇ?" ಎಂದು ದಾಸಿಯು ಚಿಂತಿಸುತ್ತಾ ಆವ ಮಾತನ್ನೂ ಆಡದೆ ಸುಮ್ಮನೆ ನಿಂತಿರುವುದನ್ನು ನೋಡಿ ಹೈಮವತಿಯು ಮತ್ತೆ ಮಾತನಾಡಿದಳು. ಅದು ಈರೀತಿಯಾಗಿದ್ದಿತು:—

"ತಾಯೀ! ನಿನ್ನ ಪ್ರಸನ್ನವಾದ ಮುಖವನ್ನು ನೋಡಿದರೆ, ನನ್ನ ತಂದೆ ತಾಯಿಗಳು ಜ್ಞಾಪಕಕ್ಕೆ ಬರುತ್ತಿರುವರು. ನಾನು ತಾಯಿತಂದೆಗಳನ್ನು ಕಳೆದು ಕೊಂಡ ತಬ್ಬಲಿಯಾದ ಬಾಲಿಕೆ. ನಾನು ತಾಯಿಯ ಮುಂದೆ ಹೇಳುವ ಹಾಗೆ ನಾಚುಗೆಯನ್ನು ದೂರಮಾಡಿ ನನ್ನ ಗುಟ್ಟೆಲ್ಲವನ್ನೂ ತಿಳಿಸಿದೆನು. ನೀನು ಬೇಗ ನೆಯೇ ಬಳೆಯನ್ನು ತೊಟ್ಟುಕೊಂಡು ನನ್ನ ಅಲ್ಪ ಮನೋರಥವನ್ನು ನೆರವೇರಿಸಿ ಕೊಡಮ್ಮಾ, ತಾಯೀ!"

ಇಷ್ಟು ಹೇಳುವಷ್ಟರೊಳಗಾಗಿಯೇ ಹೈಮವತಿಯ ಕಂಠವೂ ಕುಗ್ಗಿತು, ಮುಖವೂ ತಗ್ಗಿತು, ವಿಷಾದವೂ ಮನವನ್ನಾವರಿಸಿತು. ದಾಸಿಯು ಇದನ್ನು ನೋಡಿ ಮನಗರಗಿದವಳಾಗಿ—ಮಗು! ನಾನು ನಿನ್ನ ಕೆಲಸವನ್ನು ಮಾಡಿಕೊಡು ವೆನು. ನಾನು ಹೇಳಬೇಕಾದುದೇನು? ಮತ್ತೊಂದು ಸಲ ಹೇಳು, ಎಂದಳು.

ಬಳೆ—ಹೆಚ್ಚಿನ ವಿಷಯವೇನೂ ಇಲ್ಲವಮ್ಮಾ! ನಾನು ಇಲ್ಲಿಯೇ ನಿಂತಿರುವೆನು; ಇಲ್ಲಿಗೆ ಬಂದು ನನ್ನನ್ನು ಒಂದು ಸಲ ನೋಡಿಕೊಂಡು ಹೋಗ ಬೇಕೆಂದು ಅವರಿಗೆ ತಿಳಿಸಿದರೆ ಸಾಕು.

ದಾಸಿ—ನೀನು ಎಲ್ಲಿ ನಿಂತಿರುವೆ? ಈ ಕೊಳದ ತೀರದಲ್ಲಿ ಕಾದುಕೊಂಡಿರ ಬಲ್ಲೆಯಾ?

ಬಳೆ—ಅಹುದಮ್ಮಾ! ನಾನು ಈ ರಾತ್ರಿಯ ಒಂಬತ್ತು ಗಂಟೆಯ ವರೆಗೂ ಈ ಕೊಳದ ತೀರದಲ್ಲಿಯೇ ಕಾದುಕೊಂಡು ನಿಂತಿರುವೆನು.

ದಾಸಿ—ನಿನ್ನ ಹೆಸರನ್ನು ಏನೆಂದು ಹೇಳಲಿ? ನಾನು ಏನ ಹೇಳಿದರೆ ಅವರಿಗೆ ನಿನ್ನ ಗುರುತು ಗೊತ್ತಾದೀತು?

ಬಳೆ—ನನ್ನ ಹೆಸರು ಹೈಮವತಿ. ಆ ಹೆಸರಿನಿಂದಲೇ ಅವರು ನನ್ನನ್ನು ಅರಿತುಕೊಳ್ಳುವರು.

ಹೀಗೆ ಹೇಳಿ ಹೈಮವತಿಯು ದಾಸಿಗೆ ಬಳೆಗಳನ್ನು ತೊಡಿಸಿದಳು. ದಾಸಿಯು ಅದರ ಬೆಲೆಯನ್ನು ಸಲ್ಲಿಸಿ ಅಲ್ಲಿಂದ ಮುಂದಕ್ಕೆ ತೆರಳಿದಳು.

---

## ಐದನೆಯ ಸಂಧಿ

### ಅನುಸಂಧಾನ

ದಾಸಿಯು ಮನೆಗೆ ಹಿಂದಿರುಗಿ ಬಂದು ರಾಮರಮಾರಮಣರಾಯನನ್ನು ಹುಡುಕಿದಳು. ರಾಮರಮಾರಮಣನು ಏಕಾಂತವಾಗಿ ಒಂದೆಡೆಯಲ್ಲಿ ಕುಳಿತು ಕೊಂಡು ಹೊತ್ತನ್ನು ಕಳೆಯುವುದಕ್ಕಾಗಿ ಆವುದೋ ಒಂದು ಪುಸ್ತಕವನ್ನು ಓದುತ್ತಿದ್ದನು. ದಾಸಿಯು ಆತನ ಬಳಿಗೆ ಬಂದು ನಿಲ್ಲಲು, ರಾಮರಮಾರಮಣನು ತಲೆಯೆತ್ತಿ ನೋಡಿ—ವಿಷಯವೇನು ? ಎಂದು ಕೇಳಿದನು.

ದಾಸಿ—ತಮ್ಮೊಡನೆ ಮಾತನಾಡತಕ್ಕುದಿದೆ.

ರಾಮ—ಹಾಗೆಯೇ ? ಅದೇನು ಮಾತು ?

ದಾಸಿ—ತಾವು ನನ್ನಲ್ಲಿ ಅಪರಾಧವನ್ನು ಎಣಿಸಲಾಗದು. ನಾನು ಅಲ್ಲಿ ಮಾತ ಕೊಟ್ಟಿದ್ದಂತೆ ತಮ್ಮಲ್ಲಿಗೆ ಬೇಗನೆಯೇ ಬಂದಿರುವೆನು.

ರಾಮ—ಈ ಮಾತುಗಳೆಲ್ಲವೂ ಆ ಮೇಲೆ ಸಾವಕಾಶವಾಗಿ ನಡೆಯ ಬಹುದು. ವಿಷಯವೇನು ?

ದಾಸಿ—ಒಬ್ಬ ಹುಡುಗಿಯು ತಮ್ಮನ್ನು ನೋಡಬೇಕೆಂದು ಬಯ ಸುತ್ತಿರುವಳು.

ರಾಮ—(ಅಚ್ಚರಿಯಿಂದ) ಹುಡುಗಿಯೇ! ಅದೆಂತಹ ಹುಡುಗಿ ? ಆಕೆಯು ನಿನ್ನಂತೆಯೇ ಸುಂದರಿಯಾಗಿರುವಳೇ, ಹೇಗೆ ?

ದಾಸಿ—ಸ್ವಾಮಿ ! ನಾನು ತಮ್ಮ ಪರಿಹಾಸವಚನಕ್ಕೆ ಸರಿಯಾದ ಪಾತ್ರವಲ್ಲ. ಆ ಹುಡುಗಿಯು ಅನಾಥೆಯು. ಬೀದಿಬೀದಿಗಳಲ್ಲಿ ಬಳೆಗಳನ್ನು ಮಾರಿಕೊಂಡು ಜೀವಿಸುತ್ತಿರುವಳು.

ರಾಮ—ಆಕೆಯ ಹೆಸರು ನಿನಗೆ ಗೊತ್ತೇ ?

ದಾಸಿ—ಗೊತ್ತುಂಟು ; ಆಕೆಯ ಹೆಸರು ಹೈಮವತಿ. ಇಂದಿನ ರಾತ್ರಿ ಒಂಬತ್ತು ಗಂಟೆಯ ವರೆಗೂ ಆಕೆಯು ಇಲ್ಲಿಂದ ಒಂದು ಮೈಲಿಯಷ್ಟು ದೂರದಲ್ಲಿರುವ ಅದೊಂದು ಕೊಳದ ತೀರದಲ್ಲಿ ಕಾದುಕೊಂಡಿರುವಳಂತೆ. ಅಷ್ಟರೊಳಗಾಗಿ ತಾವು ಆಕೆಯನ್ನು ಒಂದು ಸಲ ನೋಡಬೇಕೆಂದು ನನ್ನ ಮೂಲಕವಾಗಿ ಹೇಳಿಕಳುಹಿಸಿರುವಳು.

ರಾಮರಮಾರಮಣನು ದಾಸಿಯ ಬಾಯಿಂದ ಹೈಮವತಿಯೆಂಬ ಶಬ್ದವನ್ನು ಕೇಳಿದ ಕೂಡಲೆ, ಕಂಗೆಟ್ಟ ಮುಖವುಳ್ಳವನಾಗಿ ನಡುಗುತ್ತಾ ತಲೆಯನ್ನು ತಗ್ಗಿಸಿಕೊಂಡು ಸುಮ್ಮನೆ ಕುಳಿತು ಬಿಟ್ಟನು.

ದಾಸಿಯು ಈತನ ದುರವಸ್ಥೆಯನ್ನು ನೋಡಿ ಆಶ್ಚರ್ಯದಿಂದಲೂ ಭಯದಿಂದಲೂ ಕೂಡಿದವಳಾಗಿ—ಸ್ವಾಮಿ! ತಮಗೆ ತಟ್ಟನೆ ಹೀಗಾಗಲು ಕಾರಣವೇನು ? ತಮ್ಮ ಶರೀರದಲ್ಲಿ ಯಾತನೆಯೇನಾದರೂ ಉಂಟಾಗಿದೆಯೇ, ತಿಳಿಸೋಣವಾಗಲಿ ; ಕುಡಿಯುವುದಕ್ಕೆ ತಣ್ಣಗಿರುವ ನೀರನ್ನು ತಂದುಕೊಡುವೆನು, ಎಂದು ನುಡಿದಳು.

ರಾಮರಮಾರಮಣನು ಚತುರತೆಯಿಂದ ತನ್ನ ಮನೋಭಾವವನ್ನು ಅಡಗಿಸಿಕೊಂಡು—ಇಲ್ಲಿಯ ವಾತಾವರಣವು ನನ್ನ ಶರೀರಕ್ಕೆ ಒಂಟಲಿಲ್ಲ. ಆದುದರಿಂದ ಹೀಗಾದುದೇ ಹೊರತು ಯಾತನೆಯೇನೂ ಇಲ್ಲ. ನೀನು ನೀರನ್ನು ತರಬೇಕಾದ ಆವಶ್ಯಕತೆಯಿಲ್ಲ. ಕೂಡಲೆಯೇ ಎಲ್ಲವೂ ಸರಿಹೋಗುವುದು, ಎಂದುತ್ತರವಿತ್ತನು.

ಹೈಮವತಿಯು ದರಿದ್ರದಂಪತಿಗಳ ಕುಮಾರಿಯು. ಈಕೆಗೆ ಎರಡು ವರ್ಷಗಳು ತುಂಬುವುದರೊಳಗಾಗಿ ಈಕೆಯ ವೃದ್ಧ ಮಾತಾಪಿತೃಗಳು ಕಾಲಕ್ಕೆ ಅಧೀನರಾಗಿಬಿಟ್ಟರು. ಭೂತನಾಥನ ತಾಯಿಯೂ ಈಕೆಯ ತಾಯಿಯೂ ಬಾಲ್ಯದಿಂದಲೂ ಸಖಿಯರಾದುದರಿಂದ, ಹೈಮವತಿಯ ತಾಯಿಯು ಸಾಯುವ ಕಾಲದಲ್ಲಿ ತನ್ನ ಮಗಳನ್ನು ಭೂತನಾಥನ ತಾಯಿಯ ತೊಡೆಯ ಮೇಲಿಟ್ಟು ಹೊರಟುಹೋದಳು. ಅಂದು ಮೊದಲು ಭೂತನಾಥನ ತಾಯಿಯೇ ಹೈಮವತಿಯನ್ನು ಕಾಪಿಟ್ಟುಕೊಂಡು ಬರುತ್ತಿದ್ದಳು.

ವಯಸ್ಸು ಹೆಚ್ಚಿದ ಹಾಗೆಲ್ಲಾ ಹೈಮವತಿಯ ಅಂಗೋಪಾಂಗಗಳೆಲ್ಲವೂ ದೃಢವಾಗಿ ಬಳೆದು ನೋಟಕರಿಗೆ ಮನವನ್ನು ಚಲಿಸುವಂತೆ ಮಾಡಿಬಿಡುತಿದ್ದುವು. ಈ ಸೌಂದರ್ಯರಾಶಿಯನ್ನು ನೋಡಿ ಭೂತನಾಥನೂ ಬೆರಗಾಗಿ ವ್ಯಾಮೋಹಿತನಾಗಿ ಬಿಟ್ಟನು. ಆತನ ತಾಯಿಯು ತನ್ನ ಮಗನಿಗೆ ಹೈಮವತಿಯನ್ನು ತಂದುಕೊಳ್ಳ

ಬೇಕೆಂದು ತುಂಬಾ ಆಸೆಯನ್ನಿಟ್ಟುಕೊಂಡಿದ್ದಳು. ಅವಳಿಗೆ ಅಕಾಲಮೃತ್ಯು ವೊದಗಿ ಬಂದುದರಿಂದ, ಆಕೆಯು ತನ್ನ ಇಚ್ಛೆಯು ನೆರವೇರುವುದನ್ನು ಕಣ್ಣಾರೆ ನೋಡದೆಯೇ ಮಡಿದಳು. ತಾಯಿ ಸತ್ತಮೇಲೂ ಭೂತನಾಥನು ಹೈಮವತಿ ಯನ್ನು ಕೈಬಿಡದೆ ರಕ್ಷಿಸಿಕೊಂಡು ಬರುತ್ತಿದ್ದನು.

ಹೈಮವತಿಯೂ ತನ್ನ ಪ್ರೇಮಕಟಾಕ್ಷವನ್ನು ಭೂತನಾಥನ ಮೇಲೆ ಬೀರ ಲಾರಂಭಿಸಿದಳು. ಆತನೂ ಆಕೆಯನ್ನು ಪ್ರೀತಿಸುವಂತೆಯೇ ಕಾಣಿಸಿಕೊಳ್ಳು ತ್ತಿದ್ದನು. ಆದರೆ ಆತನಿಗೆ ದರಿದ್ರರ ಮಗಳನ್ನು ವರಿಸುವುದಕ್ಕೆ ಇಷ್ಟವಿರಲಿಲ್ಲ ವಾದುದರಿಂದ, ಅದನ್ನು ಮಟ್ಟಿಗೆ ಆಕೆಗೆ ತೋರ್ಪಡಿಸುತ್ತಿರಲಿಲ್ಲ. ಭೂತನಾಥನು ಆಕೆಯನ್ನು ಅತಿಯಾಗಿ ಪ್ರೀತಿಸುವನಂತೆ ನಟಿಸಿ ಆಕೆಯನ್ನು ನ್ಯಾಯ ಸಮ್ಮತ ವಲ್ಲದ ಪ್ರಣಯದಲ್ಲಿ ಸಿಲುಕಿಸಿ ಬಿಡಬೇಕೆಂದು ಎಷ್ಟೋ ಪ್ರಯತ್ನಮಾಡಿ ನೋಡಿ ದನು. ಆದರೆ ದರಿದ್ರರಾಗಿದ್ದರೂ ಶುದ್ಧರಾದ ತಾಯಿತಂದೆಗಳಿಂದ ಜನಿಸಿದ ಹೈಮವತಿಯು ವಿಧಿಗನುಸಾರವಾಗಿ ವಿವಾಹವಾಗದೇ ಇರುವ ವರೆಗೂ ಮಾರ್ಗ ತಪ್ಪಿ ನಡೆಯತಕ್ಕವಳಲ್ಲವೆಂದು ಹಠಹಿಡಿದು ಕುಳಿತಳು.

ಭೂತನಾಥನು ಮೋಸ, ಸುಳ್ಳು, ಕಳ್ಳತನ, ಜೂಜಾಟ ಮುಂತಾದ ದುರ್ಮಾರ್ಗದಿಂದ ಹಣವನ್ನು ಸಂಪಾದಿಸುತ್ತಾ ಕಾಲವನ್ನು ಕಳೆಯುತ್ತಿದ್ದನು. ಆಗಿಂದಾಗ ಹೈಮವತಿಯೂ ಆತನಿಗೆ ಒತ್ತಾಸೆಯಾಗಿರುತಿದ್ದಳು. ಆಕೆಯ ಸಾಹಾಯ್ಯದ ಲಕ್ಷಣವನ್ನು ಇದೇ ಗ್ರಂಥದ ಪ್ರಥಮ ಖಂಡದ ಮೂರನೆಯ ಸಂಧಿ ಯಿಂದ, ನಮ್ಮ ಪ್ರಿಯಪಾಠಕ ಮಹಾಶಯರು ಚೆನ್ನಾಗಿಯೂ ಅರಿತುಕೊಳ್ಳ ಬಹುದು. ದುರ್ಮಾರ್ಗದಿಂದ ಹಣವು ಹೆಚ್ಚುತ್ತಾ ಬಂದ ಹಾಗೆಲ್ಲಾ ಭೂತ ನಾಥನ ದುರ್ಮಾರ್ಗವೂ ದೊಡ್ಡದಾಗುತ್ತಾ ಬಂದಿತು. ಈ ವೈಭವದಲ್ಲಿ ಆತನು ಹೈಮವತಿಯನ್ನು ಮರೆಯಲಾರಂಭಿಸಿದನು.

ಈ ಸಮಯದಲ್ಲಿಯೇ ಮದಯಂತಿಯು ಗಂಡನನ್ನು ಕಳೆದುಕೊಂಡು ವಿಧವೆ ಯಾದಳು. ಒಂದಾನೊಂದು ದಿನ ಭೂತನಾಥನು ಕಳ್ಳತನವನ್ನು ಮಾಡಿಕೊಂಡು ತನ್ನ ಮನೆಗೆ ಹಿಂದಿರುಗಿ ಬರುತ್ತಿರುವಾಗ, ಒಂದು ಕೊಳದ ಬಳಿಯಲ್ಲಿ ಮದ ಯಂತಿಯು ಕುಳಿತಿರುವುದನ್ನು ನೋಡಿದನು. ಆಕೆಯೂ ಈತನನ್ನು ನೋಡಿದ ಕೂಡಲೆಯೇ ಪ್ರೇಮಾವಿರ್ಭಾವದಿಂದ ಬೆವತುಹೋದಳು. ಭೂತನಾಥನು ಇದನ್ನು ಕಂಡುಕೊಂಡು ಕೈಯ ಸೈಗೆಯಿಂದ ಆಕೆಯನ್ನು ಗೋಪ್ಯವಾದ ಸ್ಥಾನಕ್ಕೆ ಬರಮಾಡಿಕೊಂಡು ಪರಸ್ಪರಾನುರಾಗದಿಂದ ಬದ್ಧರಾದರು.

ಅಂದು ಮೊದಲು ಭೂತನಾಥನು ಮದಯಂತಿಯನ್ನು ಅತಿಶಯವಾಗಿ ಪ್ರೀತಿಸ ತೊಡಗಿದನು. ಇವರಿಬ್ಬರ ಪರಸ್ಪರ ಪ್ರೀತಿಯು ದಿನ ದಿನಕ್ಕೆ ಹೆಚ್ಚುತ್ತಾ ಬಂದಿತು. ಪರಸ್ಪರ ಪ್ರೀತಿಯ ಫಲವೋ ಎಂಬಂತೆ ಮದಯಂತಿಯು ಕೆಲವು ದಿನಗಳೊಳಗಾಗಿಯೇ ಗರ್ಭವನ್ನು ಧರಿಸಿದಳು. ಮದಯಂತಿಗೆ ದೂರಸಂಬಂಧದ ಒಬ್ಬ ಚಿಕ್ಕಮ್ಮನಿದ್ದಳು. ಆಕೆಯು ಮಗಳ ಕಳಂಕವನ್ನು ನೋಡಿ ಪರಿಪರಿಯಾಗಿ ನಿಂದಿಸಿದಳು; ಎಷ್ಟೋ ಹೆದರಿಸಿ ನೋಡಿದಳು. ಪ್ರಣಯಪಾಶವು ಇದಾವುದರಿಂದಲೂ ಕಿತ್ತುಹೋಗ ತಕ್ಕುದಾಗಿರಲಿಲ್ಲ. ಒಂದು ಸಲ ಕೆಟ್ಟು ಭಯವು ತಪ್ಪಿದ ಮೇಲೆ ಪಾಪಮಾರ್ಗದಿಂದ ದೂರವಾಗಿರತಕ್ಕವರು ಈ ಪ್ರಪಂಚದಲ್ಲಿ ಅತಿವಿರಳರೆಂದೇ ಹೇಳಬೇಕು. ಅದರಲ್ಲಿಯೂ ಹೆಂಗುಸು ಕೇವಲವಾಗಿ ಪ್ರಕೃತಿಯ ಸ್ವರೂಪವೇ ಆಗಿರುವುದರಿಂದ, ಅವರನ್ನು ಅಭ್ಯಸ್ತವಾದ ಮಾರ್ಗದಿಂದ ಹಿಂದಿರುಗಿಸುವುದು ಅಸಾಧ್ಯವಾದ ವ್ಯಾಪಾರವೇ ಸರಿ.

ದುರ್ದೈವವು ಆವಾಗಲೂ ಕೆಟ್ಟವರಿಗೆ ಸಹಾಯವೋ ಎಂಬಂತೆ, ಮದಯಂತಿಯ ಚಿಕ್ಕಮ್ಮನು ವಿಷೂಚಿಕೆಯ ರೋಗದಿಂದ ಮೃತ್ಯುವಿಗೆ ತುತ್ತಾಗಿಬಿಟ್ಟಳು. ಅಂದು ಮೊದಲು ಮದಯಂತಿಯು ಹೋದುದೇ ದಾರಿ, ಮಾಡಿದುದೇ ಕೆಲಸವಾಗಿ ಬಿಟ್ಟಿತು.

ಮದಯಂತಿಯು ಯಥಾ ಸಮಯದಲ್ಲಿ ಒಂದು ಗಂಡು ಮಗುವನ್ನು ಹೆತ್ತಳು. ವಿಧವೆಯು ಮಗುವನ್ನು ಹೆತ್ತಳೆಂಬ ಲೋಕಾಪವಾದಕ್ಕೆ ಹೆದರಿ ಮದಯಂತಿಯು ಆ ಸದ್ಯೋಜಾತನನ್ನು ಒಂದೆಡೆಯಲ್ಲಿ ಬೀಸಾಡಿಬಿಟ್ಟಳು. ಅಕ್ಕಪಕ್ಕದವರು ಇದನ್ನು ಹೇಗೋ ಅರಿತುಕೊಂಡು, ಹೀಗೆಯೇ ಬಿಟ್ಟರೆ ಮದಯಂತಿಯು ಘೋರಪಾಪಕ್ಕೆ ಗುರಿಯಾದಾಳೆಂದು ತಿಳಿದು, ಆಕೆಯನ್ನು ಕಮಲಾಕಾಂತನ ಮನೆಗೆ ತಂದು ಸೇರಿಸಿದರು.

ಮದಯಂತಿಯು ತಟ್ಟನೆ ಕಣ್ಮರೆಯಾದುದನ್ನು ನೋಡಿ ಭೂತನಾಥನು ಎದೆಗೆಟ್ಟನು. ಆಕೆಯನ್ನು ನೋಡದೆ ಅವನ ಮನವು ತಲ್ಲಣಿಸಲಾರಂಭಿಸಿತು. ಆದಕ್ಕಾಗಿ ಆತನು ಮದಯಂತಿಯನ್ನು ದಿಕ್ಕು ದಿಕ್ಕುಗಳಲ್ಲಿಯೂ ಹುಡುಕಿಕೊಂಡು ಅಲೆದಾಡಿದನು, ಆದರೂ ಏನೂ ಪ್ರಯೋಜನವಾಗಲಿಲ್ಲ.

ಹೀಗಿರಲೊಂದು ದಿನ ಮಾತಿಗೆ ಮಾತು ಬಂದು ಭೂತನಾಥನ ಮಿತ್ರನೊಬ್ಬನು ಆತನಿಗೆ ಮದಯಂತಿಯಿರುವ ಸ್ಥಳವನ್ನೂ, ಕಮಲಾಕಾಂತನು ಆಕೆಯನ್ನು ವರಿಸುವನೆಂಬ ಸುದ್ದಿಯನ್ನೂ ತಿಳಿಸಿದನು. ಇದನ್ನು ಅರಿತುಕೊಂಡೇ ಭೂತನಾಥನು ರಾಮರಮಾರಮಣನ ವೇಷವನ್ನು ತಾಳಿಕೊಂಡು ಕಮಲಾ

ಕಾಂತನ ಮನೆಗೆ ಬಂದುದು. ಈ ವಿಷಯವೆಲ್ಲವೂ ನಮ್ಮ ಪ್ರಿಯ ಪಾಠಕ ಮಹಾಶಯರಿಗೆ ಚೆನ್ನಾಗಿಯೂ ಗೊತ್ತಿರುವುದು.

ಭೂತನಾಥನು ಹೊರಟ ಕೂಡಲೆ ಹೈಮವತಿಯ ಮನದಲ್ಲಿ ಬಲುವಾಗಿ ದುಃಖವುಂಟಾಯಿತು. ಕಾರಣವೇನೆಂದರೆ—ಆಕೆಯು ಆತನನ್ನು ತನ್ನ ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದಳು. ಆದುದರಿಂದ ಅವನ ವಿಯೋಗದಲ್ಲಿ ಆಕೆಯು ದಿಕ್ಕೇ ತೋರದವಳಾಗಿ ಎದೆಯೊಡೆದವಳಂತಾದಳು.

ಹೈಮವತಿಯು ಭೂತನಾಥನ ಅನುಸಂಧಾನದಲ್ಲಿ ತೊಡಗಿದಳು. ಎಲ್ಲೆಲ್ಲಿ ಹುಡುಕಿದರೂ ಆರಾರನ್ನು ಕೇಳಿದರೂ ತನ್ನ ಪ್ರಿಯನ ಸುಳಿವೇ ಗೊತ್ತಾಗಲಿಲ್ಲ. ಪ್ರಣಯ ವಿಚ್ಛೇದದಿಂದ ಹೈಮವತಿಯು ದಿನದಿನಕ್ಕೆ ಕೃಶೆಯಾಗಿಯೂ ದುರ್ಬಲೆಯಾಗಿಯೂ ಕೊರಗಲಾರಂಭಿಸಿದಳು.

ಮನೆಯಲ್ಲಿ ವೀರಭದ್ರನಾದರೂ ಇದ್ದಿದ್ದರೆ, ಸಂಸಾರವು ಹೇಗೋ ನಡೆದು ಹೋಗುತ್ತಿದ್ದಿತು. ಆತನಿಗೆ ಸರಕಾರದಲ್ಲಿ ದಂಡನೆಯಾದುದರಿಂದ, ಹೈಮವತಿಯು ತಿನ್ನುವುದಕ್ಕೆ ಮಾರ್ಗವಿಲ್ಲದೆಯೇ ಸಾಯುವ ಹೊತ್ತು ಬಂದಿತು. ದಯಾಮಯನಾದ ಪಕ್ಕದ ಮನೆಯವನೊಬ್ಬನು ಹೈಮವತಿಯಲ್ಲಿ ಕನಿಕರಗೊಂಡವನಾಗಿ ಆಕೆಯು ಹೇಗಾದರೂ ಜೀವನವನ್ನು ಕಲ್ಪಿಸಿಕೊಂಡು ಬದುಕಿರಲೆಂದು ಆಕೆಗೆ ಕೊಂಚ ಹಣವನ್ನು ಮುಂಗಡವಾಗಿ ಕೊಟ್ಟನು.

ಹೈಮವತಿಯು ಜಾಣೆಯಾದುದರಿಂದ ಆ ಹಣವನ್ನು ಮಿತವಾಗಿ ವೆಚ್ಚ ಮಾಡಿ ಬಳೆಗಳನ್ನು ಕೊಂಡು ತಂದು ಅವನ್ನು ಲಾಭಕ್ಕೆ ಮಾರುತ್ತಾ ಹೊಟ್ಟೆ ಹೊರೆದುಕೊಳ್ಳಲಾರಂಭಿಸಿದಳು.

ಹೈಮವತಿಯು ಇಬ್ಬಗೆಯ ಉದ್ದೇಶದಿಂದ ಮನೆ ಮನೆಗೂ ತಿರುಗಿ ಬಳೆಗಳನ್ನು ಮಾರುತ್ತಲೂ ಭೂತನಾಥನನ್ನು ಹುಡುಕುತ್ತಲೂ ಕಾಲಹರಣ ಮಾಡುತ್ತಿದ್ದಳು. ಹೀಗಿರಲೊಂದು ಸಮಯದಲ್ಲಿ ಭೂತನಾಥನು ಕಮಲಾಕಾಂತನ ಮನೆಯಲ್ಲಿರುವುದಾಗಿ ಕೇಳಿ ತಿಳಿದುಕೊಂಡು ಆತನೊಡನೆ ಮಾತನಾಡಬೇಕೆಂದು ಬಯಸುತ್ತಿದ್ದಳು. ಇದಕ್ಕನುಗುಣವಾಗಿಯೇ ಒಂದು ದಿನ ಹೈಮವತಿಯು ಕಮಲಾಕಾಂತನ ಮನೆಯ ದಾಸಿಯನ್ನು ನೋಡಿ ಅವಳಿಗೆ ಬಳೆ ತೊಡಿಸಿ ಭೂತನಾಥನ ವಿಷಯದಲ್ಲಿ ತನಗಿರುವ ಅಭಿಪ್ರಾಯವನ್ನು ತಿಳಿಯಪಡಿಸಿಕೊಂಡಳು. ಈ ವಿಷಯವನ್ನೂ ನಮ್ಮ ಪ್ರಿಯಪಾಠಕ ಮಹಾಶಯರು ಬಲ್ಲವರಾಗಿಯೇ ಇರುವರು.

---

## ಆರನೆಯ ಸಂಧಿ

### ಅದ್ಭುತ ಹತ್ಯೆ

ರಾತ್ರಿಯ ಎಂಟು ಗಂಟೆಯ ಸಮಯಕ್ಕೆ ಸರಿಯಾಗಿ ರಾಮುರಮಾರಮಣನು ಭೋಜನವನ್ನು ತೀರಿಸಿಕೊಂಡು ಆರಿಗೂ ತಿಳಿಯದ ಹಾಗೆ ಒಂದು ಮೈಲಿಯ ದೂರದಲ್ಲಿರುವ ಕೊಳದ ಬಳಿಗೆ ಬಂದು ಹೈಮವತಿಯನ್ನು ಹುಡುಕಿದನು.

ಕುಂದನಂದಿನಿಯ ದಾಸಿಗೆ ರಾಮುರಮಾರಮಣನ ವಿಷಯದಲ್ಲಿ ಸಂಶಯ ತೋರಿಬರಲು, ಆಕೆಯು ಇದರ ಮರ್ಮವನ್ನು ಅರಿತುಕೊಳ್ಳಬೇಕೆಂದು ನಿಶ್ಚಯಿಸಿಕೊಂಡವಳಾಗಿ ಆ ಕೊಳದ ಬಳಿಗೆ ಮೊದಲೇ ಹೋಗಿ ಆರಿಗೂ ತಿಳಿಯದ ಹಾಗೆ ಒಂದು ಮರದ ಮರೆಯಲ್ಲಿ ನಿಂತುಕೊಂಡಿದ್ದಳು.

ರಾಮುರಮಾರಮಣನು ಕೊಳದ ಬಳಿಯಲ್ಲಿಯೇ ಕಾದುಕೊಂಡಿದ್ದ ಹೈಮವತಿಯನ್ನು ನೋಡಿ ರೇಗಿ ರೇಗಿ ಬೀಳುತ್ತಾ ಆಕೆಯಿದ್ದಲ್ಲಿಗೆ ಬಂದನು.

ಆಗ ಆಕಾಶದಲ್ಲಿ ಚಂದ್ರನು ತನ್ನ ವಿಮಲವಾದ ಬೆಳ್ದಿಂಗಳನ್ನು ನೆಲದ ಮೇಲೆ ಪ್ರಸರಿಸಿದ್ದನು. ತಂಗಾಳಿಯು ಆ ಆನಂದಮಯವಾದ ಬೆಳ್ದಿಂಗಳಲ್ಲಿ ತರುಲತಾಗುಲ್ಮಾದಿಗಳೊಡನೆ ಯಥೇಚ್ಛವಾಗಿ ವಿಹರಿಸುತ್ತಿದ್ದಿತು. ಆ ಸಮಯದಲ್ಲಿ ಹೈಮವತಿಯು ನಿರ್ಜನವಾದ ನೀರವವಾದ ಆ ಕೊಳದ ಬಳಿಯಲ್ಲಿ ಕುಳಿತುಕೊಂಡು ತನ್ನ ಪ್ರಣಯ ಕಾಂತನು ಬರುವುದನ್ನೇ ಇದಿರು ನೋಡುತ್ತಾ ಕುಳಿತಿದ್ದಳು. ರಾಮುರಮಾರಮಣನು ಅಲ್ಲಿಗೆ ಬಂದ ಕೂಡಲೆ ಹೈಮವತಿಯು ಎದ್ದು ನಿಂತುಕೊಂಡವಳಾದರೂ ಅವಳ ಬಾಯಿಂದ ಒಂದು ಮಾತಾದರೂ ಹೊರಡಲಿಲ್ಲ. ಅಭಿಮಾನದಿಂದ ಅವಳ ಕಂಠಧ್ವನಿಯು ರುದ್ಧವಾಯಿತು. ತನ್ನ ಅಭಿಪ್ರಾಯವೆಲ್ಲವನ್ನೂ ನೋಟದಿಂದಲೇ ತಿಳಿಸಬೇಕೆಂಬ ಆಸೆಯಿಂದಲೋ ಎಂಬಂತೆ ಹೈಮವತಿಯು ತನ್ನ ಕಾತರ ದೃಷ್ಟಿಯಿಂದ ರಾಮುರಮಾರಮಣನನ್ನು ನೋಡಲಾರಂಭಿಸಿದಳು.

"ತಿನ್ನುವುದಕ್ಕೆ ಗತಿಯಿಲ್ಲದೆ ಬೀದಿಯ ಬಿಕಾರಿಯಾಗಿದ್ದ ಹುಡುಗಿಗೆ ಎಷ್ಟು ಸಾಹಸ, ಎಷ್ಟು ಹಠ, ಎಷ್ಟು ಹೊಟ್ಟೆಯ ಕಿಚ್ಚು, ಎಷ್ಟು ಧೈರ್ಯ!" ಎಂದುಕೊಂಡು ರಾಮುರಮಾರಮಣನು ಕೋಪದಿಂದ ಕೆಂಡಗೊಂಡವನಾಗಿ—ಹೈಮು! ನೀನು ಇಲ್ಲಿಗೆ ಬಂದು ನನಗೆ ಸಲ್ಲದ ಕಿರುಕುಳವನ್ನೇತಕೆ ಉಂಟುಮಾಡಲೆಣಿಸಿರುವೆ? ಎಂದು ಕ್ರೂರವಾಗಿ ಮಾತನಾಡಿದನು.

ಇದು ಪ್ರಣಯ ಲಕ್ಷಣವೇ? ಪ್ರಣಯಿಯಾದವನು ತನ್ನ ಪ್ರಣಯಿನಿ ಯೊಡನೆ ಮಾತನಾಡುವ ಲಕ್ಷಣವು ಹೀಗೆಯೇ? ರಾಮರಮಾರಮಣನ ಪ್ರೇಮ ವೆಂಬುದು ಈ ತೆರನಾದುದೇ? ಇಂತಹ ಪ್ರೇಮಾಲಾಪವನ್ನು ಕೇಳಿ ಹೈಮವತಿಗೂ ಕೋಪವು ತಲೆಮಿಾರಿ ಹೋದುದು. ಆಕೆಯು ಆ ಕೋಪಾವೇಶದಿಂದಲೇ—ನಾನು ಬಂದೆನು. ನಾನು ಬಂದುದರಿಂದಲೇ ನಿನಗೆ ಇಷ್ಟೇಕೆ ಕೋಪ? ನಾನು ನಿನಗೆ ಎಂದಿಗೂ ಕಿಡುಕನ್ನುಂಟುಮಾಡುವುದಕ್ಕಾಗಿ ಇಲ್ಲಿಗೆ ಬಂದವಳಲ್ಲ. ನಿನ್ನ ನಿಜವಾದ ಹೆಸರನ್ನೂ ನಿನ್ನ ಹೇಯವಾದ ಕೆಲಸಗಳನ್ನೂ ಕಮಲಾಕಾಂತನಿಗೆ ತಿಳಿಸಿ ನಿನಗೆ ತೊಂದರೆ ಮಾಡಬೇಕೆಂಬುದು ನನ್ನ ಸ್ವಪ್ನದಲ್ಲಿಯೂ ಇಲ್ಲ. ನಾನು ಇದಾವ ಕೆಲಸಕ್ಕಾಗಿಯೂ ಇಲ್ಲಿಗೆ ಬಂದವಳಲ್ಲ, ಎಂದಳು.

ರಾಮರಮಾರಮಣನು ಈ ಮಾತನ್ನು ಕೇಳಿ ಮತ್ತಷ್ಟು ರೇಗಿದವನಾಗಿ—ಎಚ್ಚರಿಕೆ, ಹೈಮವತಿ, ಎಚ್ಚರಿಕೆ! ನಿನ್ನ ದಿಟ್ಟತನವನ್ನು ಸಾಕುಮಾಡು. ಇದ ಕ್ಕಾಗಿಯೇ ನಾನು ನಿನ್ನನ್ನು ಸಾಕಿ ಸಲಹಿ ದೊಡ್ಡವಳನ್ನಾಗಿ ಮಾಡಿದುದು? ನಿನ್ನಂತಹ ಹೊಟ್ಟೆಗಿಲ್ಲದ ಬಿಕಾರಿಯನ್ನು ವರಿಸಬೇಕೆಂದು ನಾನು ನಿನ್ನನ್ನು ಪೋಷಿಸಿದೆನೆಂದು ತಿಳಿದೆಯಾ ಹೇಗೆ? ಇಲ್ಲ—ಎಂದಿಗೂ ಇಲ್ಲ; ನಿನ್ನಲ್ಲಿ ಈ ದುರಾಶೆಯಿರುವುದಾದರೆ, ಅದನ್ನು ಮರೆತುಬಿಡು. ನೀನು ದರಿದ್ರ ಹೈಮವತಿ; ನಿನ್ನೊಡನೆ ನಾನು ಆವ ಸಂಬಂಧವನ್ನು ಬಳೆಯಿಸುವುದಕ್ಕೂ ಇಷ್ಟಪಡತಕ್ಕವ ನಲ್ಲ, ಎಂದು ಕಠೋರಧ್ವನಿಯಿಂದ ಮಾತನಾಡಿದನು.

ಹೈಮ—ನಿನ್ನ ಇಷ್ಟದಲ್ಲಿದ್ದಂತೆಯೇ ಆಗಲಿ. ಇನ್ನು ನಾನು ಹೇಳು ವುದನ್ನಾದರೂ ಕೇಳು. ನಾನು ಕಮಲಾಕಾಂತನ ಬಳಿಗೆ ಈಗಳೇ ಹೋಗಿ ನಿನ್ನ ಮೋಸದ ಕೃತ್ಯವೆಲ್ಲವನ್ನೂ ಬಯಲುಮಾಡಿಬಿಡುವೆನು. ನೀನು ಕಳ್ಳ—ದರೋಡೆ ಗಳ್ಳ, ಹಾಗೂ ವಿಶ್ವಾಸಘಾತುಕ. ನಿನ್ನ ಈ ಸ್ವಭಾವವನ್ನು ಕೇಳಿ ಆತನು ಎಷ್ಟೋ ಸಂತೋಷ ಪಡುವನು. ನಾನಾದರೋ ಬೀದಿಯ ಬಿಕಾರಿ; ಬಿಕಾರಿ ಯಾಗಿಯೇ ಜೀವಿಸಿಕೊಂಡಿರುವೆನು. ನಿನ್ನ ಅನ್ನವೂ, ನಿನ್ನ ಪೋಷಣೆಯೂ ನನಗೆ ಇಂದಿಗೇ ಸಾಕು. ಹೊರಡು; ಇಂದಿನಿಂದಲೂ ನನಗೆ ನಿನ್ನೊಡನೆ ಮತ್ತಾವ ಸಂಬಂಧವೂ ಇರುವುದಿಲ್ಲ.

ರಾಮ—ಎಲೌ ಗತಿಗೆಟ್ಟವಳೇ! ನಾನು ನಿನಗೆ ದಾಸನೆಂದು ತಿಳಿದೆ ಯಾ? ನಿನಗೆ ನಾನು ಅಂಜಿ ನಡೆಯುವೆನೆಂದು ತಿಳಿದು ನೀನು ಹೆಮ್ಮೆ ಪಡುವೆ ಯಾ, ಹೇಗೆ? ಇಂದಿನಿಂದ ನಾನೂ ನಿನಗೆ ದ್ವೇಷಿಯಾಗಿ ಪ್ರತಿಯಾಗಿ ಆಚರಿ ಸುವೆನು.

ಹೈಮ—ನಿನ್ನಿಂದ ಸಾಧ್ಯವಾದುದೆಲ್ಲವನ್ನೂ ಮಾಡು, ಹರಟೆಯೊತ್ತ ಬೇಡ. ನಾನು ನಿನಗಿಂತಲೂ ಬಲಿಷ್ಠೆಯಾಗಿಯೇ ಇರುವೆನು. ನಿನ್ನಂಥವರು ಇಬ್ಬರು ಬಂದರೂ—

ರಾಮ—ಹೈಮವತಿ ! ಎಚ್ಚರಿಕೆಯಿಂದ ಮಾತನಾಡು, ದುಡುಕಬೇಡ ; ದುಡುಕಿ ನನಗೆ ರೇಗಿಸಬೇಡ.

ರಾಮರಮಾರಮಣನ ಹತ್ತಿರದಲ್ಲಿ ಆಯುಧವಿರುವುದೆಂಬುದನ್ನು ಹೈಮವತಿಯು ಅರಿಯಳು. ರಾಮರಮಾರಮಣನ ವೇಷದಲ್ಲಿರುವ ಭೂತನಾಥನಂತಹ ಕಳ್ಳರು ಆವಾಗಲೂ ಶಸ್ತ್ರವುಳ್ಳವರಾಗಿಯೇ ಇರುವರೆಂಬುದನ್ನು ಹೈಮವತಿಯು ತಿಳಿದಿರಲಿಲ್ಲ. ಆದುದರಿಂದಲೇ ಆಕೆಯು ಸಾಹಸವನ್ನು ಅವಲಂಬಿಸಿಕೊಂಡು— ಭೂತ ! ನಾನು ಎಚ್ಚರಿಕೆಯಿಂದಲೇ ಮಾತನಾಡುತ್ತಿರುವೆನು. ನಾನು ಆವಾಗಲೂ ಆರ ಹಣವನ್ನೂ ಕದ್ದಿಲ್ಲ, ಆರ ಹೆಂಡಿರನ್ನೂ ಸರ್ವನಾಶಕ್ಕೀಡು ಮಾಡಿಲ್ಲ, ಆರನ್ನೂ ನಾನು ಕೊಂದಿಲ್ಲ. ಹೀಗಿರುವಲ್ಲಿ ನನಗೆ ಎಚ್ಚರಿಕೆಯಿಲ್ಲದೇ ಏನು ? ಈಗ ನೀನು ಎಚ್ಚರಿಕೆಯಿಂದ ಇರಬೇಕು. ಈಗ ನಿನಗೆ ಒಳ್ಳೆಯದಾಗಬೇಕಾಗಿದ್ದರೆ, ನನ್ನಿದಿರಿನಲ್ಲಿ ಒಂದು ಕ್ಷಣವೂ ನಿಲ್ಲದೆ ದೂರ ತೊಲಗಿ ಹೋಗು, ಎಂದು ಗದ್ದರಿಸಿದಳು.

ಮಾಯಾವಿಯಾದ ಭೂತನಾಥನು ತಟ್ಟನೆ ತನ್ನ ಕೋಪವನ್ನು ನುಂಗಿಕೊಂಡು ಮೆಲ್ಲಮೆಲ್ಲನೆ ಮೃದುಮಧುರ ಸ್ವರದಿಂದ—ಹೈಮ ! ಕೋಪಮಾಡಬೇಡ. ನೀನು ಇಲ್ಲಿಗೆ ಬಂದುದೇಕೆ ? ನಿನಗಾಗಿ ನಾನು ನಿಜವಾಗಿಯೂ ದುಃಖಪಡುತ್ತಿರುವೆನು. ಈಗಳಾದರೂ ಹೇಳು—ನೀನು ಇಲ್ಲಿಗೆ ಏತಕ್ಕಾಗಿ ಬಂದೆ ? ಎಂದು ನಗುನಗುತೆ ಮಾತನಾಡಿದನು.

ಹೈಮವತಿಯೂ ಕಳ್ಳ ನಗೆಯನ್ನು ನಕ್ಕು—ಭೂತನಾಥ ! ನೀನು ಇಷ್ಟು ಒಳ್ಳೆಯ ಸ್ವಭಾವದವನೆಂದು ನನಗೆ ಮೊದಲೇ ಗೊತ್ತಿದ್ದಿದ್ದರೆ, ನಾನು ಶ್ರಮಪಟ್ಟಾದರೂ ಇಷ್ಟು ದೂರ ಬರಬೇಕಾದುದೇ ಇರಲಿಲ್ಲ, ಎಂದಳು.

ಹೈಮವತಿಯಾಡಿದ ಒಂದೊಂದು ಮಾತೂ ಭೂತನಾಥನ ಕರುಳನ್ನು ಕತ್ತರಿಸಲಾರಂಭಿಸಿತು. ಕೂಡಲೆಯೇ ಆತನು ನಾಲ್ಕು ದಿಕ್ಕುಗಳನ್ನೂ ನೋಡಿದನು. ಪ್ರಕೃತಿಯು ಎಲ್ಲೆಲ್ಲಿಯೂ ನಿಸ್ತಬ್ಧವಾಗಿಯೂ ನೀರವವಾಗಿಯೂ ಕಾಣಿಸಿಕೊಂಡಿತು. ಗಗನಮಂಡಲದಲ್ಲಿ ಚಂದ್ರದೇವನು ನೀರವನಾಗಿ ತನ್ನ ಅಮೃತ ಕಿರಣಗಳಿಂದ ಜಗತ್ತನ್ನು ಶಾಂತವಾಗಿ ಮಾಡುತ್ತಾ ಈ ಪ್ರಣಯಿಗಳ ಪ್ರೇಮಾಲಾಪಗಳನ್ನು ಕೇಳಿಕೊಂಡು ಮುಂದೆ ಮುಂದೆ ಸಾಗಿಹೋಗುತ್ತಿದ್ದನು. ವಾಯುವು

ವಿಶ್ರಾಂತಿಗಾಗಿ ಎಲ್ಲಿಗೋ ತೆರಳಿಬಿಟ್ಟಿದ್ದಿತು. ಗಿಡಮರಗಳ ಒಂದೆಲೆಯಾದರೂ ಪ್ರಕೃತಿಯ ಪ್ರಶಾಂತತೆಯನ್ನು ಭೇದಿಸುವುದಕ್ಕೆ ಸಾಹಸವುಳ್ಳದಾಗಿರಲಿಲ್ಲ. ಮುಂಗಡೆಯಲ್ಲಿ ಮಟ್ಟಿಗೆ ಸ್ವಚ್ಛವಾದ ಜಲವುಳ್ಳ ಕೊಳವು ಚಂದ್ರಕಿರಣವನ್ನು ತನ್ನ ವಕ್ಷದ ಮೇಲೆ ಧಾರಣಮಾಡಿಕೊಂಡು ಆನಂದದಿಂದ ಪವಡಿಸಿದ್ದಿತು.

ಭೂತನಾಥನು ಇದ್ದಕ್ಕಿದ್ದ ಹಾಗೆಯೇ ಒಂದೇ ಹಾರು ಹಾರಿ ಹೈಮವತಿಯ ಕತ್ತನ್ನು ಬಲವಾಗಿ ಅದಿಮಿಕೊಂಡು ತನ್ನಲ್ಲಿದ್ದ ಮಚ್ಚನ್ನು ಹೊರಗೆ ತೆಗೆದು ಆಕೆಯನ್ನು ಬಲವಾಗಿ ಹೊಡೆದನು. ಹೈಮವತಿಯು ಆವ ಮಾತನ್ನೂ ಆಡ ದೆಯೇ ಸುಮ್ಮನಿದ್ದಳು. ಬಳಿಕ ಯಾತನೆಯನ್ನು ತಡೆಯಲಾರದವಳಾಗಿ— ಕೊಲೆ ಕೊಲೆ, ಎಂದುಕೊಂಡು ಕೊಳದಲ್ಲಿ ಜ್ಞಾನತಪ್ಪಿ ಬಿದ್ದುಬಿಟ್ಟಳು. ಭೂತ ನಾಥನು ಒಂದು ಕ್ಷಣವೂ ಅಲ್ಲಿ ನಿಲ್ಲದೆ ವೇಗದಿಂದ ಪಲಾಯನಮಾಡಿದನು.

---

## ಏಳನೆಯ ಸಂಧಿ

### ದುರ್ಘಟನೆ

ರಾಮರಮಾರಮಣನು ಎಷ್ಟು ದೂರವಾಗಿ ಓಡಿ ಹೋಗುತ್ತಿದ್ದರೂ 'ಕೊಲೆ, ಕೊಲೆ' ಎಂಬ ಶಬ್ದವು ಮಟ್ಟಿಗೆ ಅವನ ಕಿವಿಯಲ್ಲಿ ಘಂಟಾಘೋಷವಾಗಿ ಪ್ರತಿ ಧ್ವನಿತವಾಗಲಾರಂಭಿಸಿತು. ಈ ಶಬ್ದವು ಕಿವಿಗೆ ಬಿದ್ದಹಾಗೆಲ್ಲಾ ಆತನು ಓಡ ಲಾರಂಭಿಸಿದನು; ಆತನು ಓಡಿದ ಹಾಗೆಲ್ಲಾ ಕೊಲೆಯೆಂಬ ಶಬ್ದವು ಕಿವಿಗಳನ್ನು ಕೊರೆಯಲಾರಂಭಿಸಿತು. ಈ ದ್ವೈವಿಧ್ಯದಲ್ಲಿ ಸಿಲುಕಿಕೊಂಡು ನರಳಾಡುತ್ತಿದ್ದ ಭೂತನಾಥನು ದಾರಿಯಲ್ಲಿ ಒಂದೆರಡು ಸಲ ಮುಗ್ಗರಿಸಿ ಬಿದ್ದನು, ಆದರೂ ಅದೆಲ್ಲ ವನ್ನೂ ಲೆಕ್ಕಿಸದೆಯೇ ಪ್ರಾಣವುಳಿದರೆ ಸಾಕೆಂದು ಅಲ್ಲಿಬಿದ್ದು ಇಲ್ಲಿಬಿದ್ದು ಒಂದೇ ಉಸಿರಿನಲ್ಲಿ ಓಡಲಾರಂಭಿಸಿದನು. ರಾತ್ರಿಯ ಕಾಲವಾದುದರಿಂದ ಅವನ ಪ್ರಯತ್ನಕ್ಕೆ ಕುಂದುಕೊರತೆಗಳೇನೂ ಉಂಟಾಗಲಿಲ್ಲವೆಂಬುದೇ ಅವನ ಕಿಂ ಚಿತ್ತಾದ ಪುಣ್ಯವು.

ಕಮಲಾಕಾಂತರಾಯನ ಮನೆಯು ಅತಿ ವಿಶಾಲವಾದುದು; ಆ ಮನೆಯ ಪ್ರಾಚೀರವೂ ಅದಕ್ಕನುಸಾರವಾಗಿಯೇ ದೊಡ್ಡದಾಗಿದ್ದಿತು. ಆ ಮನೆಗೆ ಮನೆ ಯವರಾಗಲಿ, ಇತರ ದೊಡ್ಡಮನುಷ್ಯರೇ ಆಗಲಿ ಹೋಗಿಬರುವುದಕ್ಕೆ ಒಂದು ದಾರಿಯೂ, ಮನೆಯ ದಾಸದಾಸಿಯರು ಸಂಚಾರಮಾಡುವುದಕ್ಕೆಂದು ಮತ್ತೊಂದು ದಾರಿಯೂ ಏರ್ಪಡಿಸಲ್ಪಟ್ಟಿದ್ದಿತು. ರಾಮರಮಾರಮಣನು ಬಿದ್ದೆನೋ ಕೆಟ್ಟೆನೋ

ಎಂದು ಮನೆಯ ಬಳಿಗೆ ಓಡಿಬಂದು ಸೇವಕರು ಸಂಚಾರಮಾಡುವ ಗಲ್ಲಿಯಿಂದ ಮನೆಯೊಳಗೆ ನುಗ್ಗಿ ತನ್ನ ಕೋಣೆಗೆ ಬಂದು ಬಾಗಿಲನ್ನು ಹಾಕಿಕೊಂಡು ದೀಪ ವನ್ನು ಕಚ್ಚಿಸಿದನು. ಬಳಿಕ ಆ ಕೋಣೆಯೊಳಗಿದ್ದ ನಿಲುಗನ್ನಡಿಯಲ್ಲಿ ತನ್ನ ಸ್ವರೂಪವನ್ನು ನೋಡಿಕೊಂಡನು. ಆತನ ಮುಖವನ್ನು ನೋಡಿ ಆತನಿಗೇ ಭಯ ವುಂಟಾಗಲು, ಸರ್ವದುಃಖಾಪಹಾರಿಣಿಯಾದ ಸುರಾದೇವಿಯನ್ನು ಒಂದು ಬಟ್ಟಲಿ ನಲ್ಲಿ ಆವಾಹನೆಮಾಡಿ ಅದನ್ನು ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ ಹೊಟ್ಟೆ ಯೊಳಗೆ ಸೇರಿಸಿ ಬಿಟ್ಟನು ; ಅಷ್ಟರಿಂದಲೇ ತೃಪ್ತಿಯಾಗದಿರಲು, ತೃಪ್ತಿಯಾಗುವ ವರೆಗೂ ಕಂಠಪೂರ್ತಿಯಾಗಿ ಕುಡಿದುಬಿಟ್ಟನು.

ಒಂದು ಕ್ಷಣಕಾಲವೆನ್ನುವುದರೊಳಗಾಗಿ ಮುಖವು ಕೆಂಪೇರಿ ಉತ್ಸಾಹವು ನೂರ್ಮಡಿಯಾಯಿತು. ಆಗ ಅವನು ನಿಜವಾಗಿಯೂ ಭೂತನಾಥನೇ ಆಗಿದ್ದನು. ಆದರೂ ಮಾಡಿದ ಕೆಟ್ಟ ಕೆಲಸವು ಮರೆಯುವುದೆಂದರೇನು ? ಅದರ ಪರಿಣಾಮವು ಅಡಿಗಡಿಗೆ ಸ್ಮರಣೆಗೆ ಬಂದು ದುಷ್ಕರ್ಮಿಯನ್ನು ಅಧೀರನನ್ನಾಗಿ ಮಾಡುವುದಿಲ್ಲ ವೆಂದರೇನು ? ನಾವು ಧೈರ್ಯವನ್ನು ಮೇಲೆ ತೋರಬಹುದು ; ಆದರೆ ಭಯವು ಒಳಗಿದ್ದುಕೊಂಡೇ ಮಾನವನನ್ನು ಸುಟ್ಟು ಬೂದಿಮಾಡಿಬಿಡುವುದು. ಈ ಪ್ರಕೃತಿ ನಿಯಮಕ್ಕೆ ಭೂತನಾಥನು ಒಳಪಡದೇ ಇರತಕ್ಕವನೇನೂ ಅಲ್ಲ. ಎಂತಹ ಕೃತಾಂತನಾದರೂ ಭಯಪಡಲೇ ಬೇಕಾಗುವುದು. ನಮ್ಮ ಭೂತನಾಥನೂ ಅಂತಹ ಭಯದಿಂದ ಆವರಿಸಲ್ಪಟ್ಟು ಹೆದರಿ ಹೆದರಿ ಸತ್ತುಹೋದನು. ಆ ಭಯದ ಪ್ರಭಾವದಿಂದಲೇ ಭೂತನಾಥನು ಅಲ್ಲಿಂದ ಓಡಿಹೋಗುವುದಕ್ಕೆ ಸಂಕಲ್ಪ ಮಾಡಿ ಕೊಂಡನು.

ಆಗ ಗಡಿಯಾರದಲ್ಲಿ ರಾತ್ರಿಯ ಹನ್ನೊಂದು ಗಂಟೆಯು 'ಟಣ್, ಟಣ್' ಎಂದು ಹೊಡೆಯಿತು.

ಕಾಲಾಂಜನದಲ್ಲಿ ಒಂದು ಪ್ರಸಿದ್ಧವಾದ ರಂಗಮಂಡಪವಿದ್ದಿತು. ಅಲ್ಲಿ ಆಗಿಂ ದಾಗ ಹೊಸಹೊಸ ನಾಟಕಗಳು ಅಂದವಾದ ರೀತಿಯಿಂದ ಪ್ರದರ್ಶಿಸಲ್ಪಡು ತ್ತಿದ್ದುವು. ಇಂತಹ ಅಪೂರ್ವವಾದ ನಾಟಕಗಳನ್ನು ನೋಡುವುದಕ್ಕಾಗಿ ರಸಿಕರು ಎಲ್ಲೆಲ್ಲಿಂದಲೋ ಬರುತ್ತಿದ್ದರು. ಈ ಸ್ಥಲದಲ್ಲಿ ರೈಲಿನ ನಿಲ್ದಾಣವನ್ನು ಏರ್ಪಡಿಸಿದರೆ, ತುಂಬಾ ಉತ್ಪತ್ತಿಯಾದೀತೆಂಬ ಉದ್ದೇಶದಿಂದ, ರೈಲಿನ ಅಧಿಕಾರಿ ಗಳು ರಾತ್ರಿಯ ಏಳುಗಂಟೆಯ ಸಮಯದಲ್ಲಿ ರೈಲು ಇಲ್ಲಿಗೆ ಬಂದು ನಿಲ್ಲುವಂತೆಯೂ, ರಾತ್ರಿಯ ಎರಡು ಗಂಟೆಯ ಸಮಯದಲ್ಲಿ ಇಲ್ಲಿಂದ ಹೊರಡುವಂತೆಯೂ ಏರ್ಪಡಿ ಸಿದ್ದರು. ಅಲ್ಲದೆಯೂ ಈ ಸ್ಥಲದಲ್ಲಿಯೇ ಅನೇಕ ಕಡೆಗಳಿಂದ ಬರತಕ್ಕ ಹೊಗೆ ಬಂಡಿಗಳು ಸಂಧಿಸುತ್ತಿದ್ದುವು.

ಇದೇ ಸಮಯದಲ್ಲಿ ಕಾಲಾಂಜನಕ್ಕೆ ಬರತಕ್ಕ ಹೊಗೆ ಬಂಡಿಯಲ್ಲಿ ನಂದ ಕುಮಾರನು ಪ್ರಯಾಣಮಾಡಿಕೊಂಡು ಮತ್ತೆ ತನ್ನ ಅಜ್ಜನ ಮನೆಗೆ ಬರುವುದಾಗಿ ಏರ್ಪಾಡು ನಡೆದಿದ್ದಿತು.

ನಂದಕುಮಾರನು ಆವ ಕಾರಣದಿಂದ ಗೃಹತ್ಯಾಗಿಯಾಗಿದ್ದನೆಂಬುದು ಎಲ್ಲ ರಿಗೂ ಗೊತ್ತೇ ಇರುವುದು. ನಂದಕುಮಾರನು ಮನೆಯನ್ನು ತ್ಯಾಗ ಮಾಡಿ ಹೊರಟುಹೋದ ಕೆಲವು ದಿನಗಳ ಮೇಲೆ, ಕಮಲಾಕಾಂತನು ಪಶ್ಚಾತ್ತಾಪದಿಂದ ಬೆಂದುಹೋದನು. ಮೊದಲಿನಿಂದಲೂ ತಾಯಿತಂದೆಗಳಿಲ್ಲದ ತಬ್ಬಲಿಯಾದ ದೌಹಿತ್ರನನ್ನು ತನ್ನ ಮಗನೆಂದೇ ಭಾವಿಸಿಕೊಂಡು ಕಾಪಿಟ್ಟ ಪ್ರೇಮವು ನಂದ ಕುಮಾರನ ಅದರ್ಶನದಲ್ಲಿ ಕಮಲಾಕಾಂತನನ್ನು ತಬ್ಬಿಬ್ಬಾಗಿ ಮಾಡಿಬಿಟ್ಟಿತು. ಈ ವಿಯೋಗದ ಅಸಹ್ಯಯಾತನೆಯನ್ನು ತಡೆಯಲಾರದೆ ಕಮಲಾಕಾಂತನು ನಂದ ಕುಮಾರನಿಗೆ ಮನೆಗೆ ಬಂದು ಬಿಡುವಂತೆ ಪತ್ರವೊಂದನ್ನು ಬರೆದನು. ನಂದ ಕುಮಾರನಿಗೂ ತನ್ನ ಅಜ್ಜನಲ್ಲಿ ತುಂಬಾ ಪ್ರೀತಿಯಿದ್ದಿತು. ಅದು ಕಾರಣವೇ ಆತನು ತನ್ನ ಅಜ್ಜನಿಗೆ ಕ್ಷಮೆಯನ್ನು ಬೇಡಿ ಅದಕ್ಕೆ ಪ್ರತ್ಯುತ್ತರವನ್ನು ಬರೆದನು. ಕಮಲಾಕಾಂತನು ಮುಮ್ಮಗನಿಗೆ ಬೇಗನೆಯೇ ಹೊರಟು ಬರುವಂತೆ ಮತ್ತೊಂದು ಪತ್ರವನ್ನು ಬರೆದನು. ಅಜ್ಜನ ಮಾತಿಗೆ ಪ್ರತಿಯಾಗಿ ಹೇಳುವುದಕ್ಕೆ ಇಷ್ಟವಿಲ್ಲ ದವನಾಗಿ ನಂದಕುಮಾರನು ಆರಾತ್ರಿಯ ಎರಡು ಗಂಟೆಯ ರೈಲಿನಲ್ಲಿ ಕುಳಿತು ತನ್ನ ಮನೆಗೆ ಮತ್ತೆ ಬರುವುದಾಗಿ ಏರ್ಪಾಡಾಗಿದ್ದಿತು.

ಈ ವಿಷಯವು ಹೇಗಾದರೂ ಇರಲಿ; ರಾಮರಮಾರಮಣನು ಆ ದಿನದ ರಾತ್ರಿಯ ಎರಡು ಗಂಟೆಯ ಗಾಡಿಯಲ್ಲಿ ಕುಳಿತು ಹೊರಟುಹೋಗಬೇಕೆಂದು ಸಿದ್ಧಾಂತಮಾಡಿಕೊಂಡನು. ಅದಕ್ಕೆ ಅನುಸಾರವಾಗಿಯೇ ತಾನು ನೂತನ ವಸ್ತ್ರ ಗಳನ್ನು ಧಾರಣಮಾಡಿ ಉಳಿದ ಸಾಮಗ್ರಿಗಳೆಲ್ಲವನ್ನೂ ಕೈಚೀಲದಲ್ಲಿ ಸಂಗ್ರ ಹಿಸಿಟ್ಟನು. ಎಲ್ಲವೂ ಸಿದ್ಧವಾದ ಬಳಿಕ, ರಾಮರಮಾರಮಣನು ಹೊರಡು ವುದಕ್ಕೆಂದು ಬಾಗಿಲ ಬಳಿಗೆ ಬಂದನು. ಆಗ 'ಕೊಲೆ ಪಾತಕ, ಕೊಲೆ ಪಾತಕ' ಎಂಬಂತೆ ಶಬ್ದವು ಕಿವಿಗೆ ಬಿದ್ದಂತಾಯಿತು.

ಶಬ್ದವು ಕಿವಿಗೆ ಬಿದ್ದೊಡನೆಯೇ, ರಾಮರಮಾರಮಣನು ಇದ್ದವನೂ ಅಲ್ಲ ಸತ್ತವನೂ ಅಲ್ಲ. ಇದ್ದವನು ಎನ್ನೋಣವೆಂದರೆ, ಅವನ ಅಂಗಾಂಗಗಳೆಲ್ಲವೂ ನಿಷ್ಪಂದವಾಗಿಹೋಗಿದ್ದುವು; ಸತ್ತವನು ಎನ್ನೋಣವೆಂದರೆ, ಪ್ರಾಣವಾಯುವು ಇನ್ನೂ ಸಂಚರಿಸುತ್ತಿದ್ದಿತು. ಈಯವಸ್ಥೆಯಲ್ಲಿಯೇ ಕೊಂಚಹೊತ್ತು ಕಳೆದ ಬಳಿಕ, ರಾಮರಮಾರಮಣನು ಧೈರ್ಯವನ್ನು—ಎಂದರೆ, ಚೆದರಿಹೋಗಿದ್ದ ಧೈರ್ಯವನ್ನು ಒಂದೆಡೆಯಲ್ಲಿ ಸೇರಿಸಿಕೊಂಡು ಸುತ್ತಲೂ ನೋಡಿದನು. ಬಾಗಿಲು

ಹಾಕಿದ್ದುದರಿಂದ ಅವನಿಗೆ ಕೊಂಚಮಟ್ಟಿಗೆ ಸಾಹಸವು ತಲೆದೋರಿತು. ಮಚ್ಚು ಹತ್ತಿರದಲ್ಲಿದ್ದರೆ, ಸಮಯಗಳಲ್ಲಿ ಉಪಕಾರವಾಗುವುದೆಂದು ಚಿಂತಿಸಿಕೊಂಡು, ಆತನು ಅದನ್ನು ಹುಡುಕಿ ನೋಡಿದನು. ಅದು ಎಲ್ಲಿಯೂ ಸಿಕ್ಕದೇ ಹೋಗಲು, ಆಗ ಅವನಿಗುಂಟಾದ ಸಂಕಟವನ್ನು ಬಲ್ಲವರೇ ಬಲ್ಲರು.

"ಬಂದುದೆಲ್ಲಾ ಬರಲಿ, ಹೊರಟು ಹೋಗುವುದೇ ಮೇಲು," ಎಂದು ನಿಶ್ಚಯಿಸಿದವನಾಗಿ, "ಬಾಗಿಲಿನಿಂದ ಹೋಗುವುದಾದರೆ ಮತ್ತಾವ ನೂತನ ವಾದ ಅಪಾಯಗಳು ಸಂಭವಿಸುವುವೋ ಬಲ್ಲವರಾರು ?" ಎಂದುಕೊಂಡು ಕಿಟಕಿ ಯಿಂದ ಇಳಿಬಿದ್ದು ಹೋಗುವುದೇ ಕಾಲೋಚಿತವಾದ ಉಪಾಯವೆಂದು ರಾಮ ರಮಾರಮಣನು ಕೋಣೆಯಲ್ಲಿದ್ದ ಬಟ್ಟೆಗಳನ್ನು ಹರಿದು ಒಂದಕ್ಕೊಂದು ಕಟ್ಟಿ ಹಗ್ಗದಂತೆ ಮಾಡಿ ಅದರ ಒಂದು ತುದಿಯನ್ನು ಕಿಟಕಿಯ ಸಲಾಕೆಗೆ ಬಿಗಿದು, ತಾನು ನುಗ್ಗಿ ಹೋಗುವುದಕ್ಕೆ ಅನುಕೂಲಿಸುವಂತೆ ಸಲಾಕೆಗಳನ್ನು ಹಿಗ್ಗಲಿಸಿ ಇಳಿ ಬೀಳುವುದರಲ್ಲಿದ್ದನು. ಆಗ "ಕೊಲೆ ಪಾತಕ ಪರಾರಿ, ಕೊಲೆ ಪಾತಕ ಪರಾರಿ' ಎಂಬಂತೆ ಶಬ್ದವು ಶ್ರವಣಗೋಚರವಾಗಲು, "ಈ ಪಿಶಾಚದ ಮನೆ ಯಲ್ಲಿರುವುದು ಪ್ರಾಣಕ್ಕೆ ಸಂಚುಕಾರಕೊಟ್ಟಂತಾಗುವುದು. ನನಗೇನೋ ಉಳಿ ಬಾಳಿಲ್ಲ; ಪ್ರಾಣವೂ ಹಾರಿಹೋಗುವಂತಿಲ್ಲ. ನನಗೆ ಒಳ್ಳೆಯ ಯಮಯಾತನೆ ಗಿಟ್ಟಿತು," ಎಂದು ಬೆಚ್ಚಿ ಬೆಚ್ಚಿ ಬೀಳುತ್ತಾ ಬಟ್ಟೆಯ ಹಗ್ಗದಿಂದ ಇಳಿಯುವು ದಕ್ಕೆ ಹೋಗಿ ದುಪ್ಪೆಂದು ಕೆಳಗೆ ಬಿದ್ದುಬಿಟ್ಟನು. ಪಾಪೀ ಚಿರಾಯುವೆನ್ನುವಂತೆ ಭೂತನಾಥನು ಈಗಾಗಳೇ ಸಾಯುವುದೆಂದರೇನು ? ಆತನು ಕೊಂಚ ಹೊತ್ತು ಚೇತರಿಸಿಕೊಂಡು ಸುತ್ತಲೂ ನೋಡಿ, ಆರೂ ಇಲ್ಲವೆಂದು ನಿರ್ಧರ ಮಾಡಿಕೊಂಡು ಮನೆಯ ಹಿಂಗಡೆಯಿಂದ ಪ್ರಾಚೀರದ ಗೋಡೆಯನ್ನು ದಾಟಿ ಒಂದೇ ಉಸಿರಿನಲ್ಲಿ ರೈಲಿನ ನಿಲ್ದಾಣದ ಕಡೆಗೆ ಓಡಿ ಹೋದನು. ಆತನು ಯಥಾಸಮಯದಲ್ಲಿ ಅಲ್ಲಿಗೆ ಬಂದು ಕಾಶೀಕ್ಷೇತ್ರಕ್ಕೆ ಒಂದು ಟಿಕೆಟ್ಟನ್ನು ಕೊಂಡುಕೊಂಡು ಸರಸರನೆ ಹೋಗಿ ಬಂಡಿಯಲ್ಲಿ ಕುಳಿತುಕೊಂಡನು. ಆಗ ಅವನ ಮನವು ಸ್ವಲ್ಪ ಸಮಾಧಾನಕ್ಕೆ ಬಂದಿತು.

ಹೊಗೆ ಬಂಡಿಯು ಹೊರಡುವುದಕ್ಕೆ ಒಂದೆರಡು ನಿಮಿಷಗಳಿಗೆ ಮೊದಲು ಒಬ್ಬ ಹೆಂಗುಸು ನಿಲ್ದಾಣಕ್ಕೆ ಬಂದು ಕಾಶಿಗೆ ಒಂದು ಟಿಕೆಟ್ಟನ್ನು ಕೊಂಡು ತಟ್ಟನೆ ಬಂಡಿಯೇರಿದಳು. ಆ ಕೂಡಲೆಯೇ ಬಂಡಿಯು ಹೊರಡುವುದಕ್ಕೆ ಸಿದ್ಧ ವಾಯಿತು. ಅದೇ ಸಮಯದಲ್ಲಿ ಮತ್ತೊಂದು ಬಂಡಿಯು ಅಲ್ಲಿಗೆ ಬಂದು ನಿಂತಿತು. ನಂದಕುಮಾರನು ಗಾಡಿಯಿಂದ ಇಳಿದು ಬಂದನು. ರಾಮರಮಾ

ರಮಣನೂ ಮತ್ತೊಬ್ಬ ಹೆಂಗುಸೂ ನಂದಕುಮಾರನು ಇಳಿದು ಬಂದುದನ್ನು ನೋಡಿದರು ; ಆದರೆ ಇವರಾರೂ ಅವನ ಕಣ್ಣಿಗೆ ಬೀಳಲಿಲ್ಲ.

ರೈಲು ಬಂಡಿಯು ನಿರ್ದಿಷ್ಟ ಕಾಲದಲ್ಲಿ ಕಾಶೀಕ್ಷೇತ್ರಕ್ಕೆ ತಲಪಿತು. ರಾಮರಮಾರಮಣನು ಬಂಡಿಯಿಂದಿಳಿದು ಒಂದು ಕುದುರೆಯ ಬಂಡಿಯನ್ನು ಬಾಡಿಗೆಗೆ ಮಾತನಾಡಿ ದುರ್ಗಾಘಾಟಿನ ಮೂರನೆಯ ಗಲ್ಲಿಗೆ ಕೊಂಡೊಯ್ಯುವಂತೆ ಬಂಡಿಯವನಿಗೆ ಅಪ್ಪಣೆಮಾಡಿದನು. ಬಂಡಿಯು ಸರ್ರನೆ ಹೊರಟಿತು.

ರಾಮರಮಾರಮಣನನ್ನು ಹಿಂಬಾಲಿಸಿ ಹೋಗಬೇಕೆಂಬ ಆತುರತೆಯಿಂದ ಕಾಶಿಗೆ ಟಿಕೆಟ್ಟನ್ನು ಕೊಂಡಿದ್ದ ಹೆಂಗುಸು ಸಡಗರದಿಂದ ಬಂಡಿಯಿಂದ ಇಳಿಯುವಾಗ ಕೆಳಗೆ ಬಿದ್ದು ಕೈಕಾಲುಗಳನ್ನು ಮುರಿದುಕೊಂಡಳು. ಆಕೆಯು ರಾಮರಮಾರಮಣನನ್ನು ಅನುಸರಿಸಿ ಹೋಗುವ ಮಾತು ಹಾಗಿರಲಿ ; ಆಕೆಯು ಬಿದ್ದ ರಭಸಕ್ಕೆ ಜ್ಞಾನ ತಪ್ಪಿದವಳಾಗಿ ನೆಲದ ಮೇಲೆ ಮುದುರಿಕೊಂಡಳು.

ಪಾಠಕ ಮಹಾಶಯ ! ಈ ಹೆಂಗುಸನ್ನು ಬಲ್ಲಿರಾ ? ಈಕೆಯೇ ಕುಂದನಂದಿನಿಯ ದಾಸಿಯು. ಈಕೆಯು ರಾಮರಮಾರಮಣನ ಗುಪ್ತಕಾರ್ಯಗಳನ್ನು ನೋಡಿಕೊಂಡು ಬರಬೇಕೆಂದು ಆತನ ಬೆನ್ನು ಹತ್ತಿದ್ದಳು. ಆದರೆ ದುರ್ದೈವದ ದುರ್ಘಟನೆಯಿಂದ ಅದು ಸಾಧ್ಯವಾಗದೇ ಹೋಗಿ ಮಧ್ಯಮಾರ್ಗದಲ್ಲಿ ಬಿದ್ದುಹೋದಳು.

ಇದನ್ನು ನೋಡಿದ ಕೂಡಲೆ ಅಲ್ಲಿದ್ದವರೆಲ್ಲರೂ ಆಕೆಯ ಬಳಿಗೆ ಓಡಿಬಂದು ಆಕೆಯನ್ನು ಒಂದು ಬಂಡಿಯಲ್ಲಿ ಮಲಗಿಸಿಕೊಂಡು ಹತ್ತಿರದ ವೈದ್ಯಶಾಲೆಗೆ ಕರೆದುಕೊಂಡು ಹೋಗಿಬಿಟ್ಟರು.

---

## ಎಂಟನೆಯ ಸಂಧಿ

### ಮೊದಲನೆಯ ಕೊಲೆಪಾತಕ

ಘಟನಾಚಕ್ರದಲ್ಲಿ ಅದೇ ಸಮಯಕ್ಕೆ ಸರಿಯಾಗಿ ಕುಂದನಂದಿನಿಯು ತನ್ನ ತಂದೆಯ ಮನೆಗೆ ಬಂದಳು. ಮತ್ತೊಂದು ಕಡೆಯಿಂದ ನಂದಕುಮಾರನೂ ಮನೆಗೆ ಬಂದ ಕೂಡಲೆ, ಹೊಂಚುಹಾಕುತ್ತಿದ್ದ ಪೋಲೀಸಿನವರು ಕಾಲಾಕಾಲವೆನ್ನದೆ ಆತನನ್ನು ದಸ್ತಗಿರಿಮಾಡಿದರು.

ತಟ್ಟನೆ ದಸ್ತಗಿರಿಯಾದುದನ್ನು ಕಂಡು ನಂದಕುಮಾರನು ಆಶ್ಚರ್ಯದಿಂದ ಕೂಡಿದವನಾಗಿಯೂ ಭಯದಿಂದ ನಡುಗಿದವನಾಗಿಯೂ ಆದನು. " ನನ್ನನ್ನು

ನಿಷ್ಕಾರಣವಾಗಿ ಹಿಡಿಯಲು ಕಾರಣವೇನು?" ಎಂದು ನಂದಕುಮಾರನು ಕೇಳಲಾಗಿ, ಪೋಲೀಸಿನವನೊಬ್ಬನು ಮುಂದೆ ಬಂದು—ಎಲಾ! ನೀನು ಬಲು ಚಾಲಾಕಾದ ಹುಡುಗನಾಗಿ ಕಾಣುವೆ. ಕಮಲಾಕಾಂತನನ್ನು ಗುಟ್ಟಾಗಿ ಕೊಂದು, ಬೆಣ್ಣೆ ತಿಂದ ಬೆಕ್ಕಿನಂತೆ ಏನೂ ಕಾಣದವನಂತೆ ನಟಿಸುವೆಯಾ? ಪೋಲೀಸಿನವರ ಕಣ್ಣಿಗೆ ಮಣ್ಣೆರಚ ಬೇಕಾದರೆ, ನೀನು ಮೂರುಕಣ್ಣಿಟ್ಟುಕೊಂಡು ಹುಟ್ಟಬೇಕು. ಗೊತ್ತಾಯಿತೇ? ಎಂದು ಅಬ್ಬರದ ಮಾತನ್ನಾಡಿದನು.

ನಂದಕುಮಾರನು ಹಠಾತ್ತಾಗಿ ಕಮಲಾಕಾಂತನ ಮರಣದ ಸುದ್ದಿಯನ್ನು ಕೇಳಿದ ಕೂಡಲೆ ಅವನ ತಲೆಯ ಮೇಲೆ ಸಿಡಿಲು ಸಿಡಿದಂತಾಯಿತು. ಕಮಲಾಕಾಂತನನ್ನು ಕೊಂದನೆಂಬ ಅಪರಾಧದಿಂದ ತಾನು ಪೋಲೀಸಿನವರ ಕೈಗೆ ಸಿಲುಕಿಕೊಂಡುದಕ್ಕಾಗಿ ಅವನು ಕೊಂಚವಾದರೂ ಹೆದರಲಿಲ್ಲ. ಕಾರಣವೇನೆಂದರೆ—ಅವನು ನಿರ್ದೋಷಿ.

"ತಾನು ಇಷ್ಟು ದಿನಗಳೂ ಊರಿನಲ್ಲಿಯೇ ಇರಲಿಲ್ಲವೆಂದೂ, ಈಗ ತಾನೇ ರೈಲಿಳಿದು ಮನೆಗೆ ಬಂದು ಕಾಲಿಟ್ಟಿರುವೆನೆಂದೂ, ಕಮಲಾಕಾಂತನನ್ನು ನೋಡುವುದಕ್ಕೆ ಕೂಡ ತನಗೆ ಅವಕಾಶವಿರಲಿಲ್ಲವೆಂದೂ ಸಪ್ರಮಾಣವಾಗಿ ನಿದರ್ಶನಕ್ಕೆ ತಂದುಕೊಟ್ಟು ತನ್ನ ನಿರ್ದೋಷಿತೆಯನ್ನು ಸಾಧಿಸಿಕೊಳ್ಳುವೆನು," ಎಂದು ನಂದಕುಮಾರನು ತಿಳಿದು ಧೈರ್ಯದಿಂದಿದ್ದು ಬಿಟ್ಟನು.

ಕುಂದನಂದಿನಿಯ ಪಾಡು ಹೇಳಿ ತೀರದು. "ಭಕ್ತಿ ವಿಶ್ವಾಸಗಳಿಂದ ಕಮಲಾಕಾಂತನನ್ನು ಹೇಗೆ ಸೇವಿಸಬೇಕು, ಪ್ರೇಮದೃಷ್ಟಿಯಿಂದ ನಂದಕುಮಾರನನ್ನು ಹೇಗೆ ಆರಾಧಿಸಬೇಕು?" ಎಂದು ಬಗೆ ಬಗೆಯಾಗಿ ಚಿಂತಿಸಿಕೊಂಡು ಕುಂದನಂದಿನಿಯು ಮನೆಗೆ ಬಂದರೆ, ಮನೆಯ ಅವಸ್ಥೆಯು ವಿಪರೀತವಾಗಿ ಹೋಗಿರುವುದು. ಆಕೆಯ ದುರದೃಷ್ಟದಿಂದ ಆರಾಧ್ಯಮೂರ್ತಿಗಳಿಬ್ಬರೂ ಕಣ್ಮರೆಯಾಗಿ ಬಿಟ್ಟರು. ಒಬ್ಬನಂತೂ ಹಿಂದಿರುಗಿ ಮತ್ತೆ ಬರುವ ಹಾಗೆಯೇ ಇರಲಿಲ್ಲ. ಎಷ್ಟು ಅತ್ತರೂ, ಎಷ್ಟು ಕುಟ್ಟಿಕೊಂಡರೂ ಸತ್ತವನು ಹಿಂದಿರುಗಿ ಬರುವುದಿಲ್ಲವೆಂದು ಆಕೆಯು ಚೆನ್ನಾಗಿಯೂ ಅರಿತುಕೊಂಡಿದ್ದಳು. ಆದುದರಿಂದ ಆಕೆಯು ಕಮಲಾಕಾಂತನ ವಿಷಯದಲ್ಲಿ ಅಷ್ಟಾಗಿ ಸಂಕಟಪಡಲಿಲ್ಲ. ಆದರೆ ಆಕೆಯು ನಂದಕುಮಾರನ ವಿಷಯದಲ್ಲಿ ಬಹಳವಾಗಿ ತತ್ತರಗುಟ್ಟಲಾರಂಭಿಸಿದಳು. ಆಕೆಗೆ ನಂದಕುಮಾರನ ಶೀಲಸ್ವಭಾವಗಳು ಚೆನ್ನಾಗಿಯೂ ಗೊತ್ತಾಗಿದ್ದುವಾದುದರಿಂದ, 'ನಂದಕುಮಾರನು ಕಮಲಾಕಾಂತನನ್ನು ಎಂದಿಗೂ ಕೊಂದವನಲ್ಲ' ಎಂಬ ನಂಬುಗೆಯು ಬಲವಾಗಿದ್ದಿತು.

ನಂದಕುಮಾರನು ಮನೆಗೆ ಬಂದಾಗ ಅವನ ಕಯ್ಯಲ್ಲಿ ಒಂದು ಮಚ್ಚಿದ್ದಿತು. ಅವನು ಅದನ್ನು ಕೆಳಗಿಡುವುದಕ್ಕೆ ಮೊದಲೇ ಕಮಲಾಕಾಂತನನ್ನು ನೋಡಿ ಕೊಂಡು ಬರಬೇಕೆಂದು ಆತನ ಕೋಣೆಗೆ ತೆರಳುತ್ತಿದ್ದನು. ಇಷ್ಟೆನ್ನುವುದರೊಳಗಾಗಿ ಪೋಲೀಸಿನವರು ಓಡಿಬಂದು ನಂದಕುಮಾರನ ಕಯ್ಯಲ್ಲಿ ಮಚ್ಚಿರುವುದನ್ನು ನೋಡಿ, 'ಈತನೇ ಕಮಲಾಕಾಂತನನ್ನು ಕೊಂದವನು,' ಎಂದು ನಿರ್ಧರ ಮಾಡಿಕೊಂಡು ಆತನನ್ನು ದಸ್ತಗಿರಿ ಮಾಡಿದರು.

ಮದಯಂತಿಯು ಹುಚ್ಚು ಹಿಡಿದವಳಂತಾಗಿ ದಿಕ್ಕು ತೋರದೆ ಅಲೆದಾಡಿಬಿಟ್ಟಳು. 'ಕಮಲಾಕಾಂತನು ಇನ್ನೆರಡು ದಿನಗಳು ಬದುಕಿದ್ದಿದ್ದರೆ, ತನಗೆ ವಿವಾಹವಾಗಿ ಹೋಗುತ್ತಿದ್ದಿತೆಂದೂ, ಆಗ ಆತನ ಆಸ್ತಿ ಪಾಸ್ತಿಗಳೆಲ್ಲವೂ ತನ್ನ ಪಾಲಿಗೇ ಬಂದು ಬಿಡುತ್ತಿದ್ದಿತೆಂದೂ, ಈಗ ದುರಾಶಾ ಪ್ರಪಂಚದಲ್ಲಿ ಕಟ್ಟಿದ್ದ ಮನೋರಥವೆಂಬ ದೊಡ್ಡ ಉಪ್ಪರಿಗೆಯ ಮನೆಯೆಲ್ಲವೂ ಒಂದೇ ತಡವೆಗೆ ತಲೆಯ ಮೇಲೆ ಮಗುಚಿಕೊಂಡಿತೆಂದೂ, ಮುಂದೇನ ಗತಿಯೆಂದೂ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅಯ್ಯೋ ಪಾಪ! ಆಕೆಯು ಅವಾವುವೋ ಕೆಲಸಗಳನ್ನು ಮಾಡಬೇಕೆಂದು ಎಷ್ಟೋ ಆಸೆಯನ್ನಿಟ್ಟುಕೊಂಡಿದ್ದಳು, ಆದರೆ ಅವಳ ಆಶಾಲತೆಯ ಮೂಲಕ್ಕೆ ಕುಠಾರದ ಬಲವಾದ ಪೆಟ್ಟುಬಿದ್ದು ಹೋಯಿತು. ಮನುಷ್ಯನ ಇಚ್ಛೆಯೆಲ್ಲವೂ ಫಲಿಸುವುದಾದರೆ, ದೇವರು ಮನುಷ್ಯನಿಂದ ಕುತ್ತಿಗೆ ಹಿಡಿದು ತಳ್ಳಿಸಿಕೊಳ್ಳುವುದಕ್ಕಿಂತ ಮೊದಲು ಗೌರವದಿಂದ ತನ್ನ ಸ್ಥಾನವನ್ನು ಬಿಟ್ಟುಕೊಟ್ಟು ಎಲ್ಲಿಗಾದರೂ ಕಣ್ಮರೆಯಾಗಿ ಹೊರಟುಹೋಗುವುದು ಮೇಲು. ಮನುಷ್ಯನು ಸಾಮಾನ್ಯನಂತೆ ಕಾಣಿಸಿಕೊಳ್ಳುವವನಾದರೂ, ಆತನ ದೂರಾಲೋಚನೆಯು ಬ್ರಹ್ಮಾಂಡ ಕಟಾಹವನ್ನೂ ಭೇದಿಸಿಕೊಂಡು ಬಹುದೂರ ಹೊರಟುಕೊಂಡಿರುವುದು. ಇಂತಹ ದೂರಾಲೋಚನೆಗಳನ್ನು ಆರಾದರೂ ದುರಾಲೋಚನೆಗಳೆಂದು ಹೇಳಿದ ಕೂಡಲೆ ಅವರ ಬಾಳು ಅಂದಿಗೆ ತೀರೀತು. ಬುದ್ಧಿಶಕ್ತಿಯ ಎಲ್ಲೆಯನ್ನು ಬಲ್ಲವರಾರು?

ನಂದಕುಮಾರನು ಕಮಲಾಕಾಂತನಿಗಾಗಿ ಕೊರಗಿದಷ್ಟು ತನ್ನ ವಿಪತ್ತಿಗಾಗಿ ಕೊರಗಲಿಲ್ಲ. ಆತನು ಕಮಲಾಕಾಂತನನ್ನು ಅಡಿಗಡಿಗೂ ಜ್ಞಾಪಿಸಿಕೊಂಡು ಮಕ್ಕಳಂತೆ ಅಳುತ್ತಾ ನೆಲದ ಮೇಲೆ ಬಿದ್ದು ಒದೆದಾಡಿ ಹೋದನು. ಇವನ ದುರವಸ್ಥೆಯನ್ನು ನೋಡಿ ಮನೆಯ ದಾಸದಾಸಿಯರೆಲ್ಲರೂ 'ಹಾಯ್ ಹಾಯ್' ಎಂದು ಗೋಳಿಟ್ಟರು.

ಆ ರಾತ್ರಿಯಲ್ಲಿ ನಿದ್ರಾಂಗನೆಯು ಹೆಣವನ್ನು ನೋಡಿ ಹೆದರಿದಳೋ ಎಂಬಂತೆ ಆ ಮನೆಯನ್ನೇ ಬಿಟ್ಟು ಎಲ್ಲಿಗೋ ಹೊರಟುಹೋದಳು. ಆ ಮನೆ

ಯಲ್ಲಿ ಎಲ್ಲಿ ನೋಡಿದರೂ, ರೋದನ ಧ್ವನಿಯು ತಾನೇ ತಾನಾಗಿ ಹೋಗಿರುವುದು. ಒಂದು ಕಡೆ ದಾಸದಾಸಿಯರು ಕುಳಿತುಕೊಂಡು 'ಅನ್ನ ಕೊಡುವ ದಣಿಯು ಹೋದ ಮೇಲೆ ನಾವೇಕೆ ಬದುಕಿರಬೇಕು? ಹಾ ದೈವವೇ! ನಮ್ಮ ಹಣೆಯಲ್ಲಿ ಎಂತಹ ಕಷ್ಟವನ್ನು ಬರೆದೇ!" ಎಂದು ಪ್ರಲಾಪಿಸುತ್ತಿರುವರು. ಒಂದು ಕಡೆ ಯಲ್ಲಿ ಕೆಲವರು ಕುಳಿತುಕೊಂಡು ಕಮಲಾಕಾಂತನ ಗುಣಗಳನ್ನು ಕೊಂಡಾಡುತ್ತಾ ಪ್ರಲಾಪಿಸುತ್ತಿರುವರು. ಮತ್ತೊಂದೆಡೆಯಲ್ಲಿ ಇನ್ನು ಕೆಲವರು ಕುಳಿತುಕೊಂಡು, 'ನಮ್ಮನ್ನು ನಡುನೀರಿನಲ್ಲಿ ಕೈ ಬಿಟ್ಟು ಹೋದೆಯಾ! ಮುಂದೆ ನಮ್ಮ ಗತಿ ಯೇನು?' ಎಂದು ಗೋಳಾಡುತ್ತಿರುವರು. ಕೆಲವರು ತಲೆಯ ಮೇಲೆ ಕೈಗಳ ನ್ನಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿರುವರು. ಕೆಲವರು ದಿಕ್ಕು ತೋರದೆಯೇ ಬೆರಗಾಗಿ ಕುಳಿತಿರುವರು. ಕೆಲವರು ಮುಂದಣ ಸ್ಥಿತಿಗತಿಗಳನ್ನು ಪರ್ಯಾಲೋ ಚಿಸುತ್ತಿರುವರು. ಕೆಲವರು ಶ್ಮಶಾನ ವೈರಾಗ್ಯವನ್ನು ಬೋಧಿಸುತ್ತಿರುವರು. ಕೆಲವರು ಅಳುತ್ತಾ ಕೇಳುತ್ತಿಗುವರು. ಕೆಲವರು ಕೊಲೆ ಮಾಡಿದ ಅಪರಾಧ ವನ್ನು ಆರಾರ ಮೇಲೋ ಒರಗಿಸಿ ಪರಿಪರಿಯಾಗಿ ನಿಂದಿಸುತ್ತಿರುವರು. ಪೋಲೀ ಸಿನವರು ಮಟ್ಟಿಗೆ ನಂದಕುಮಾರನನ್ನು ಹೆದರಿಸಿ ಬೆದರಿಸಿ ಮೂದಲಿಸಿ ಮೂತಿ ಯನ್ನು ತಿನಿಯುತ್ತಿರುವರು. ನಂದಕುಮಾರನು ಬಾಯ ಮುಚ್ಚಿಕೊಂಡು ಎಲ್ಲ ವನ್ನೂ ಸಹಿಸುತ್ತಿರುವನು. ಈ ಬಗೆಯಾದ ವ್ಯವಹಾರಗಳಿಂದ ಅಂದಿನ ಘೋರ ರಾತ್ರಿಯು ಕಳೆದು ಬೆಳಗಾದುದು. ಬೆಳಗಾದ ಕೂಡಲೆ ಪೋಲೀಸಿನ ಅಧಿಕಾರಿ ಯೊಬ್ಬನು ಬಂದು ಶಾಸ್ತ್ರ ಪದ್ಧತಿಗನುಸಾರವಾಗಿ ನಡೆಯಬೇಕಾದುದೆಲ್ಲವನ್ನೂ ಸಿದ್ಧಪಡಿಸಿಕೊಳ್ಳುತ್ತಿರುವನು. ಆತನೇ ನಮ್ಮ ನವನ್ಯಾಸದಲ್ಲಿ ಪೂರ್ವೋಕ್ತ ನಾದ ಅನಂತರತ್ನ ಮಹಾಶಯನು. ಈ ಮಹಾಶಯನು ಅಲ್ಲಿನ ವಿದ್ಯಮಾನಗ ಳಿಂದ 'ನಂದಕುಮಾರನೇ ಕಮಲಾಕಾಂತನನ್ನು ಕೊಂದವನು,' ಎಂದು ಸಿದ್ಧಾಂತಮಾಡಿಕೊಂಡನು. ಅಲ್ಲಿಗೆ ಪರಂತಪನೂ ಬಂದಿದ್ದನು. ಅವನ ಅಭಿ ಪ್ರಾಯವಾದರೋ ಅನಂತರತ್ನನ ಅಭಿಪ್ರಾಯಕ್ಕೆ ಬೇರೆಯಾಗಿಯೇ ಇದ್ದಿತು.

ಅನಂತರತ್ನನು ತನ್ನ ಕೆಲಸವನ್ನು ತೀರಿಸಿಕೊಂಡು ಅಲ್ಲಿಂದ ಹೊರಟು ಹೋದನು. ಬಳಿಕ ಪರಂತಪನು ನಂದಕುಮಾರನನ್ನು ನೋಡಬೇಕೆಂದು ಬಯ ಸಿದನು.

ಅನಂತರತ್ನನ ಅಪ್ಪಣೆಯ ಪ್ರಕಾರ, ನಂದಕುಮಾರನಿಗೆ ಕುಂದನಂದಿನಿ ಯೊಡನೆ ಮಾತನಾಡುವುದಕ್ಕೆ ಅವಕಾಶವು ಕೊಡಲ್ಪಟ್ಟಿತು. ಆ ಸಮಯಕ್ಕೆ ಸರಿಯಾಗಿ ಪರಂತಪನೂ ಅಲ್ಲಿಗೆ ಬಂದು ಸೇರಿದನು.

ಪರಂತಪನಿಗೆ ನಂದಕುಮಾರನೊಡನೆ ವಿಶೇಷ ಪರಿಚಯವಿಲ್ಲದಿದ್ದರೂ ಸಾಮಾನ್ಯಪರಿಚಯವಿದ್ದಿತು. ಈ ಪರಿಚಯದ ಬಲದಿಂದಲೇ ಪರಂತಪನು ನಂದಕುಮಾರನನ್ನು ಸಂಬೋಧಿಸಿ — ನಂದಕುಮಾರ! ನೀನು ಚೆನ್ನಾಗಿರುವೆಯಾ ? ನಿನಗೆ ಕುಶಲವಷ್ಟೇ ? ಎಂದು ಕೇಳಿದನು.

ಶೋಕದಿಂದ ಧಾರಾಕಾರವಾಗಿ ಕಂಬನಿಗರೆಯುತ್ತಿದ್ದ ನಂದಕುಮಾರನು ಈ ಮಾತನ್ನು ಕೇಳಿ ಕಾತರಭಾವದಿಂದ—ಪರಂತಪ ಮಹಾಶಯ! ನನಗೆ ಕುಶಲವನ್ನು ಕೇಳುತ್ತಿರುವಿರಿ. ಈಗಣ ಸಂದರ್ಭವನ್ನು ನೋಡಿದರೆ, ತಮಗೆ ಹೇಗೆ ಕಾಣುವುದೋ ಗೊತ್ತಿಲ್ಲ, ಎಂದು ಹೇಳುತ್ತಾ ಗೊಳೋ ಎಂದು ಅತ್ತುಬಿಟ್ಟನು.

ಪರಂತಪನು ಬಗೆಬಗೆಯ ಸಮಾಧಾನೋಕ್ತಿಗಳನ್ನು ಹೇಳಿ—ನಂದಕುಮಾರ! ನೀನು ವಿವೇಕಿಯಾದುದಕ್ಕೆ ಫಲವಿದೇ ಏನು ? ಶೋಕಮಾಡುವುದಕ್ಕೆ ಕಾಲವಿದಲ್ಲ. ನಿನಗೆ ಒದಗಿ ಬಂದಿರುವ ವಿಪತ್ತನ್ನಾದರೂ ನೋಡು. ಅದನ್ನು ಪರಿಹಾರಮಾಡಿಕೊಳ್ಳುವುದು ನಿನಗೆ ಮೊದಲನೆಯ ಕರ್ತವ್ಯವಾಗಿರುವುದು. ಈ ಪ್ರಾಣಾಪತ್ತಿನ ಸಮಯದಲ್ಲಿ ಹುಡುಗನಂತೆ ವರ್ತಿಸಬೇಡ, ಎಂದು ತಿಳಿಯ ಹೇಳಿದನು.

ಕುಂದನಂದಿನಿಯು ಹಿಂದೊಂದು ಸಲ ಪರಂತಪನಿಂದ ಉಪಕೃತೆಯಾಗಿದ್ದಳು. ಈಗಲೂ ಆತನು ಇಲ್ಲಿಗೆ ಬಂದಿರುವುದನ್ನು ನೋಡಿ ಸಾಹಸಗೊಂಡು—ಮಹಾಶಯ! ಕಮಲಾಕಾಂತನ ಹತ್ಯೆಯ ಸಂಬಂಧದಲ್ಲಿ ತಮ್ಮ ಅಭಿಪ್ರಾಯವೇನು ? ನಂದಕುಮಾರನೇ ಈ ಅಪರಾಧದಲ್ಲಿ ಅಪರಾಧಿಯೆಂದು ಊಹಿಸುವುದಕ್ಕೆ ತಮಗೆ ಕಾರಣಗಳೇನಾದರೂ ಗೋಚರಿಸುತ್ತಿವೆಯೇ ? ಎಂದು ಪ್ರಶ್ನೆ ಮಾಡಿದಳು.

ಪರಂ—ಕುಂದ! ಈ ಸಂದರ್ಭದಲ್ಲಿ ನಾನು ಹೇಗೆ ನಿರ್ದೋಷಿಯೋ ನಿನ್ನ ನಂದಕುಮಾರನೂ ಹಾಗೆಯೇ ನಿರ್ದೋಷಿಯು. ಈ ಕಾಲಾಂಜನದ ಪ್ರದೇಶದಲ್ಲಿ ಇವನಂತಹ ಒಳ್ಳೆಯ ಸ್ವಭಾವದ ಹುಡುಗನೇ ಇಲ್ಲ. ಈತನು ತನ್ನ ಮಾತಾಮಹನನ್ನು ಕೊಂದನೆಂದು ಹೇಳುವುದು ನಂಬುಗೆಗೆ ತಕ್ಕುದಾಗಿಲ್ಲ.

ಕುಂದ—ದೇವರು ನಿಮಗೆ ಮಂಗಳವನ್ನುಂಟುಮಾಡಲಿ. ಈ ಸಂದರ್ಭದಲ್ಲಿ ನಾನು ನಿಮ್ಮ ಹಿತೋಕ್ತಿಗೆ ಆವ ಪ್ರತ್ಯುಪಕಾರವನ್ನೂ ಮಾಡಲಾರದವಳಾಗಿರುವೆನು.

ಪರಂ—ನಂದಕುಮಾರನು ನಿರ್ದೋಷಿಯೆಂದು ಸಮರ್ಥನ ಮಾಡಿ ಪೋಲೀಸಿನವರಿಂದ ಆತನಿಗೆ ಮುಕ್ತಿಲಾಭವನ್ನುಂಟುಮಾಡಿಕೊಡುವುದಾದರೆ, ಆಗ ನನ್ನ ಶ್ರಮಕ್ಕೆ ಸರಿಯಾದ ಪುರಸ್ಕಾರವೇ ದೊರೆತಂತಾಗುವುದು. ನನಗೆ ಇದಕ್ಕಿಂತಲೂ ಬೇರೆಯಾದ ಪುರಸ್ಕಾರವು ಬೇಕಿಲ್ಲ. ಆದರೆ, ಕುಂದನಂದಿನಿ! ನೀನು ಮಟ್ಟಿಗೆ ನನಗೆ ಒತ್ತಾಸೆಯಾಗಿ ನಿಲ್ಲಬೇಕಾದೀತು.

ಪರಂತಪನು ಕುಂದನಂದಿನಿಗೆ ಹೀಗೆ ಹೇಳಿದ ಬಳಿಕ ಮತ್ತೊಂದು ಸಲ ಬಂದು ನೋಡುವೆನೆಂದು ತಿಳಿಸಿ ನಂದಕುಮಾರನನ್ನು ಕರೆದುಕೊಂಡು ಹೊರಗೆ ಬಂದನು. ಪೋಲೀಸಿನವರು ನಂದಕುಮಾರನನ್ನು ಒಂದು ಬಂಡಿಯಲ್ಲಿ ಕುಳ್ಳಿರಿಸಿ ಕೊಂಡು ಹೊರಡುವಾಗ, ಪರಂತಪನು ಅವರನ್ನು ಕುರಿತು—ಬಹು ಬುದ್ಧಿ ಯಿಂದ ಕೆಲಸಮಾಡಿದರೆ ನಿಮ್ಮೆಲ್ಲರಿಗೂ ಪದೋನ್ನತಿಯೂ ಧನಲಾಭವೂ ಉಂಟಾ ಗುವುದು, ಎಂದನು.

---

## ಒಂಬತ್ತನೆಯ ಸಂಧಿ

### ವಿಷಮ ಭ್ರಮ

ಪರಂತಪನು ತಾನು ಮೊದಲು ತಿಳಿಸಿದ್ದಂತೆಯೇ ಮತ್ತೊಂದು ಸಲ ಕುಂದ ನಂದಿನಿಯ ಬಳಿಗೆ ಬಂದು ಇಂತೆಂದನು :—

"ಕುಂದ! ಈ ವಿಷಯದಲ್ಲಿ ನಿನಗೆ ಗೊತ್ತಿರುವುದೆಲ್ಲವನ್ನೂ ಇದ್ದುದು ಇದ್ದಹಾಗೆಯೇ ತಿಳಿಸು. ಹಾಗಿಲ್ಲದಿದ್ದರೆ ನಾನು ಈ ವಿಷಯದಲ್ಲಿ ಕೈ ಹಾಕುವುದೇ ಇಲ್ಲ. ಈಗ ನೋಡು; ನಮ್ಮ ಅನಂತರತ್ನ ಮಹಾಶಯನು ನಂದಕುಮಾರನ ಮೇಲೆಯೇ ಅಪರಾಧವನ್ನು ಹೊರಿಸಿರುವನು. ನಂದಕುಮಾರನು ನಿನ್ನೆಯ ದಿನ ಇಲ್ಲಿಗೆ ಬರವ ಸುದ್ದಿಯು ನಿನಗೇನಾದರೂ ಗೊತ್ತುಂಟೇ?"

ಕುಂದ—ಗೊತ್ತುಂಟು, ಮಹಾಶಯ!

ಪರಂ—ನಿನಗೆ ಹೇಗೆ ಗೊತ್ತು?

ಕುಂದ—ನನಗೆ ಆತನು ಒಂದು ಕಾಗದವನ್ನು ಬರೆದಿದ್ದನು.

ಪರಂ—ಆ ಪತ್ರವು ನಿನ್ನಲ್ಲಿರುವುದೇನು?

ಕುಂದ—ಇರುವುದು ; ತೆಗೆದುಕೊಳ್ಳೋಣವಾಗಲಿ (ಪತ್ರವನ್ನು ಕೊಡುವಳು.)

ಪರಂತಪನು ಪತ್ರವನ್ನು ತೆಗೆದುಕೊಂಡು—ಕುಂದ ! ನಾನು ಈ ಪತ್ರವನ್ನು ಓದಬಹುದಷ್ಟೇ ? ಎಂದನು.

ಕುಂದನಂದಿನಿಯು ಬಲುಹೊತ್ತು ಚಿಂತಿಸಿದವಳಾಗಿ ನಾಚುಗೆ ಪಟ್ಟುಕೊಂಡು—ಮಹಾಶಯ ! ತಾವು ಓದಬಹುದು. ಇದರಿಂದ ತಮಗೆ ಅನೇಕ ಸಂಗತಿಗಳು ಗೋಚರಕ್ಕೆ ಬರಬಹುದು, ಎಂದಳು.

ಪರಂತಪನು ಪತ್ರವನ್ನು ಬಿಚ್ಚಿ ನೋಡಿದನು. ಅದೊಂದು ಪ್ರೇಮಪತ್ರವಾಗಿದ್ದಿತು. ಇದರಲ್ಲಿ ನಂದಕುಮಾರನು ಕುಂದನಂದಿನಿಯನ್ನು ಹೇಗೆ ಪ್ರೀತಿಸುತ್ತಿದ್ದನೆಂಬುದು ಉಕ್ತವಾಗಿದ್ದಿತು. ಅದನ್ನು ನಮ್ಮ ಪ್ರಿಯಪಾಠಕ ಮಹಾಶಯರು ಗೋಪ್ಯವಾಗಿ ಓದಬೇಕೆಂಬುದೇ ನಮ್ಮ ಸವಿನಯ ಪ್ರಾರ್ಥನೆ. ಅದರ ಒಕ್ಕಣೆಯು ಈ ರೀತಿಯಾಗಿದ್ದಿತು.

ಪ್ರೇಮ ಪತ್ರ

ಪ್ರಿಯತಮೆ ! ನನ್ನ ಆನಂದದ ಕಂದ, ಕುಂದನಂದಿನಿ !

ನಿನ್ನ ಪ್ರೇಮಭಿಕ್ಷೆಗಾಗಿ ಆವಾಗಲೂ ಕಾದುಕೊಂಡಿರುವ ನಂದಕುಮಾರನ ಸಾನಂದಾಶೀರ್ವಾದಗಳು.

ನಾನು ನನ್ನ ಮಾತಾಮಹನ ಆಗ್ರಹಕ್ಕೆ ಪಾತ್ರವಾಗಿ ಮನೆಯಿಂದ ಬಹಿಷ್ಕರಿಸಲ್ಪಟ್ಟಂದಿನಿಂದಲೂ ನನಗೆ ಒದಗಿ ಬಂದ ವಿಪತ್ತುಗಳ ಕಾರ್ಯಲಕ್ಷಣವನ್ನು ಈ ಕ್ಷುದ್ರ ಪತ್ರದಲ್ಲಿ ವರ್ಣಿಸಲಾರದವನಾಗಿರುವೆನು. ಅಂತಹ ಸಮಯಗಳಲ್ಲೆಲ್ಲಾ ನಿನ್ನ ಪ್ರೇಮವೊಂದೇ ನನಗೆ ಬೆಂಬಲವಾಗಿದ್ದುಕೊಂಡು ಕಾಪಿಟ್ಟುದು. ಹೆಂಗುಸರು ಆವಾಗಲೂ ಪ್ರೇಮದ ವಿಚಾರದಲ್ಲಿ ಸಂಶಯವುಳ್ಳವರಾಗಿಯೇ ಇರುವರು. ನಿನಗೂ ಆ ಸಂಶಯವು ಇದ್ದೇ ಇರಬಹುದು. ನಾನು ಸರ್ವ ಪ್ರಕಾರದಿಂದಲೂ ಅಸದ್ವ್ಯವಹಾರದಲ್ಲಿ ಕಾಲಿಟ್ಟು ಮತ್ತೊಬ್ಬ ರಮಣಿಯ ಅಯೋಗ್ಯವಾದ ಪ್ರೇಮಕ್ಕೆ ಎಂದಿಗೂ ಆಸ್ಪದವನ್ನಿತ್ತಿಲ್ಲ. ಮದಯಂತಿಯು—ಹೇಳುವುದಕ್ಕೆ ನಾಚುಗೆಯಾಗುವುದು, ಮದಯಂತಿಯು ನನ್ನಲ್ಲಿ ಪ್ರೇಮಭಿಕ್ಷೆಗಾಗಿ ಕಾದಿದ್ದಳು. ನನ್ನಿಂದ ಆಕೆಯ ಮನೋರಥವು ಪೂರ್ಣವಾಗದಿರಲು, ಆಕೆಯು ತನ್ನ ಕೌಶಲದಿಂದ ನನ್ನನ್ನು ಮನೆಯಿಂದ ಹೊರಡಿಸಿದಳು. ನನಗೆ ಮತ್ತೊಂದು ವಿಪತ್ತು ಕಾದಿದ್ದಿತು. ಅರವಿಂದ ಸುಂದರಿಯೆಂಬ ಮತ್ತೊಬ್ಬ ಯುವತಿಯು

ನನ್ನನ್ನು ಅತಿಯಾಗಿ ಪ್ರೀತಿಸಿ ನನ್ನಿಂದ ಆವ ಪ್ರಯೋಜನವನ್ನೂ ಪಡೆಯದೆಯೇ ನನಗಾಗಿ ಪ್ರಾಣಬಿಟ್ಟಳೆಂದು ಕೇಳಿದೆನು. ನನ್ನನ್ನು ಇತರ ಸ್ತ್ರೀಯರು ಅದೇಕೆ ಪ್ರೀತಿಸುವರೋ ಕಾಣೆನು. ನನ್ನ ಪ್ರೇಮವು ನಿನ್ನನ್ನು ಹೊರತಾಗಿ ಮತ್ತೊಬ್ಬರಲ್ಲಿ ಅದೇಕೆ ನಡುವುದಿಲ್ಲವೋ ಅದನ್ನೂ ಕಾಣೆನು. ನನ್ನ ಪಿತಾಮಹನು ಕನಿಕರಗೊಂಡು ಮನೆಗೆ ಬರಬೇಕೆಂದು ನನಗೊಂದು ಪತ್ರವನ್ನು ಬರೆದನು. ದೊಡ್ಡವರ ಮಾತಿಗೆ ಪ್ರತಿಯಾಗಿ ವರ್ತಿಸಬಾರದೆಂದು ನಾನು ಬರುವುದಾಗಿ ಅವನಿಗೆ ಪ್ರತ್ಯುತ್ತರವನ್ನು ಬರೆದೆನು.

ಕುಂದ! ನಾನು ಇಷ್ಟರಲ್ಲಿಯೇ ಹೊರಟು ಬಂದು ನಿನ್ನ ದರ್ಶನದಿಂದ ನನ್ನ ವಿರಹತಾಪವನ್ನು ಶಾಂತಗೊಳಿಸುವೆನು. ನಾನು ಮನೆಯನ್ನು ತ್ಯಾಗಮಾಡಿದಾಗ, ನಿನ್ನನ್ನೂ ತ್ಯಾಗಮಾಡಿದೆನೆಂದು ನೀನು ಭಾವಿಸಿರುವೆಯಾ? ನಾನು ಮನೆಯನ್ನು ಬಿಟ್ಟುಹೋಗುವಾಗ ನಿನ್ನ ಪಾರ್ಥಿವಶರೀರವನ್ನು ಇಲ್ಲಿಯೇ ಬಿಟ್ಟು ನಿನ್ನ ದೇವತಾ ಮೂರ್ತಿಯನ್ನು ನನ್ನ ಹೃದಯ ಸಿಂಹಾಸನದ ಮೇಲೆ ಪ್ರತಿಷ್ಠೆಮಾಡಿಕೊಂಡು ಅದನ್ನು ಆರಾಧಿಸುತ್ತಾ ಯತ್ನವಿಲ್ಲದೆಯೇ ತೆರಳಿದೆನು. ನಾನು ಹೊರಡುವಾಗ ನನಗುಂಟಾದ ವಿಯೋಗದುಃಖವನ್ನು ನೀನೇನಾದರೂ ಅರಿಯ ಬಲ್ಲೆಯಾ? ಕೇವಲ ಪರಾಧೀನರಾದ ನಾವು ಎಲ್ಲವನ್ನೂ ಬಾಯ ಮುಚ್ಚಿಕೊಂಡೇ ಸಹಿಸಿಕೊಂಡಿರಬೇಕು. ಇಷ್ಟು ದೀರ್ಘಕಾಲದ ವಿಯೋಗದಿಂದ ನೀನು ಬೇಸರಪಟ್ಟಿರಬಹುದು—ಇಲ್ಲವೇ, ನನ್ನ ಮೇಲೆ ಆಗ್ರಹವನ್ನಾದರೂ ತೋರಿರಬಹುದು. ಇದಕ್ಕಾಗಿ ನಾನು ಅಂತರ್ಯದಲ್ಲಿ ಕ್ಷಮೆಯನ್ನು ಬೇಡುವವನಾಗಿರುವೆನು.

ನನ್ನ ಈ ಪತ್ರವನ್ನು ನೋಡಿದ ಮೇಲೆ ನಿನಗೆ ಒಂದು ನಿಮಿಷವೂ ಒಂದು ಯುಗವಾಗಿ ಪರಿಣಮಿಸ ಬಹುದು. ಇದನ್ನು ಆರಾದರೂ ಯತ್ನವಿಲ್ಲದೆಯೇ ಸಹಿಸಬೇಕಾಗಿರುವುದು.

"ನಿನ್ನ ನಿರ್ದುಷ್ಟ ಪ್ರಣಯಾಭಿಲಾಷಿ,

"ನಂದಕುಮಾರ."

ಪರಂತಪನು ಪತ್ರವನ್ನು ಓದಿದ ಬಳಿಕ ಅದನ್ನು ಮತ್ತೆ ಅವಳಿಗೆ ಕೊಟ್ಟು— ಕುಂದ! ನಿನ್ನೆಯ ದಿನ ನೀನು ನಂದಕುಮಾರನನ್ನು ಆವಾಗ ನೋಡಿದೆ? ಕಮಲಾಕಾಂತನ ಹತ್ಯೆಗೆ ಮೊದಲೇ, ಆಮೇಲೆಯೇ? ಎಂದು ಕೇಳಿದನು.

ಕುಂದ—ಆಮೇಲೆ,—ಪೋಲೀಸಿನವರು ಅವನನ್ನು ದಸ್ತಗಿರಿ ಮಾಡಿದ ಮೇಲೆ ನಾನು ಆತನನ್ನು ನೋಡಿದುದು.

ಪರಂ—ಈ ಪತ್ರದ ವಿಷಯವು ಮತ್ತಾರಿಗೆ ಗೊತ್ತು ?

ಕುಂದ—ತಮ್ಮ ಹೊರತಾಗಿ ಮತ್ತಾರಿಗೂ ಗೊತ್ತಿಲ್ಲ.

ಪರಂ—ಹಾಗಾದರೆ ಈ ಪತ್ರವನ್ನು ಮತ್ತಾರಿಗೆ ತೋರುವುದರಿಂದಲೂ ಪ್ರಯೋಜನವಿಲ್ಲ.

ಕುಂದ—ತಮ್ಮ ಮನದಲ್ಲಿ ಹೇಗೆ ಹೊಳೆಯುವುದು ? ನಂದನಿಗೆ ಉತ್ತಾರಣೆಯುಂಟೆ ?

ಪರಂ—ನೀನು ನಿಶ್ಚಿಂತೆಯಾಗಿರಮ್ಮಾ ! ಪರಂತಪನು ತನ್ನ ಬಾಯಿಂದ ಆತ್ಮ ಪ್ರಶಂಸೆಯನ್ನು ಮಾಡಿಕೊಳ್ಳತಕ್ಕವನಲ್ಲ. ನಂದಕುಮಾರನನ್ನು ಬೇಗನೆಯೇ ಬಿಡುಗಡೆ ಮಾಡಿಸಿ, ಬಳಿಕ ಆತನಿಗೂ ನಿನಗೂ ವಿವಾಹ ಮಹೋತ್ಸವವನ್ನು ಆಗಮಾಡಿಸಿ ನನಗೆ ಸಲ್ಲಬೇಕಾದ ಪುರಸ್ಕಾರವನ್ನು ಪಡೆದುಕೊಂಡು ಇಲ್ಲಿಂದ ತೆರಳುವೆನು.

ಕುಂದ—ಪರಂತಪ ಮಹಾಶಯ ! ನಿಮ್ಮ ಮಾತನ್ನು ಕೇಳಿ ನನಗೆ ಎಷ್ಟೋ ಧೈರ್ಯವುಂಟಾದುದು. ತಾವು ಆರೀತಿಯಾಗಿ ಮಾಡಿಸುವುದಾದರೆ, ನನ್ನನ್ನು ಉದ್ಧಾರಮಾಡಿದ ಪುಣ್ಯಕ್ಕೆ ತಾವು ಭಾಗಿಗಳಾಗುವಿರಿ. ಭಗವಂತನು ನಿಮಗೆ ಮಂಗಳವನ್ನುಂಟುಮಾಡಲಿ.

ಪರಂ—ಕುಂದ ! ನಾನು ನಿನ್ನೊಡನೆ ಈ ಮನೆಯ ಸನ್ನಿವೇಶವೆಲ್ಲವನ್ನೂ ಒಂದು ಸಲ ಚೆನ್ನಾಗಿ ನೋಡಬೇಕೆಂದು ಅಭಿಪ್ರಾಯ ಪಡುವೆನು. ಆಗಬಹುದಷ್ಟೇ ?

ಕುಂದನಂದಿನಿಯು, ಹಾಗೆಯೇ ಆಗಬಹುದೆಂದು ಹೇಳಿ ಪರಂತಪನಿಗೆ ಮನೆಯೆಲ್ಲವನ್ನೂ ತೋರಿದಳು. ಆದರೆ ಒಂದು ಕೋಣೆ ಮಟ್ಟಿಗೆ ಒಳಗಡೆಯಿಂದ ನಿರ್ಬಂಧಿಸಲ್ಪಟ್ಟಿದ್ದಿತು. ಪರಂತಪನು ಇದನ್ನು ನೋಡಿ—ಕುಂದ ! ಈ ಕೋಣೆಯೊಳಗೆ ಆರಿರುವರು ? ಎಂದು ಪ್ರಶ್ನೆಮಾಡಿದನು.

ಕುಂದ—ಈ ಕೋಣೆಯಲ್ಲಿ ಮಾರಕುಮಾರನ ಬಾಲ್ಯ ಮಿತ್ರನಾದ ರಾಮರಮಾರಮಣರಾಯನೆಂಬುವನು ವಾಸವಾಗಿದ್ದನಂತೆ. ನಾನು ಇಷ್ಟು ದಿನಗಳೂ ಈ ಮನೆಯಲ್ಲಿರಲಿಲ್ಲ. ನಾನು ರೋಗದ ನಿಮಿತ್ತದಿಂದ ಒಬ್ಬ ಬಂಧುವಿನ ಮನೆಯಲ್ಲಿ ಇದ್ದುಕೊಂಡಿದ್ದೆನು. ನಿನ್ನೆಯ ರಾತ್ರಿಯೇ ನಾನು ಇಲ್ಲಿಗೆ ಬಂದುದು.

ಪರಂತಪನು ಈ ಮಾತನ್ನು ಕೇಳಿದ ಬಳಿಕ, ಬಾಗಿಲನ್ನು ತಟ್ಟಿನೋಡಿದನು ; ಉತ್ತರವಿಲ್ಲ. ಆತನ ಹೆಸರಹಿಡಿದು ಕೂಗಿದನು ; ಅದಕ್ಕೂ ಉತ್ತರ ಬರಲಿಲ್ಲ. ಪರಂತಪನು ಯತ್ನವಿಲ್ಲದೆಯೇ ಬಾಗಿಲನ್ನು ಒಡೆದು ಒಳಗೆ ಹೋಗಿ ಕುಂದನಂದಿನಿಯನ್ನೂ ಬರಮಾಡಿಕೊಂಡನು. ಸುತ್ತಲೂ ನೋಡಲಾಗಿ ಆ ಮನೆಯಲ್ಲಿ ಆರೂ ಇರಲಿಲ್ಲ. ಕಿಟಕಿಯ ಸಲಾಕೆಗಳು ಹಿಗ್ಗಲಿಸಲ್ಪಟ್ಟಿದ್ದು, ಒಂದು ಬಟ್ಟೆಯ ಹಗ್ಗವು ಕೆಳಗಡೆ ಇಳಿ ಬಿದ್ದಿದ್ದಿತು. ಆ ಕೋಣೆಯಲ್ಲಿ ರಾಮರಮಾರಮಣನ ಒಂದು ಪದಾರ್ಥವಾದರೂ ಕಂಡು ಬರಲಿಲ್ಲ.

ಇದನ್ನು ಕಂಡ ಪರಂತಪನ ಮನದಲ್ಲಿ ಅದೊಂದು ಆಸೆಯು ಅಂಕುರಿತವಾಯಿತು. ಇದೊಂದು ಕಾರಣದಿಂದ ನಂದಕುಮಾರನನ್ನು ನಿರ್ದೋಷಿಯನ್ನಾಗಿ ಮಾಡಬಹುದೆಂದು ಪರಂತಪನು ತನ್ನೊಳಗೆ ತಾನೇ ಹೇಳಿಕೊಂಡನು. "ಇಲ್ಲಿಯ ವರೆಗೂ ಹತ್ಯಾಕಾರಿಯಾರೆಂಬುದು ಸಿದ್ಧಾಂತವಾಗಿಲ್ಲ. ಪೋಲೀಸಿನವರೇನೋ ನಂದಕುಮಾರನನ್ನು ದಸ್ತಗಿರಿ ಮಾಡಿ ಕರೆದುಕೊಂಡು ಹೋಗಿರುವರು. ಈ ಕೋಣೆಯಲ್ಲಿನ ದೃಶ್ಯವನ್ನು ನೋಡಿದರೆ, ರಾಮರಮಾರಮಣನೆಂಬಾತನೇ ಈ ಕೃತ್ಯವನ್ನು ನಡೆಯಿಸಿ ಪಲಾಯನವಾಗಿರಬೇಕು ; ಇಲ್ಲದಿದ್ದರೆ ಆತನು ಈ ರೀತಿಯಾಗಿ ಪಲಾಯನವಾಗಲು ಕಾರಣವೇನಿದ್ದೀತು ?" ಎಂದು ಕುಂದನಂದಿನಿಯೊಡನೆ ಮಾತನಾಡಿದ ಬಳಿಕ ಪರಂತಪನು ಮಾರಕುಮಾರನನ್ನು ನೋಡಿಕೊಂಡು ಬರುವುದಕ್ಕಾಗಿ ತೆರಳಿದನು. ಪರಂತಪನು ನೋಡುವುದಕ್ಕೆ ಬಂದಾಗ ಮಾರಕುಮಾರನು ಇನ್ನೂ ಹಾಸುಗೆಯ ಮೇಲೆಯೇ ಮಲಗಿದ್ದನು. ಆಗ ಪರಂತಪನು—ಮಾರಕುಮಾರ! ಇದೇನು! ಇಷ್ಟು ಹೊತ್ತಾದರೂ ಹಾಸುಗೆಯಿಂದ ಏಳಲಿಲ್ಲ. ಆರೋಗ್ಯವಷ್ಟೇ ? ಎಂದು ಪ್ರಶ್ನೆಮಾಡಿದನು.

ಮಾರ—ಆರೋಗ್ಯವೆಂದರೇನು, ಮಹಾಶಯ ? ನಮ್ಮ ಪಿತಾಮಹನು ಮಡಿದು ಬಿದ್ದಿರುವಾಗ, ಆರೋಗ್ಯವೆಲ್ಲಿಂದ ಬರಬೇಕು ? 'ಮೊದಲೇ ಕೊಳೆ, ಅದರ ಮೇಲೆ ಮಳೆ' ಎನ್ನುವಂತೆ ರೋಗ, ಅದರ ಮೇಲೆ ಮನೋರೋಗ—ಎಂದಮೇಲೆ, ನಾವು ಉಳಿವುದೆಂತು ? ಅಂತೂ ನಾವುಗಳೆಲ್ಲರೂ ಸಾಯುವ ಹೊತ್ತು ಬಂದಿತು. ಹತ್ತಾರು ಜನರಿಗೆ ಉಪಕಾರಿಯಾಗಿದ್ದ ನಮ್ಮ ಪಿತಾಮಹನು ಬದುಕಿದ್ದಿದ್ದರೆ, ಎಷ್ಟೋ ಚೆನ್ನಾಗಿರುತ್ತಿದ್ದಿತು. ಬಲು ಮಾತಿನಿಂದೇನು ? ಒಳ್ಳೆಯವರಿಗೆ ಕಾಲವಲ್ಲ. ಆತನು ಸತ್ತುಹೋಗಿ ನಾವು ಬದುಕಿರಬೇಕಾಗಿದೆ.

ಪರಂ—ಮಾರ ಮಹಾಶಯ ! ಶೋಕದಿಂದ ಎದೆಗೆಟ್ಟು ಕೂಡುವುದು ಒಳ್ಳೆಯದಲ್ಲ. ನೀನು ಎಷ್ಟು ವ್ಯಸನ ಪಟ್ಟರೂ ನಿನ್ನ ಪಿತಾಮಹನು ಮತ್ತೆ ಬರುವಂತಿಲ್ಲ. ಆದುದರಿಂದ ಅಪರಿಹಾರ್ಯವಾದ ವಸ್ತುವಿಗಾಗಿ ಆರೂ ಕೊರಗಿ

ಕೊರಗಿ ಸಾಯಬಾರದು. ಈಗ ಗುರುತರವಾದ ಕಾರ್ಯವು ಒದಗಿ ಬಂದಿರುವುದು. ನಿಮ್ಮ ಪಿತಾಮಹನನ್ನು ಕೊಲೆ ಮಾಡಿದವರಾರೆಂಬುದನ್ನು ಕಂಡು ಹಿಡಿಯ ಬೇಕಾದುದು ಎಲ್ಲರಿಗೂ ಅವಶ್ಯಕರ್ತವ್ಯವಾಗಿರುವಲ್ಲಿ ನೀನು ಹೀಗೆ ಮಲಗಿರು ವುದು ಸರಿಯಲ್ಲ. ಈ ಮನೆಯಲ್ಲಿ ನೀವುಗಳೇ ದೊಡ್ಡವರಾಗಿ ಸುಮ್ಮನಿರುವುದು ತರ ವಲ್ಲ. ನೀವುಗಳೆಲ್ಲರೂ ನನ್ನನ್ನು ಬಲ್ಲವರಾಗಿರುವಿರಿ. ಇದರ ಮೇಲೂ ನನ್ನ ಸ್ವಭಾವವನ್ನು ನೀವೆಲ್ಲರೂ ಚೆನ್ನಾಗಿಯೂ ಅರಿತವರಾಗಿಯೇ ಇರುವಿರಿ. ಹೀ ಗಿರುವಲ್ಲಿ ನೀವುಗಳು ನನಗೆ ಒತ್ತಾಸೆಯಾಗಿ ಬಂದು ನಿಲ್ಲದ ಮೇಲೆ, ನಾನು ಏನು ಕೆಲಸ ಮಾಡುವುದಕ್ಕಾದೀತು ?

ಮಾರ—ತಾವು ನಂದಕುಮಾರನ ಮೇಲೆ ಸಂಶಯವಿಟ್ಟು ಕೆಲಸಮಾಡು ವುದಾದರೆ, ನನ್ನನ್ನು ಕ್ಷಮಿಸೋಣವಾಗಲಿ. ನಾನು ನಂದಕುಮಾರನಿಗೆ ವಿರುದ್ಧ ವಾಗಿ ಆವ ಕೆಲಸವನ್ನೂ ಮಾಡುವವನಾಗಿಲ್ಲ.

ಪರಂ—ನಿನಗೆ ಇದು ಸಲ್ಲದ ಭ್ರಾಂತಿ ; ನಂದಕುಮಾರನು ಸರ್ವಪ್ರಕಾರ ದಿಂದಲೂ ನಿರ್ದೋಷಿ. ನನಗಾದರೋ ಆತನ ಮೇಲೆ ಕೊಂಚವೂ ಸಂದೇಹವಿಲ್ಲ.

ಮಾರ—ಮಹಾಶಯ ! ತಮಗೆ ಆರ ಮೇಲೆ ಸಂಶಯವುಂಟಾಗಿರು ವುದು ? ತಿಳಿಸೋಣವಾಗಲಿ.

ಪರಂ—ನಿನ್ನ ಬಾಲ್ಯಮಿತ್ರನೆಂದು ಕರೆಯಿಸಿ ಕೊಳ್ಳುವ ರಾಮರಮಾ ರಮಣನ ಮೇಲೆ ನನಗೆ ಸಂಶಯವು ತೋರಿ ಬರುತ್ತಿರುವುದು. ಈಗ ಆತನೆಲ್ಲಿ ?

ಮಾರ—ನನಗೆ ಗೊತ್ತಿಲ್ಲ ; ಆತನು ತನ್ನ ಕೋಣೆಯಲ್ಲಿಯೇ ಇರಬೇಕು. ನಮ್ಮ ಪಿತಾಮಹನು ಕೊಲೆಯಾದ ಮೇಲೆ ನಾನು ಆತನನ್ನು ನೋಡಲಿಲ್ಲ.

ಪರಂ—ಅತನು ಅವನ ಕೋಣೆಯೊಳಗಿಲ್ಲ. ನಾನು ಈಗ ತಾನೇ ಅಲ್ಲಿಗೆ ಹೋಗಿ ಬಂದೆನು. ಆತನು ನಿನ್ನೆಯ ರಾತ್ರಿಯಲ್ಲಿಯೇ ಕಿಟಕಿಯ ಸಲಾಕೆಗಳನ್ನು ಸಡಲಿಸಿ ಬಟ್ಟೆಯ ಹಗ್ಗದಿಂದ ಕೆಳಗಿಳಿದು ಎಲ್ಲಿಯೋ ಮಾಯವಾಗಿ ಬಿಟ್ಟಿರು ವನು. ಈಗ ಅವನು ಎಲ್ಲಿರುವನು ? ಇದನ್ನು ನಾನು ತಿಳಿಯಬೇಕಾಗಿರುವುದು. ನೀನು ಕೃಪೆಯಿಟ್ಟು ಆತನ ವಾಸಸ್ಥಾನವನ್ನು ನನಗೆ ತಿಳಿಸು ; ನಾನು ಅವನನ್ನು ದಸ್ತಗಿರಿ ಮಾಡಬೇಕಾಗಿರುವುದು.

ಮಾರ—ಇದೊಂದು ಆಶ್ಚರ್ಯದ ಸುದ್ದಿಯೇ ಸರಿ ; ಆತನು ನನಗೆ ಇಷ್ಟು ಬಂಧುವಾಗಿದ್ದರೂ, ನಾನು ಆತನ ವಾಸಸ್ಥಾನವನ್ನು ಮಟ್ಟಿಗೆ ಅರಿತು ಕೊಳ್ಳಲಿಲ್ಲ.

ಪರಂ—ಇದೆಂತಹ ಮಾತು ?

ಮಾರ—ನಾವಿಬ್ಬರೂ ಬಾಲ್ಯದಲ್ಲಿ ಒಂದೆಡೆಯಲ್ಲಿಯೇ ವ್ಯಾಸಂಗ ಮಾಡು ತ್ತಿದ್ದೆವು. ಇಷ್ಟೇ ನಮ್ಮ ಬಂಧುತ್ವಕ್ಕೆ ಕಾರಣವು. ಈ ಆಧಾರದ ಮೇಲೆಯೇ ಸ್ನೇಹಾಲಾಪವು.

ಪರಂ—ಆತನು ಇಲ್ಲಿ ಮತ್ತೆಲ್ಲಿಯಾದರೂ ವಾಸಕ್ಕೆ ಏರ್ಪಡಿಸಿಕೊಂಡಿರ ಬಹುದೇ ?

ಮಾರ—ಆ ವಿಚಾರವು ನನಗೆ ತಿಳಿಯದು. ಈ ನಗರವನ್ನು ಆವಾಗಲೂ ನೋಡಿಲ್ಲವೆಂಬ ಕಾರಣದಿಂದ ಆತನು ನಮ್ಮಲ್ಲಿಯೇ ಬಂದು ಇಳಿದುಕೊಂಡನು ; ಆದುದರಿಂದ ಅವನಿಗೆ ಈ ವೂರಲ್ಲಿ ಮತ್ತೆಲ್ಲಿಯೂ ವಾಸಸ್ಥಾನವಿದ್ದಂತೆ ನನಗೆ ಕಂಡು ಬರುತ್ತಿಲ್ಲ.

ಪರಂ—ಹಾಗಾದರೆ ಆತನ ವಿಷಯದಲ್ಲಿ ನಿನಗೆ ಹೆಚ್ಚಿನ ಸುದ್ದಿಯೇನೂ ಗೊತ್ತಿಲ್ಲವೇ ?

ಮಾರ—ಮತ್ತೇನೂ ಗೊತ್ತಿಲ್ಲ.

ಪರಂತಪನು ಅಲ್ಲಿಂದೆದ್ದು ದಾಸದಾಸಿಯರ ಬಳಿಗೆ ಬಂದು, ಅವರ ಪ್ರಧಾನ ಭೃತ್ಯನನ್ನು ಕುರಿತು—ಈ ಮನೆಗೆ ಸೇರಿದ ಹಾಗೆ ನೀವೆಷ್ಟು ಜನ ಭೃತ್ಯರಿರುವಿರಿ? ಎಂದು ಪ್ರಶ್ನೆ ಮಾಡಿದನು.

ಭೃತ್ಯ—ಒಟ್ಟು ಹತ್ತು ಮಂದಿ ಯಿರುವರು.

ಪರಂ—ಎಲ್ಲರೂ ಇರುವರಷ್ಟೇ ?

ಭೃತ್ಯ—ಒಬ್ಬ ದಾಸಿ ಹೊರತಾಗಿ ಉಳಿದವರೆಲ್ಲರೂ ಇರುವರು.

ಪರಂ—ಆಕೆಯು ಎಲ್ಲಿಗೆ ಹೋಗಿರುವಳು ?

ಭೃತ್ಯ—ಆಕೆಯು ತಾಯಿಯನ್ನು ನೋಡಿಕೊಂಡು ಬರುವುದಾಗಿ ಹೇಳಿ ಹೋಗಿರುವಳೆಂದು ಕೇಳಿದೆನು. ಆಕೆಯ ತಾಯಿಯು ಇಲ್ಲಿಗೆ ಐದಾರು ಮೈಲಿಗಳ ದೂರದ ಗ್ರಾಮದಲ್ಲಿ ವಾಸವಾಗಿರುವಳು.

ಪರಂತಪನು ಆ ಗ್ರಾಮದ ಹೆಸರನ್ನು ತನ್ನ ಹಸ್ತಪುಸ್ತಕದಲ್ಲಿ ಗುರುತು ಮಾಡಿಕೊಂಡು ಮುಂದಕ್ಕೆ ತೆರಳಿದನು.

---

## ಹತ್ತನೆಯ ಸಂಧಿ

### ರುಗ್ಣ ಶಯ್ಯೆ

ಪ್ರಾಯಿಕವಾಗಿ ಎರಡು ಗಂಟೆಗಳಾದ ಬಳಿಕ, ಪರಂತಪನು ದಾಸಿಯ ತಾಯಿಯ ಗ್ರಾಮಕ್ಕೆ ಹೋಗಿ ಅಲ್ಲಿ ಆಕೆಯ ಮನೆಯನ್ನು ಕಂಡು ಹಿಡಿದುಕೊಂಡು ಬಾಗಿಲಲ್ಲಿ ಬಂದು ನಿಂತು—ಮನೆಯಲ್ಲಿ ಆರಿದ್ದೀರಮ್ಮಾ? ಎಂದು ಕೂಗಿದನು.

ಒಬ್ಬ ಮುದುಕಿಯು ಬಂದು ಬಾಗಿಲನ್ನು ತೆರೆದಳು. ಪರಂತಪನು ಹೊರಗಿದ್ದುಕೊಂಡೇ ಮನೆಯೊಳಗೆ ನೋಡಲಾಗಿ ಒಬ್ಬ ಹುಡುಗಿಯು ರೋಗ ಪೀಡಿತೆಯಾಗಿ ಹಾಸುಗೆಯ ಮೇಲೆ ಮಲಗಿ ನರಳುತ್ತಿದ್ದಳು. ಆ ಮುದುಕಿಯೇ ದಾಸಿಯ ತಾಯಿಯೆಂದು ತಿಳಿದು, ಪರಂತಪನು—ಆ ರೋಗಪೀಡಿತೆಯಾದ ಹುಡುಗಿಯು ಹೇಗಿರುವಳಮ್ಮಾ? ಎಂದು ಪ್ರಶ್ನೆಮಾಡಿ ಉತ್ತರ ಬರುವುದಕ್ಕೆ ಮುಂಚೆಯೇ ಮನೆಯೊಳಗೆ ನುಗ್ಗಿ ಆ ಹುಡುಗಿಯ ಬಳಿಯಲ್ಲಿ ಬಂದು ಕುಳಿತು ವೈದ್ಯನಂತೆ ಆಕೆಯ ಕೈಯನ್ನು ಹಿಡಿದು ನಾಡಿಯನ್ನು ಪರೀಕ್ಷಿಸುವನಂತೆ ನಟನೆ ಮಾಡಿದನು. ಮುದುಕಿಯು ಆವನೋ ಭೂತದಯಾ ಪಶ್ಚಾತ್ತಾಪದ ವೈದ್ಯನು ಬಂದಿರುವನೆಂದು ತಿಳಿದು, ಹುಡುಗಿಯನ್ನು ನೋಡಿ—ಮಗು! ಈಗ ಹೇಗಿರುವೆಯಮ್ಮಾ? ಯಾತನೆಯು ಕೊಂಚ ಮಟ್ಟಿಗೆ ಕಡಮೆಯಾಗಿರಬಹುದಲ್ಲವೇ? ಎಂದು ಪ್ರಶ್ನೆಮಾಡಿದಳು.

ಹುಡುಗಿಯು ಆ ಪ್ರಶ್ನೆಗೆ ಉತ್ತರವಾಗಿ ಮುಗುಳು ನಗೆಯನ್ನು ನಕ್ಕಳು. ಇದರಿಂದಲೇ ಹುಡುಗಿಯು ಆರೋಗ್ಯವನ್ನು ಪಡೆಯುತ್ತಿರುವಳೆಂದು ಪರಂತಪನು ಅರಿತುಕೊಂಡನು.

ಹುಡುಗಿಯು ನಕ್ಕುದನ್ನು ನೋಡಿ ಮುದುಕಿಯು ಪರಮಾನಂದ ಭರಿತೆಯಾಗಿ ಇಂತೆಂದಳು :—

"ನಿನ್ನೆಯ ರಾತ್ರಿಯಲ್ಲ ಈಕೆಯು ಮನೆಗೆ ಬಂದಾಗ ಸಂಪೂರ್ಣವಾಗಿ ನನೆದುಹೋಗಿದ್ದಳು. ಬಹುತರವಾಗಿ ಈಕೆಯು ನೀರಿನಲ್ಲಿ ಮುಗುಚಿಕೊಂಡಿರಬಹುದೆಂದು ತೋರುವುದು. ದೇವರ ದಯದಿಂದ ಈಕೆಯು ಇಷ್ಟು ಬೇಗನೆ ಆರೋಗ್ಯಲಾಭವನ್ನು ಪಡೆದುದಕ್ಕಾಗಿ ನನ್ನ ಆನಂದಕ್ಕೆ ಪಾರವೇ ಇಲ್ಲ."

ಪರಂತಪನಿಗೆ ಈ ಮಾತಿನ ಅರ್ಥವೇ ಆಗಲಿಲ್ಲ. ಇಲ್ಲಿಯ ವರೆಗೂ ಆತನು ಆ ಹುಡುಗಿಯನ್ನು ಮುದುಕಿಯ ಮಗಳೆಂದೇ ತಿಳಿದುಕೊಂಡಿದ್ದನು. ಈಗ ಮುದುಕಿಯಾಡಿದ ಮಾತಿನಿಂದ, ಈ ಹುಡುಗಿಯು ಬೇರೆಯವಳೆಂದು ಗೊತ್ತಾ

ದುದರ ಮೇಲೆ, ಕೌಶಲದಿಂದ ತತ್ತ್ವವನ್ನು ಅರಿಯಬೇಕೆಂದು ಪರಂತಪನು ಮುದುಕಿಯನ್ನು ಕುರಿತು—ಈಕೆಯು ಮನೆಗೆ ಬಂದಾಗ ರಾತ್ರಿಯಲ್ಲಿ ಎಷ್ಟು ಹೊತ್ತಾಗಿರಬಹುದು ? ಎಂದನು.

ವೃದ್ಧಾ—ಹತ್ತು ಗಂಟೆಯಿರಬಹುದು. ನನ್ನ ಮಗಳು ಈಕೆಯನ್ನು ಒಂದು ಗಾಡಿಯ ಮೇಲೆ ಮಲಗಿಸಿಕೊಂಡು ಇಲ್ಲಿಗೆ ಕರೆತಂದು ಬಿಟ್ಟುಹೋದಳು. ಆಕೆಯು ಹೊರಡುವಾಗ 'ಎಲ್ಲಿಗೋ ಹೋಗಬೇಕಾಗಿದೆ' ಎಂದು ಹೇಳಿ ಹೊರಟು ಹೋದಳು.

ಪರಂ—ಆಕೆ ಮತ್ತಾವಾಗ ಬಂದಳು ?

ವೃದ್ಧಾ—ಬರಲೇ ಇಲ್ಲ.

ಪರಂ—ಹಾಗಾದರೆ ಅವಳ ಕೆಲಸವು ಗುರುತರವಾಗಿಯೇ ಇರಬಹುದು.

ವೃದ್ಧಾ—ಹಾಗಿಲ್ಲದಿದ್ದರೆ ಅವಳು ಹಿಂದಿರುಗಿ ಬಂದುಬಿಡುತ್ತಿದ್ದಳು.

ಪರಂ—ಅವಳು ಆವಾಗ ಬರಬಹುದು ?

ವೃದ್ಧಾ—ಇಂದೇ ಬಂದೇ ಬರಬೇಕು. ದೊಡ್ಡವರ ಮನೆಯಲ್ಲಿ ಕೆಲಸಕ್ಕಿರತಕ್ಕವಳು ತಪ್ಪಿಸಿಕೊಂಡರೆ, ಗೌರವವುಳಿಯುವುದು ಹೇಗೆ ? ಹೊಟ್ಟೆ ತುಂಬುವುದು ತಾನೇ ಹೇಗೆ ?

ಪರಂ—ಅದಕ್ಕಾಗಿ ನೀನು ಚಿಂತಿಸಬೇಕಾದುದೇನೂ ಇರುವುದಿಲ್ಲ. ನಾನು ಆ ದೊಡ್ಡ ಮನುಷ್ಯರ ಮನೆಯಿಂದಲೇ ಇಲ್ಲಿಗೆ ಬಂದಿರುವೆನು.

ವೃದ್ಧಾ—(ಸಂತೋಷದಿಂದ) ಹಾಗೆಯೇ ! ಅವರೇ ತಮ್ಮನ್ನು ಇಲ್ಲಿಗೆ ಕಳುಹಿರಬೇಕು. ಹಾಗಿಲ್ಲದಿದ್ದರೆ ತಮ್ಮಂಥವರು ನಮ್ಮಂಥವರ ಮನೆಗೆ ಬರುವುದೆಂದರೇನು ? ಅದರ ಮೇಲೂ ವೈದ್ಯರನ್ನು ಮನೆಗೆ ಬರಮಾಡಿಕೊಳ್ಳುವಷ್ಟು ಯೋಗ್ಯತೆಯೂ ನಮಗೆ ಎಲ್ಲಿಂದ ಬರಬೇಕು, ಮಹಾಶಯ ?

ಈ ಮಾತಿಗೆ ಪರಂತಪನು ಆವ ಉತ್ತರವನ್ನೂ ಕೊಡಲಿಲ್ಲ, ಆದರೆ ಹುಡುಗಿಯನ್ನೇ ನೋಡುತ್ತಾ ಕುಳಿತಿದ್ದನು. ಆಗ ಅವಳ ಕುತ್ತಿಗೆಯಲ್ಲಿ ಐದಂಗುಲದಷ್ಟು ಕರಿಯ ಗುರುತು ಕಾಣಿಸಲಾಗಿ, ಇದರ ಮರ್ಮವನ್ನು ಭೇದಿಸಬೇಕೆಂದು ಸಂಕಲ್ಪಮಾಡಿಕೊಂಡು ಪರಂತಪನು—ಮಗು ! ಅದಾರು ನಿನ್ನ ಕುತ್ತಿಗೆಯನ್ನು ಅಷ್ಟು ಬಲವಾಗಿ ಹಿಡಿದು ಗಾಯ ಮಾಡಿರುವರು ? ಎಂದು ಕೇಳಿದನು.

ಆ ಮುದುಕಿಗಿಂತಲೂ ಎಷ್ಟೋ ಚದುರೆಯಾದ ಆ ಬಾಲಿಕೆಯು ಅದಕ್ಕೆ ಉತ್ತರವಾಗಿ—ಮಹಾಶಯ! ಆರೋ ಕುತ್ತಿಗೆಯನ್ನು ಬಲವಾಗಿ ಹಿಡಿದಿದ್ದ ರೆಂಬುದು ನಿಮಗೆ ತಿಳಿದ ಬಗೆ ಹೇಗೆ? ಎಂದುಸುರಿದಳು.

ಪರಂತಪನು ಒಬ್ಬ ಸುಪ್ರಸಿದ್ಧನಾದ ಪತ್ತೇದಾರನಾಗಿದ್ದುದರಿಂದ, ಕಾಲೋಚಿತವಾಗಿ—ಆತನೇ ನನಗೆ ಈ ಸಂಗತಿಯನ್ನು ತಿಳಿಸಿದನು, ಎಂದುತ್ತರ ವಿತ್ತನು.

ಹುಡುಗಿ—ಆರು! ಭೂತನಾಥನೇ?

ಪರಂ—ಅಹುದು. ಆತನೇ ನನ್ನನ್ನು ಇಲ್ಲಿಗೆ ಕಳುಹಿರುವನು. ಹಾಗಲ್ಲ ದಿದ್ದರೆ, ಇದೆಲ್ಲವೂ ನನಗೆ ತಿಳಿಯಲು ಕಾರಣವೇನಿದ್ದಿತು?

ಹುಡುಗಿ—ನಾನು ಇಲ್ಲಿರುವುದು ಅವನಿಗೆ ಹೇಗೆ ಗೊತ್ತು?

ಪರಂ—ಅದು ಅವನಿಗೆ ಹೇಗೆ ಗೊತ್ತೋ, ಅದು ನನಗೇನು ಗೊತ್ತು? ಅವನು ತುಂಬಾ ಪಶ್ಚಾತ್ತಾಪಪಟ್ಟುಕೊಂಡು ನನಗೆ ತಿಳಿಸಿದ ಕೂಡಲೆ, ನಾನು ಇಲ್ಲಿಗೆ ಹೊರಟು ಬಂದೆನು.

ಹುಡುಗಿ—ಹಾಗಾದರೆ ಆತನು ನನ್ನ ವಿಷಯದಲ್ಲಿ ತುಂಬಾ ಮರುಕ ಗೊಂಡಿರುವನೇ?

ಪರಂ—ಆ ಮರುಕದ ಎಲ್ಲೆಯನ್ನು ವರ್ಣಿಸಿ ತೀರದು.

ಹುಡುಗಿ—ಹಾಗಿರುವುದಾದರೆ, ನಾನೂ ಅವನನ್ನು ಮನ್ನಿಸಿರುವೆನು. ಅಬ್ಬಬ್ಬಾ! ಅವನ ಮಚ್ಚಿನ ಏಟು ಅಪಾಯ ಸ್ಥಲಕ್ಕೇನಾದರೂ ಬಿದ್ದಿದ್ದರೆ, ನನ್ನ ಆಸೆಯೇ ತೀರಿಹೋಗುತ್ತಿದ್ದಿತು. ದೇವರು ದೊಡ್ಡವನು!

ಪರಂ—ಅವನು ಕೇವಲರಾಗಿಯು; ಇದು ನಿನಗೂ ಚೆನ್ನಾಗಿಯೂ ಗೊತ್ತೇ ಇರಬೇಕು.

ಹುಡುಗಿ—ಇಂಥವರ ಬಳಿಯಲ್ಲಿ ಮಚ್ಚುಗಿಚ್ಚು ಇರಬಾರದು.

ಪರಂ—ಆತನು ಆ ಮಚ್ಚನ್ನು ನನ್ನ ಕೈಗೆ ಕೊಟ್ಟುಬಿಟ್ಟನು. ಇನ್ನು ಮೇಲೆ ಶಸ್ತ್ರಾಸ್ತ್ರಗಳನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆಯನ್ನೂ ಮಾಡಿರು ವನು.

ಪರಂತಪನು ಹೀಗೆ ಹೇಳಿ ತನ್ನಲ್ಲಿದ್ದ ಮುಚ್ಚನ್ನು ಹೊರಗೆ ತೆಗೆದು ತೋರಿಸಿದನು.

ಹುಡುಗಿಯು ಮುಚ್ಚನ್ನು ನೋಡಿ—ಮಹಾಶಯ! ಇದೇ ಆ ಮುಚ್ಚು, ಎಂದು ಹೇಳಿ ಅದನ್ನು ಕೈಗೆ ತೆಗೆದುಕೊಂಡು ನೋಡಿ ಭಯಚಕಿತೆಯಾಗಿ—ಇದೇನು, ರಕ್ತದ ಕಲೆಗಳು? ಇದು ನನ್ನ ಶರೀರದ ರಕ್ತವಲ್ಲ. ನನ್ನ ಮೇಲೆ ಬಿದ್ದ ಪೆಟ್ಟು ಸಾಮಾನ್ಯವಾದುದು, ಎಂದು ನುಡಿದಳು.

ಪರಂ—ಹಾಗಾದರೆ ಇದು ಹಳೆಯದಾದ ರಕ್ತದ ಕಲೆಗಳಾಗಿರಬಹುದು. ಏನಾದರೂ ಆಗಲಿ; ಆತನ ಬಳಿಯಲ್ಲಿ ಮುಚ್ಚಿಲ್ಲವೆಂಬುದನ್ನು ಈಗಳಾದರೂ ನಂಬಬಲ್ಲೆಯಾ? ಇನ್ನಾದರೂ ನನ್ನ ಮಾತುಗಳಲ್ಲಿ ನಿನಗೆ ನಂಬುಗೆಯುಂಟಾದುದೇ?

ಹುಡುಗಿ—ತಮ್ಮ ಮಾತು ಕೇಳಿ ನನಗೆ ತುಂಬಾ ಸಂತೋಷವಾಯಿತು, ಮಹಾಶಯ! ಆತನು ಎಷ್ಟಾದರೂ ಬಲು ಮುಂಗೋಪಿ; ಅದರಿಂದ ನನ್ನ ಮಾತೊಂದೂ ಅವನ ಕಿವಿಗೆ ಬೀಳುವುದೇ ಇಲ್ಲ.

ಪರಂ—ಆತನು ನಿನ್ನ ವಿಷಯವಾಗಿ ಎಷ್ಟೋ ಮಾತುಗಳನ್ನು ಹೇಳಿರುವನು. ನೀನು ಆತನಿಗೆ ಎಷ್ಟೋ ಉಪಕಾರ ಮಾಡಿರುವುದಾಗಿಯೂ ನಾನು ಕೇಳಿರುವೆನು.

ಹುಡುಗಿ—ಹಾಗಾದರೆ ನಿಮ್ಮಿಬ್ಬರಿಗೂ ಬಲು ದಿನಗಳಿಂದಲೂ ಪರಿಚಯವಿರಬೇಕು.

ಪರಂ—ಅಹುದು; ಪರಿಚಯವುಂಟು. ನಾವಿಬ್ಬರೂ ಅನೇಕ ವೇಳೆಗಳಲ್ಲಿ ಅಣ್ಣ ತಮ್ಮಂದಿರ ಹಾಗೆ ಇದ್ದುಕೊಂಡಿರುವೆವು. ನಿನ್ನ ವಿಚಾರವೂ ನನಗೆ ಗೊತ್ತು.

ಹುಡುಗಿ—ನಮ್ಮಗಳ ಜಗಳ?

ಪರಂ—ಜಗಳವೇ? ಆ ಕೊಳದ ಹತ್ತಿರ ನಡೆದುದು ತಾನೇ? ಅದೆಲ್ಲವನ್ನೂ ಆತನು ತಿಳಿಸಿರುವನು; ಆದರೆ ಇದರಲ್ಲಿ ಆತನ ದೋಷವೇ ಹೆಚ್ಚಾಗಿರುವುದು. ಈಗ ಅದೆಲ್ಲಾ ಕಳೆದು ಹೋಯಿತು. ನೀನಾದರೋ ಅವನನ್ನು ಮನ್ನಿಸಿಬಿಟ್ಟಿರುವೆ. ಈ ಸುದ್ದಿಯನ್ನು ಅವನು ಕೇಳುವುದಾದರೆ ಎಷ್ಟೋ ಸಂತೋಷಪಟ್ಟುಕೊಂಡಾನು. ನಾನು ಈ ಸಂತೋಷದ ಸುದ್ದಿಯನ್ನು ಆತನಿಗೆ

ಹೇಗೆ ತಿಳಿಯ ಪಡಿಸಲಿ? ಅವನು ಎಲ್ಲಿರುವನೋ ಅದು ಮಟ್ಟಿಗೆ ನನಗೆ ಗೊತ್ತಿಲ್ಲ. ಆತನು ಇಲ್ಲಿ ತೋರಿಸಿ ಅಲ್ಲೇಳುವನು ; ಅವನ ಬುದ್ಧಿಯಾದರೋ ಬಲು ಚುರುಕಾದುದು. ತಾಯೇ! ಆತನಿರುವ ಸ್ಥಲವನ್ನಾದರೂ ತಿಳಿಸಮ್ಮಾ, ನಾನು ಹೋಗಿ ನಿಮ್ಮಿಬ್ಬರಿಗೂ ಗಂಟುಹಾಕಿಬಿಡುವೆನು.

ಹುಡುಗಿ—ಆತನು ಏಳುಮನೆ ಚೀಲಿಯಂತೆ ಇದ್ದ ಕಡೆ ಇರುವುದಿಲ್ಲ, ಬಿದ್ದ ಗೋಡೆ ಹಾಕುವುದಿಲ್ಲ. ಅವನು ರಾಜನಗರದಲ್ಲಿರುವನು; ಕಾಲಾಂಜನ ದಲ್ಲಿರುವುದುಂಟು; ಕಾಶಿಯಲ್ಲಿಯೂ ಒಂದು ಕುಟೀರವನ್ನು ಮಾಡಿಕೊಂಡು ಆಗಿಂದಾಗ ಅಲ್ಲಿಗೆ ಹೋಗಿಬರುವನು. ಈಗ ಅವನು ಎಲ್ಲಿರುವನೋ ಅದು ಮಟ್ಟಿಗೆ ನನಗೆ ಗೊತ್ತಿಲ್ಲ, ಮಹಾಶಯ!

ಇಲ್ಲಿಯೂ ಉದ್ದೇಶವು ನೆರವೇರಲಿಲ್ಲವೆಂದು ತಿಳಿದು ಪರಂತಪನು ಹುಡುಗಿಗೆ "ಹೋಗಿಬರುವೆನು" ಎಂದು ಹೇಳಿ ಹೊರಗೆ ಬಂದು ಬಿಟ್ಟನು.

"ವೈದ್ಯರಿಗೆ ನಮಸ್ಕಾರ" ಎಂದು ಅವರಿಬ್ಬರೂ ಹೇಳಿ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದರು.

ರುಗ್ಣಶಯ್ಯೆಯಲ್ಲಿ ಮಲಗಿದ್ದ ಹುಡುಗಿಯೇ ಹೈಮವತಿ.

---

## ಹನ್ನೊಂದನೆಯ ಸಂಧಿ

### ದಾಸೀ ಸಂದರ್ಶನ

ಪರಂತಪನು ಹಿಂದಿರುಗಿ ಬರುತ್ತಾ ಚಿಂತಿಸಿದನು :—

"ಈ ಹುಡುಗಿಯು ಭೂತನಾಥನನ್ನು ರೇಗಿಸಿರಬೇಕು; ಅದಕ್ಕಾಗಿಯೇ ಮುಂಗೋಪಿಯಾದ ಭೂತನಾಥನು ಇವಳ ಕತ್ತನ್ನು ಕಿವಿಚಿ ಮಚ್ಚಿನಿಂದ ಹೊಡೆದು ನೀರಿನಲ್ಲಿ ಹಾಕಿರಬೇಕು. ಹುಡುಗಿಯು ಕೊಲೆಯಾದಳೆಂಬ ಭಯವು ಅವನ ಬೆನ್ನಟ್ಟಿರಬೇಕು. ಈ ವೂರಿನಲ್ಲಿಯೇ ಇರುವುದಾದರೆ ಪೋಲೀಸಿನವರ ಕೈಗೆ ಸಿಲುಕಿಕೊಂಡು ನರಳಾಡಬೇಕೆಂದು ಆಲೋಚಿಸಿದವನಾಗಿ ಕಮಲಾಕಾಂತನ ಮನೆಯನ್ನು ಕೂಡಲೆಯೇ ತ್ಯಾಗಮಾಡಿ ಹೊರಟಿರಬೇಕು. ಅವನು ಹೊರಟಿರುವುದೆಲ್ಲಿಗೆ? ಇಂತಹ ಸಂದರ್ಭಗಳಲ್ಲಿ ಅಪರಾಧಿಯು ಸಾಧ್ಯವಾದಷ್ಟು ದೂರವಾಗಿಯೇ ಹೊರಟು ಹೋಗುವುದರಲ್ಲಿರುವನು. ಈತನಿಗೆ ದೂರದ ಸ್ಥಲವಾವುದಿರಬಹುದು? ಕಾಶೀಕ್ಷೇತ್ರವೂ ದೂರವೆಂದೇ ಹೇಳಬೇಕು. ಕಾಶಿಯಲ್ಲಿಯೂ

ಇವನಿಗೆ ಕುಟೀರವುಂಟೆಂದು ಹುಡುಗಿಯು ಹೇಳಿದುದರಿಂದ, ಆತನು ಪ್ರಾಯಿಕ ವಾಗಿ ಕಾಶಿಗೇ ಹೋಗಿರಬಹುದು.''

ಪರಂತಪನು ಈ ರೀತಿಯಾಗಿ ಪರ್ಯಾಲೋಚಿಸುತ್ತಾ ರೈಲು ಬಂಡಿಯ ನಿಲ್ದಾಣಕ್ಕೆ ಬಂದು ವಿಚಾರ ಮಾಡಿದುದರಲ್ಲಿ "ನಿನ್ನೆಯ ರಾತ್ರಿಯಲ್ಲಿ ಒಬ್ಬ ಗಂಡಸೂ ಒಬ್ಬ ಹೆಂಗುಸೂ ಟಿಕೆಟನ್ನು ಕೊಂಡು ಕಾಶಿಗೆ ತೆರಳಿದರು," ಎಂಬು ದಾಗಿ ತಿಳಿದು ಬಂದುದರ ಮೇಲೆ, ಪರಂತಪನೂ ಕಾಶಿಗೆ ಪಯಣ ಬೆಳೆಯಿಸಿದನು. ಆತನು ಕಾಶೀಕ್ಷೇತ್ರಕ್ಕೆ ಬಂದಾಗ, "ಇಂದಿನ ಅರುಣೋದಯದ ವೇಳೆಯಲ್ಲಿ ಒಬ್ಬ ಹೆಂಗುಸು ರೈಲಿನಿಂದ ಇಳಿಯುತ್ತಿರುವಾಗ ಕಾಲುಜಾರಿ ಕೆಳಗೆ ಬಿದ್ದು ಜ್ಞಾನ ತಪ್ಪಿದವಳಾಗಿ ಹತ್ತಿರದ ವೈದ್ಯಶಾಲೆಯಲ್ಲಿ ಚಿಕಿತ್ಸೆಯನ್ನು ಪಡೆಯುತ್ತಿರುವಳು" ಎಂಬ ಸುದ್ದಿಯನ್ನು ಕೇಳಿ 'ನಮ್ಮ ನಗರದ ದಾಸಿಯೇನಾದರೂ ಈ ದುಃಖಕ್ಕೆ ಈ ಡಾಗಿರಬಹುದೇ!' ಎಂದು ಸಂಶಯಪಟ್ಟವನಾಗಿ ವೈದ್ಯಶಾಲೆಗೆ ತೆರಳಿದನು.

ಅಲ್ಲಿ ಮಲಗಿದ್ದ ಒಬ್ಬ ಹೆಂಗುಸನ್ನು ನೋಡಿ, ಪರಂತಪನು ಸೌಮ್ಯತೆ ಯಿಂದ—ಕಾಲಾಂಜನದಿಂದ ಇಲ್ಲಿಗೆ ಬಂದ ಹೆಂಗುಸು ನೀನೇ ಏನಮ್ಮಾ? ಎಂದು ಪ್ರಶ್ನೆಮಾಡಿದನು.

ದಾಸಿ—ಅಹುದು, ಬುದ್ಧೀ!

ಪರಂ—ನಿಮ್ಮ ಮನೆಯಲ್ಲಿ ವಾಸವಾಗಿದ್ದ ರಾಮರಮಾರಮಣರಾಯ ರೆಂಬ ದೊಡ್ಡ ಮನುಷ್ಯರೂ ನಿನ್ನೊಡನೆ ಇಲ್ಲಿಗೆ ಬಂದು ಇಳಿದರೇನಮ್ಮಾ?

ದಾಸಿ—ಆ ಕೊಲೆಪಾತಕನಾದ ದರೋಡೆ ಗಳ್ಳನೇ? ಅವನೆಂತಹ ದೊಡ್ಡ ಮನುಷ್ಯನು! ಆ ನರ ಪಿಶಾಚವೂ ನನ್ನ ಜತೆಯಲ್ಲಿಯೇ ಬಂದಿತು. ಆತನಿ ಗಾಗಿಯೇ ನನಗೆ ಈ ದೊಡ್ಡ ವಿಪತ್ತು. ನಾನು ಆತನ ರಹಸ್ಯವನ್ನು ಭೇದಿ ಸುವುದಕ್ಕಾಗಿ ಅವನ ಹಿಂದೆ ಹಿಂದೆಯೇ ಹೊರಟಿದ್ದೆನು. ಆತನು ಬೇಗಬೇಗನೆ ಬಂಡಿಯಿಂದಿಳಿದು ಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು "ದುರ್ಗಾಘಾಟಿನ ಮೂರನೆಯ ಗಲ್ಲಿ" ಎಂದು ಹೇಳಿ ಅದರಲ್ಲಿ ಕುಳಿತು ತೆರಳಿದನು. ನಾನೂ ಸಡ ಗರದಿಂದ ರೈಲು ಬಂಡಿಯಿಂದ ಇಳಿಯುವುದರಲ್ಲಿದ್ದೆನು. ದುರ್ದೈವಯೋಗದಿಂದ ಕಾಲುಜಾರಿ ನಾನು ಕೆಳಗೆ ಬಿದ್ದೆನು. ಅಷ್ಟರೊಳಗಾಗಿಯೇ ನನಗೆ ಜ್ಞಾನ ತಪ್ಪಿತು. ನನಗೆ ಜ್ಞಾನೋದಯವಾದಾಗ ನಾನು ಈ ವೈದ್ಯಶಾಲೆಯಲ್ಲಿದ್ದಂತೆ ಭಾವಿಸಿ ಕೊಂಡೆನು. ಸ್ವಾಮಿ! ನನ್ನದೊಂದು ಮಾತು ಇದೆ.

ಪರಂ—ಅದೇನು?

ದಾಸಿ—ತಾವಾರು ?

ಪರಂ—ನಾನೊಬ್ಬ ಸಾಮಾನ್ಯನಾದ ಪತ್ತೇದಾರನು.

ದಾಸಿ—ಹಾಗಾದರೆ ತಾವು ಆತನನ್ನು ಹಿಡಿಯುವುದಕ್ಕೆ ಹೊರಟರುವಿರೇನು ?

ಪರಂ—ಆದುದರಿಂದಲೇ ನಾನು ಇಲ್ಲಿಗೆ ಬಂದುದು.

ದಾಸಿ—ತಮ್ಮ ಪ್ರಯತ್ನವನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ಆತನು ಒಬ್ಬ ಹೆಣ್ಣು ಹುಡುಗಿಯನ್ನು ಕೊಲೆ ಮಾಡುವುದಕ್ಕೆ ಮುಂದೆ ಸರಿದು ಬಂದುದನ್ನು ನಾನು ಕಣ್ಣಾರೆ ನೋಡಿದೆನು. ಆಗ ನೀರಿನಲ್ಲಿ ಮಗುಚಿಕೊಂಡ ಆ ಹುಡುಗಿಯನ್ನು ನಾನು ಎತ್ತಿ ಹಾಕದಿದ್ದರೆ ಆಕೆಯು ಸತ್ತೇ ಹೋಗುತ್ತಿದ್ದಳು.

ಪರಂ—ಆ ಹುಡುಗಿಯನ್ನು ನಾನು ನೋಡಿಕೊಂಡು ಬಂದಿರುವೆನು. ಅವಳು ಆರೋಗ್ಯದಿಂದಿರುವಳು. ಈಗ ನಾನು ಮುಂದಿನ ಕೆಲಸಕ್ಕೆ ತೆರಳುವೆನು. ನಾಳೆಯ ದಿನ ಬಂದು ನಿನ್ನನ್ನು ನೋಡುವೆನು. ದೈವಯೋಗವಿರುವುದಾದರೆ ಇಂದೇ ಆ ರಾಮರಮಾರಮಣನನ್ನು ದಸ್ತಗಿರಿ ಮಾಡಿಬಿಡುವೆನು.

ದಾಸಿ—ಭಗವಂತನು ನಿಮ್ಮ ಕಾರ್ಯದಲ್ಲಿ ಸಹಾಯನಾಗಿ ನಿಲ್ಲಲಿ. ತಾವು ತೆರಳೋಣವಾಗಲಿ.

---

## ಹನ್ನೆರಡನೆಯ ಸಂಧಿ

### ಬಂದಿ

ಕಮಲಾಕಾಂತನ ಉತ್ತರ ಕ್ರಿಯಾದಿಗಳು ಕಾಲ ಕಾಲಕ್ಕೆ ಸರಿಯಾಗಿ ನಡೆಯ ಬೇಕಾದ ರೀತಿಯಲ್ಲಿ ನಡೆದು ಹೋದುವು. ವೈಕುಂಠ ಸಮಾರಾಧನೆಯ ದಿನ ಒಂದು ದೊಡ್ಡ ಸಭೆಯು ಏರ್ಪಡಿಸಲ್ಪಟ್ಟು ಕಮಲಾಕಾಂತನ ಉಯಿಲು ಓದಿದುದಾಯಿತು. ಉಯಿಲಿನ ಒಕ್ಕಣೆಯನ್ನು ಕೇಳಿ ಸಾಮಾಜಿಕರೆಲ್ಲರೂ ಬೆರಗಾಗಿ ಹೋದರು. ಉಯಿಲಿನಲ್ಲಿ ಕಮಲಾಕಾಂತನ ಸಮಸ್ತ ಸಂಪತ್ತಿಗೂ ಮಾರಕುಮಾರನೇ ಉತ್ತರಾಧಿಕಾರಿಯೆಂದೂ, ಹೊಟ್ಟೆಗಿಲ್ಲದೆಯೇ ಬಂದು ಯಜಮಾನನನ್ನೇ ನಂಬಿಕೊಂಡಿದ್ದ ಮದಯಂತಿಗೆ ಜೀವನಕ್ಕಾಗಿ ಯಾವಜ್ಜೀವವೂ ತಿಂಗಳಿಗೆ

೨೫ ರೂಪಾಯಿಗಳಂತೆ ಮಾಸಾಶನವು ಸಲ್ಲಿಸಲ್ಪಡತಕ್ಕುದೆಂದೂ ಬರೆಯಲ್ಪಟ್ಟಿದ್ದಿತು. ಆ ವುಯಿಲಿನಲ್ಲಿ ಕುಂದನಂದಿನಿಯ ಹೆಸರಾಗಲೀ, ನಂದಕುಮಾರನ ಹೆಸರಾಗಲೀ ಒಂದೆಡೆಯಲ್ಲಿಯೂ ಉಕ್ತವಾಗಿರಲಿಲ್ಲ.

ಕಾಲಾಂಜನದಲ್ಲಿ ನಂದಕುಮಾರನನ್ನು ಪ್ರೀತಿಸದೇ ಇರುವವರೇ ಇರಲಿಲ್ಲ. ಆತನ ಒಳ್ಳೆಯ ಸ್ವಭಾವವು ಕಮಲಾಕಾಂತನನ್ನೇ ಅಲ್ಲದೆ ಎಲ್ಲರನ್ನೂ ಆಕರ್ಷಿಸಿಬಿಟ್ಟಿದ್ದಿತು. ಕುಂದನಂದಿನಿಯಂಥವರು "ನ ಭೂತಾ ನ ಭವಿಷ್ಯತಿ," ಎಂದು ಕಂಡಕಂಡವರೆಲ್ಲರೂ ತಿಳಿದು ಕೊಂಡಿದ್ದರು. ಅವಳ ಆಕಾರ ಪ್ರಕಾರಗಳನ್ನು ನೋಡಿದವರೆಲ್ಲರೂ ಭೂಲೋಕದಲ್ಲಿ ಕಾರಣಾಂತರದಿಂದ ಅವತಾರ ಮಾಡಿದ ಲಕ್ಷ್ಮಿಯೇ ಎಂದು ಸಿದ್ಧಾಂತ ಪಡಿಸಿಕೊಂಡು ಆಕೆಯ ದರ್ಶನವನ್ನು ತೆಗೆದುಕೊಳ್ಳುವುದಕ್ಕಾಗಿ ಕುಲಾಂಗನೆಯರು ತಂಡತಂಡವಾಗಿ ನಿತ್ಯವೂ ಬಂದು ಹೋಗುತ್ತಿದ್ದರು—ಎಂದ ಮೇಲೆ, ಆಕೆಯ ಸ್ವರೂಪವನ್ನು ಪತಿವ್ರತೆಯರಲ್ಲದೇ ಮತ್ತಾರು ಅರಿಯಲು ಶಕ್ತಿಯುಳ್ಳವರಾಗಿರುತ್ತಿದ್ದರು? ಕೆಲವು ದುಷ್ಟ ಸ್ವಭಾವದವರು ಎಂತಹ ಒಳ್ಳೆಯವರನ್ನಾದರೂ ಅಲ್ಲಗಳೆಯುವುದೇ ಲಕ್ಷಣವುಳ್ಳವರಾಗಿರುವರು. ಕಾರಣವೇನೆಂದರೆ—ಇವರು ನಿತ್ಯ ಶುದ್ಧ ಬುದ್ಧನಾದ ಭಗವಂತನನ್ನೇ ಹೀಯಾಳಿಸುವುದಕ್ಕೆ ಹಿಂಜರಿಯತಕ್ಕವರಾಗುವುದಿಲ್ಲ. ಹೀಗೆಂದ ಮೇಲೆ ಇಂಥವರ ಹೊಗಳಿಕೆ ತೆಗಳಿಕೆಗಳಿಂದ ಉಂಟಾಗ ಬಹುದಾದ ಲಾಭನಷ್ಟಗಳಾದರೂ ಏನು?

"ಕಮಲಾಕಾಂತರಾಯನು ಅಗಾಧವಾದ ಸಂಪತ್ತಿಗೆ ಅಧಿಕಾರಿಯಾಗಿ ವಿವೇಕದಿಂದ ಬಾಳುತ್ತಿದ್ದವನು ಕುಂದನಂದಿನಿಗೂ ನಂದಕುಮಾರನಿಗೂ ಒಂದು ಕವಡೆಯನ್ನು ಕೂಡ ತನ್ನ ಉಯಿಲಿನಲ್ಲಿ ಬರೆಯದೇ ಇರಲು ಕಾರಣವೇನು? ಇದರಲ್ಲಿ ಅಚಾತುರ್ಯವೇನೋ ನಡೆದಿರಬೇಕು" ಎಂದು ಸಾಮಾಜಿಕರೆಲ್ಲರೂ ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿಕೊಂಡು ಆಶ್ಚರ್ಯಪಟ್ಟು ಹೋದರು. "ಸಾಲಗಾರ ಬಿಟ್ಟರೂ ಸಾಕ್ಷಿಗಾರ ಬಿಡನು" ಎಂಬಂತೆ ಸಾಮಾಜಿಕರಲ್ಲಿ ಕೆಲವರು "ಇದರಲ್ಲಿ ಮೋಸವು ನಡೆದೇ ಇರಬೇಕು. ಈ ಮೋಸವನ್ನು ಕಂಡು ಹಿಡಿದು ಬಯಲು ಮಾಡದಿದ್ದರೆ, ಒಳ್ಳೆಯವರಿಗೆ ತಿನ್ನುವುದಕ್ಕೆ ಅನ್ನ ಕೂಡ ಇಲ್ಲದೇ ಹೋಗುವುದು. ಅದು ಕಾರಣ ಇದರ ಮೂಲತತ್ತ್ವವನ್ನು ಅರಿತು ದುಷ್ಟರನ್ನು ಶಿಕ್ಷಿಸುವುದಕ್ಕಾಗಿ ಒಬ್ಬ ಪ್ರಸಿದ್ಧನಾದ ಪತ್ತೇದಾರನನ್ನು ಈ ಸಂದರ್ಭದಲ್ಲಿ ಏರ್ಪಡಿಸುವುದು ಸೂಕ್ತವಾದುದು" ಎಂದು ತಮ್ಮ ಅಭಿಪ್ರಾಯವನ್ನು ನಿರ್ಭಯವಾಗಿ ಹೇಳಿದರು. ಇದೇ ಸರಿಯಾದ ಮಾರ್ಗವೆಂದೂ ಎಲ್ಲರೂ ಒಪ್ಪಿದರು.

ಬಳಿಕ ಕುಂದನಂದಿನಿಯು ಪರಂತಪನ ಶಕ್ತಿಸಾಹಸಗಳನ್ನು ಚೆನ್ನಾಗಿಯೂ ಅರಿತವಳಾಗಿದ್ದುದರಿಂದ, ಆತನನ್ನೇ ಈ ಕೆಲಸಕ್ಕೂ ನಿಯಮಿಸಿಕೊಳ್ಳಬೇಕೆಂದು ನಿಶ್ಚಯಿಸಿದವಳಾಗಿ ಒಬ್ಬ ದಾಸಿಯ ಮೂಲಕವಾಗಿ ಆತನಿಗೆ ಬರುವಂತೆ ಹೇಳಿ ಕಳುಹಿದಳು.

ಪರಂತಪನು ಕುಂದನಂದಿನಿಯ ಇಷ್ಟದಂತೆ ಈ ಕಾರ್ಯಭಾರವನ್ನು ವಹಿಸಿ ಕೊಂಡು ಕೆಲಸ ಮಾಡುವುದಕ್ಕೆ ಸಿದ್ಧನಾದನು.

* * * * *

ಇತ್ತಕಡೆ ಪರಂತಪನು ಕುಂದನಂದಿನಿಯ ದಾಸಿಯನ್ನು ಬಿಟ್ಟು ದುರ್ಗಾ ಘಾಟಿನ ಮೂರನೆಯ ಗಲ್ಲಿಗೆ ಹೋದನು. ಅಲ್ಲಿ ಒಂದು ಸಾಮಾನ್ಯವಾದ ಆಶ್ರ ಮವು ಕಾಣಿಸಲು, ಪರಂತಪನು ಅದರ ಬಳಿಗೆ ಬಂದು ನೋಡಲಾಗಿ, ಒಂದು ಮರದ ಹಲಗೆಯಲ್ಲಿ "ಪಾಟೀರಕುಟೀರ" ಎಂದು ಬರೆದಿದ್ದಿತು. ಈ ಸ್ಥಲದಲ್ಲಿ ಯಾತ್ರಿಕರು ಆಗಿಂದಾಗ ಬಂದು ಇಳಿಯುತ್ತಿದ್ದರು. ಹಿಂದೆ ಆ ಹುಡುಗಿಯು ಹೇಳಿದ್ದ ಕುಟೀರವು ಇದೇ ಇರಬಹುದೆಂದು ಪರಂತಪನು ಮನಸ್ಸಿಗೆ ತಂದು ಕೊಂಡು, ಪಾಟೀರಕುಟೀರದ ಅಧಿಕಾರಿಯ ಬಳಿಗೆ ಬಂದು—ಮಹಾಶಯ! ಈ ಕುಟೀರದಲ್ಲಿ ರಾಮರಮಾರಮಣರಾಯರೆಂಬುವರು ಆರಾದರೂ ಇರುವರೇ? ಎಂದು ಪ್ರಶ್ನೆಮಾಡಲು, ಅಧಿಕಾರಿಯು "ಆ ಹೆಸರಿನವರಾರೂ ಇಲ್ಲ" ಎಂದು ಉತ್ತರ ವಿತ್ತನು. ಬಳಿಕ ಅಧಿಕಾರಿಯನ್ನು ಕೇಳಿದುದರಲ್ಲಿ ಭೂತನಾಥನು ಅಲ್ಲಿರುವು ದಾಗಿ ಗೊತ್ತಾಯಿತು.

ಪರಂತಪನು ಪೋಲೀಸುಠಾಣೆಗೆ ಹೋಗಿ ತನ್ನ ಜತೆಯಲ್ಲಿ ನಾಲ್ಕಾರು ಮಂದಿ ಪೋಲೀಸಿನವರನ್ನು ಕರೆದುಕೊಂಡು ಬಂದು ಆಶ್ರಮದ ಒಳಗೆ ನುಗ್ಗಿದನು. ಅಧಿ ಕಾರಿಯು ಭಯದಿಂದ ನಡುಗುತ್ತಿರಲು, ಪರಂತಪನು ಆತನಿಗೆ ಅಭಯವನ್ನಿತ್ತು, ಭೂತನಾಥನನ್ನು ತೋರೆಂದನು. ಅಧಿಕಾರಿಯು ಅನನ್ಯಗತಿಕನಾಗಿ ಭಯದಿಂದ ನಡುಗುತ್ತಾ ಭೂತನಾಥನಿದ್ದ ಕೋಣೆಯನ್ನು ದೂರದಿಂದಲೇ ತೋರಿ ದೂರವಾಗಿ ಸರಿದು ಹೋದನು.

ಪರಂತಪನು ಪೋಲೀಸಿನವರನ್ನು ಜತೆಯಲ್ಲಿಯೇ ಇಟ್ಟುಕೊಂಡು ತಟ್ಟನೆ ಭೂತನಾಥನಿದ್ದ ಕೋಣೆಯೊಳಗೆ ಪ್ರವೇಶಮಾಡಿ ಆತನ ಕೈಗಳಿಗೆ ಕೋಳವನ್ನು ತೊಡಿಸಿ—ಭೂತನಾಥ! ಕಾಲಾಂಜನದ ಕೊಲೆಗಾಗಿ ನಾನು ನಿನ್ನನ್ನು ದಸ್ತಗಿರಿ ಮಾಡಿರುವೆನು" ಎಂದು ಹೇಳಿದನು.

ಭೂತನಾಥನು ತಟ್ಟನೆ ತನಗುಂಟಾದ ದುರ್ಯೋಗವನ್ನು ನೋಡಿ ಚಕಿತ ನಾದರೂ, ಆತ್ಮರಕ್ಷಣೆಗಾಗಿ ಆವ ಪ್ರಯತ್ನವನ್ನೂ ಮಾಡಲಿಲ್ಲ. ಕಾರಣ ವೇನೆಂದರೆ—ಹೈಮವತಿಯನ್ನು ಕೊಲೆ ಮಾಡಿದುದಕ್ಕಾಗಿ ಎಂದಾದರೊಂದು ದಿನ ತನಗೆ ಸರಕಾರದಿಂದ ಅಪಾಯವಿದ್ದೇ ಇರುವುದೆಂದು ಚೆನ್ನಾಗಿಯೂ ತಿಳಿದು ಕೊಂಡಿದ್ದನು. ಅದಕ್ಕಾಗಿಯೇ ಆತನು ಆತ್ಮರಕ್ಷಣೆಗಾಗಿ ಆವ ಪ್ರಯತ್ನವನ್ನೂ ಮಾಡಲಿಲ್ಲ. ಆದರೆ ಪರಂತಪನನ್ನು ಕುರಿತು—ನನ್ನನ್ನು ಎಲ್ಲಿಗೆ ಕರೆದುಕೊಂಡು ತೆರಳುವವರಾಗಿರುವಿರಿ? ಎಂದು ಮಟ್ಟಿಗೆ ಪ್ರಶ್ನೆಮಾಡಿದನು.

ಕೊಂಚಕಾಲವೆನ್ನುವುದರೊಳಗಾಗಿ ಬಂಡಿಯೊಂದು ಆಶ್ರಮದ ಬಾಗಿಲಲ್ಲಿ ಬಂದು ನಿಂತಿತು. ಬಳಿಕ ಪೋಲೀಸಿನವರು ಭೂತನಾಥನನ್ನು ಬಂಡಿಯಲ್ಲಿ ಕುಳ್ಳಿ ರಿಸಿಕೊಂಡು ಪರಂತಪನೊಡನೆ ಠಾಣೆಗೆ ಬಂದರು. ಅಲ್ಲಿ ಪರಂತಪನು ಭೂತನಾಥ ನನ್ನು ಒಂದು ಬಲವಾದ ಕೋಣೆಯಲ್ಲಿ ನಿರ್ಬಂಧಪಡಿಸಿದ ಮೇಲೆ ಪೋಲೀಸಿನವ ರಿಗೆ ಎಚ್ಚರಿಕೆಯಿಂದಿರಬೇಕೆಂದು ಕಟ್ಟು ಮಾಡಿ ತನ್ನ ವಾಸಸ್ಥಾನಕ್ಕೆ ಬಂದನು. ಆಗ ನಂದಕುಮಾರನಿಂದ ಒಂದು ಪತ್ರವು ಬಂದಿದ್ದಿತು. ಅದನ್ನು ಆತನು ಪೋಲೀಸು ಠಾಣೆಯಿಂದ ಬರೆದಿದ್ದನು. ನಂದಕುಮಾರನು ಪರಂತಪನೊಡನೆ ಅನೇಕ ವಿಷಯಗಳನ್ನು ಕುರಿತು ಮಾತನಾಡಬೇಕೆಂಬುದೇ ಆ ಪತ್ರದ ಸಾರಾಂ ಶವು. ಪರಂತಪನು ಆ ಪತ್ರವನ್ನು ಓದಿದ ಕೂಡಲೆ ಆಹಾರಾದಿಗಳನ್ನು ತೀರಿಸಿ ಕೊಂಡು ರೈಲ ಹತ್ತಿ ಕಾಲಾಂಜನಕ್ಕೆ ಬಂದು ಬಿಟ್ಟನು.

---

## ಹದಿಮೂರನೆಯ ಸಂಧಿ

### ನೂತನ ಸಂದೇಹ

ಪತ್ರದ ಪ್ರಕಾರವಾಗಿ ಪರಂತಪನು ನಂದಕುಮಾರನನ್ನು ಠಾಣೆಗೆ ಬಂದು ನೋಡಿದನು. ಮೊದಮೊದಲು ಇಬ್ಬರಿಗೂ ಉಯಿಲಿನ ಸಂಬಂಧವಾಗಿ ಬಲು ಹೊತ್ತು ಮಾತು ಕತೆಗಳು ನಡೆದ ಬಳಿಕ, ಪರಂತಪನು—ನಂದಕುಮಾರ! ಕೊಲೆ ಪಾತಕನು ಸಿಕ್ಕಿರುವನು. ಇನ್ನು ನೀನು ವಿಶೇಷವಾದ ಚಿಂತೆಯಿಂದ ಕೊರಗ ಬೇಕಾದುದೇನೂ ಇಲ್ಲ, ಎಂದು ನುಡಿದನು.

ನಂದಕುಮಾರನು ಅಚ್ಚರಿಗೊಂಡವನಾಗಿ, ಇದರ ಮರ್ಮವನ್ನು ಅರಿಯ ದೆಯೇ—ಮಹಾಶಯ! ಕೊಲೆಪಾತಕನೆಂದರೇನು? ಪೋಲೀಸಿನವರು ನನ್ನನ್ನೇ ಕೊಲೆಪಾತಕನೆಂದು ಸಿದ್ಧಾಂತ ಪಡಿಸಿಕೊಂಡಿರುವಲ್ಲಿ, ಮತ್ತೊಬ್ಬ ಕೊಲೆಪಾತಕ ನೆಂದರೇನು? ಎಂದುಸುರಿದನು.

ಪರಂ—ನಿನ್ನ ಸಹೋದರ ಮಾರಕುಮಾರನ ಬಾಲ್ಯಮಿತ್ರನಾದ ರಾಮ ರಮಾರಮಣರಾಯನೆಂಬುವನು ಕೆಲವು ದಿನಗಳು ನಿನ್ನ ಅಜ್ಜನ ಮನೆಯಲ್ಲಿಯೇ ವಾಸವಾಗಿದ್ದನು. ನಿನ್ನ ಅಜ್ಜನ ಕೊಲೆಯಾದ ಕೂಡಲೆಯೇ ಆತನು ಆ ಮನೆ ಯಿಂದ ಪಲಾಯನ ಮಾಡಿಬಿಟ್ಟನು.

ಪರಂತಪನು ಹೀಗೆ ಹೇಳಿ ನಡೆದುದೆಲ್ಲವನ್ನೂ ನಂದಕುಮಾರನಿಗೆ ಬಿಚ್ಚಿ ಹೇಳಿದನು. ನಂದಕುಮಾರನೂ ಮದಯಂತಿಯ ವಿಷಯದಲ್ಲಿ ತನಗೆ ತಿಳಿದುದೆಲ್ಲ ವನ್ನೂ ಪರಂತಪನಿಗೆ ತಿಳಿಸಿಬಿಟ್ಟನು. ಬಳಿಕ ಪರಂತಪನು—ನಂದಕುಮಾರ! ಉಯಿಲಿನ ವಿಷಯದಲ್ಲಿ ಅನೇಕರಿಗೆ ಸಂಶಯ ಹುಟ್ಟಿಹೋಗಿರುವುದು. ಪ್ರಕೃತದ ಉಯಿಲಿನಿಂದ ಮಾರಕುಮಾರನಿಗೆ ತುಂಬಾ ಲಾಭವುಂಟಾಗಿರುವುದು. ಮಾರ ಕುಮಾರನ ಚರಿತ್ರೆಯು ಎಂಥದು? ಎಂದು ಕೇಳಿದನು.

ನಂದ—ಮಹಾಶಯ! ತಾವು ಲೋಕಾನುಭವವನ್ನು ಪಡೆದುಕೊಂಡು, ನನಗೆ ಇಂತಹ ಪ್ರಶ್ನೆಗಳನ್ನು ಹಾಕಬಾರದು. ಸಹೋದರರು ಸಹೋದರರ ವಿಷಯವಾಗಿ ಎತ್ತಿ ಆಡುವುದು ತರವಲ್ಲ.

ಪರಂ—ಹಾಗಾದರೆ ನೀನು ಮದಯಂತಿಯ ವಿಷಯದಲ್ಲಿ ಸಂದೇಹ ಪಡುವೆಯಾ, ಹೇಗೆ?

ನಂದ—ಆಕೆಯ ಮೇಲೆ ನನಗೆ ಸಂದೇಹವೇನೋ ಉಂಟು, ಆದರೆ, ಕಮಲಾಕಾಂತನು ಬದುಕಿದಷ್ಟೂ ತನಗೇ ಲಾಭವೆಂದು ತಿಳಿದುಕೊಂಡಿರುವ ಮದ ಯಂತಿಯು ಕಮಲಾಕಾಂತನನ್ನು ಕೊಂದು ತಾನು ತಿನ್ನುವ ಅನ್ನಕ್ಕೆ ಮಣ್ಣನ್ನು ತೂರಿಕೊಂಡಾಳೇ! ಈಗಿನ ಉಯಿಲನ್ನು ನೋಡಿದರೆ, ಇದರಲ್ಲಿ ಅವಳ ಚಾತು ರ್ಯವೇನೂ ಕಂಡು ಬರುತ್ತಿಲ್ಲ. ಈಗಿನ ಉಯಿಲು ಆರಿಗೆ ಅನುಕೂಲವೋ, ಅಲ್ಲಿಯೇ ಸಂಶಯವು ಓಡುತ್ತಿರುವುದು. ಕಾಣದುದನ್ನು ಹೇಳಬಾರದು.

ಪರಂ—ನನ್ನ ಬುದ್ಧಿಯೂ ಅತ್ತ ಕಡೆಗೇ ಓಡುತ್ತಿರುವುದು. ವಾಸ್ತ ವಿಕವಾಗಿಯೂ ಮಾರಕುಮಾರನೇ ಈ ಮೋಸದ ಕೃತ್ಯದಲ್ಲಿ ಕೈ ಹಾಕಿರಬೇಕು. ಇದರಲ್ಲಿ ಮದಯಂತಿಯ ತಪ್ಪೇನೂ ಇರಲಾರದು. ನಾಳೆಯೊಳಗಾಗಿ ಗುಟ್ಟೆ ಲ್ಲವೂ ರಟ್ಟಾಗಿ ಹೋಗುವುದು. ರಾಮರಮಾರಮಣನು ಇಲ್ಲಿಗೆ ಬಂದ ಕೂಡಲೆ, ನಾನು ಆತನಿಗೆ ಅನೇಕ ಪ್ರಶ್ನೆಗಳನ್ನು ಹಾಕಿ ತತ್ತ್ವವನ್ನು ಹೊರಪಡಿಸಿ ಬಿಡು ವೆನು. ಮುಂದೇನಾಗುವುದೋ ನೋಡುವ.

ಮರುದಿನ ಮಧ್ಯಾಹ್ನದ ಎರಡು ಗಂಟೆಯ ಸಮಯದಲ್ಲಿ ಕಾಶಿಯ ಪೋಲೀಸಿನವರು ಭೂತನಾಥನನ್ನು ಹಿಡಿದುಕೊಂಡು ಬಂದು ಕಾಲಾಂಜನದ ಪೋಲೀಸು ಠಾಣೆಯಲ್ಲಿ ಬಿಟ್ಟು ಹೋದರು. ಬಳಿಕ ಪರಂತಪನು ಭೂತನಾಥನನ್ನು ಒಂದು ಗೋಪ್ಯವಾದ ಸ್ಥಲಕ್ಕೆ ಕರೆದುಕೊಂಡು ಹೋಗಿ ಇಂತೆಂದನು:—

"ಭೂತನಾಥ—ಇಲ್ಲ, ಇಲ್ಲ; ತಪ್ಪಾಯಿತು, ತಪ್ಪಾಯಿತು; ಶ್ರೀಯುತ ರಾಮರಮಾರಮಣರಾಯ ಮಹಾಶಯರೇ! ನೀವು ಕೊಲೆ ಮಾಡಿರುವುದು ಸಾಕ್ಷಿಗಳಿಂದ ಸಿದ್ಧಾಂತವಾಗಿರುವಲ್ಲಿ, ಅದನ್ನು ಅಪಲಪಿಸುವುದಾದರೆ, ನಿಮಗೆ ಎಂದೆಂದಿಗೂ ಉತ್ತಾರಣೆಯೆಂಬುದೇ ಇಲ್ಲ. ಇದು ಶಿಲಾಶಾಸನದ ಮಾತು. ಇಂದಿನವರೆಗೂ ಪೋಲೀಸಿನವರಿಗೆ ಮಣ್ಣಿಗೆ ಮಣ್ಣು ತಿನ್ನಿಸಿದುದಾಯಿತು. ಇನ್ನು ಮುಂದೆ ಇಂತಹ ಕೆಲಸವು ಎಂದಿಗೂ ಸಾಗದು. ಎಚ್ಚರಿಕೆಯಿಂದ ನೀವು ಇದ್ದುದನ್ನು ಇದ್ದ ಹಾಗೆಯೇ ಹೇಳಬೇಕು. ಚಾತುರ್ಯವನ್ನೇನಾದರೂ ಉಪಯೋಗಿಸಿಕೊಂಡು ಮಾತನಾಡುವುದಾದರೆ ನಿಮ್ಮ ಹುಟ್ಟನ್ನೇ ಅಡಗಿಸಿ ಬಿಡುವೆವು. ಪೋಲೀಸಿನವರ ಹಸ್ತಲಾಘವವನ್ನಾದರೂ ಕಣ್ಣಿನಿಂದ ನೋಡಿ ಆನಂದಪಡಿರಿ," ಎಂದು ನಯಭಯಗಳನ್ನು ತೋರಿ ಮಾತನಾಡಿದನು.

ಭೂತ—ಸ್ವಾಮಿ! ತಾವು ನನ್ನನ್ನು ವ್ಯರ್ಥವಾಗಿ ಹೆದರಿಸುತ್ತಿರುವಿರಿ, ತಾವು ನನ್ನನ್ನು ಕಳ್ಳ, ದರೋಡೆಗಳ್ಳ, ಚೋರ, ಪಶ್ಯತೋಹರ, ಎಂದು ಮುಂತಾದ ಹೆಸರಿನಿಂದ ಸಂಬೋಧಿಸಿರಿ; ಅದರಿಂದ ನನಗೆ ವ್ಯಸನವಿಲ್ಲ. "ಕೊಲೆಗಾಗಿ ನಿನ್ನನ್ನು ದಸ್ತಗಿರಿ ಮಾಡಿರುವೆನು," ಎಂದು ನೀವು ಹೇಳುವುದು ಸುಳ್ಳಿನ ಸುದ್ದಿಯು. ನಾನು ಆ ವಿಷಯದಲ್ಲಿ ಸಂಪೂರ್ಣವಾಗಿಯೂ ನಿರ್ದೋಷಿಯು. ನಾನು ಆರನ್ನೂ ಕೊಲೆ ಮಾಡಿದವನಲ್ಲ.

ಪರಂ—ನೀನು ಆರನ್ನೂ ಕೊಲೆ ಮಾಡಿಲ್ಲವೇ? ಹಾಗಾದರೆ ಕಾಲಾಂಜನದಲ್ಲಿ ಆರೂ ಕೊಲೆಯಾಗಿಲ್ಲ. ಪೋಲೀಸಿನವರಿಗೆ ಮಾಡುವುದಕ್ಕೆ ಕೆಲಸವಿಲ್ಲದೆಯೇ ನಿನ್ನೊಡನೆ ಸರಸವಾಡುವುದಕ್ಕಾಗಿ ಕುಳಿತಿರುವರಲ್ಲವೇ?

ಭೂತ—ತಾವು ಒಬ್ಬ ಹುಡುಗಿಯ ಮಾತನ್ನೆತ್ತಿ ಆಡುವಂತಿದೆ.

ಪರಂ—ಅಲ್ಲ; ಆಕೆಯು ಇನ್ನೂ ಜೀವದಿಂದಿರುವಳು. ನಿನ್ನ ಮಚ್ಚಿನ ಏಟು ಅವಳಿಗೆ ಹೆಚ್ಚಿನ ಗಾಯವನ್ನೇನೂ ಮಾಡಿಲ್ಲ.

ಭೂತ—ಆಕೆಯು ಬದುಕಿರುವಳೇ! ಹಾಗಾದರೆ ನನಗೆ ಮತ್ತೇನು ಭಯ? ನಾನು ಈಶ್ವರ ಸಾಕ್ಷಿಯಾಗಿಯೂ ಮತ್ತಾರನ್ನೂ ಕೊಲೆ ಮಾಡಿದವನಲ್ಲ. ನಾನು ಈ ವಿಷಯದಲ್ಲಿ ಆವಾಗಲೂ ನಿರ್ದೋಷಿಯು.

ಪರಂ—ಹಾಗಾದರೆ ಆ ರಾತ್ರಿ ಕಮಲಾಕಾಂತನ ಮನೆಯಿಂದ ಪಲಾಯನ ವಾಗಲು ಕಾರಣ?

ಭೂತ—ಕಾರಣವೇ? ನಾನು ಹೈಮವತಿಯನ್ನು ಹೊಡೆದು ನೀರಿನಲ್ಲಿ ಬೀಸಾಡಿದೆನು. ಹೈಮವತಿಯು ಸತ್ತುಹೋದಳೆಂದು ನನಗೆ ಭಯವುಂಟಾಯಿತು.

ಪರಂ—ಆವ ಮಚ್ಚಿನಿಂದ ಕಮಲಾಕಾಂತನು ಕೊಲ್ಲಲ್ಪಟ್ಟನೋ, ಅದರಲ್ಲಿ ನಿನ್ನ ಹೆಸರಿನ ಗುರುತಿರುವುದು. ಅದು ನಿನ್ನದಾದುದರಿಂದ, ಆ ಕೊಲೆಯೂ ನಿನ್ನದೇ ಆಗಿರಬೇಕು.

ಪರಂತಪನು ಹೀಗೆ ಹೇಳಿ ತನ್ನಲ್ಲಿದ್ದ ಮಚ್ಚನ್ನು ತೆಗೆದು ತೋರಿದನು.

ಭೂತ—ಅಹುದು; ಇದೇ ನನ್ನ ಮಚ್ಚು. ನಾನು ಹೈಮವತಿಯನ್ನು ಹೊಡೆದು ಮನೆಯ ಕಡೆಗೆ ಓಡಿಬರುತ್ತಿರುವಾಗ ದಾರಿಯಲ್ಲಿ ಒಂದೆರಡು ಸಲ ಮುಗ್ಗರಿಸಿ ಬಿದ್ದೆನು; ಅಲ್ಲದೆಯೂ ಮನೆಗೆ ಬಂದ ಮೇಲೂ ಎಡವಿ ಬಿದ್ದೆನು. ಈ ಸಂದರ್ಭಗಳಲ್ಲಿ ಆ ಮಚ್ಚು ಆವಾಗಲೋ ಎಲ್ಲಿಯೋ ಬಿದ್ದು ಹೋಯಿತು. ಹತ್ಯಾಕಾರಿಯು ಅದನ್ನು ಹೇಗೋ ಕಂಡುಕೊಂಡು ಅದರ ಸಾಹಾಯ್ಯದಿಂದ ಕಮಲಾಕಾಂತನನ್ನು ಕೊಲೆಮಾಡಿರಬೇಕು. ತಾವು ನನ್ನನ್ನು ಈ ಸಲ ಮನ್ನಿಸೋಣವಾಗಲಿ; ತಮ್ಮ ಮಹೋಪಕಾರಕ್ಕೆ ಸರಿಯಾದ ಪುರಸ್ಕಾರವನ್ನೇ ಮಾಡುವೆನು.

ಪರಂ—ನಾನು ಪುರಸ್ಕಾರಕ್ಕಾಗಿ ಆವ ಕಾರ್ಯವನ್ನೂ ಮಾಡತಕ್ಕವನಲ್ಲ. ನಿಜವಾದ ಹತ್ಯಾಕಾರಿಯು ಆರೆಂಬುದು ಸಿದ್ಧಾಂತವಾಗುವ ವರೆಗೂ ನಿನಗೆ ಇಲ್ಲಿಂದ ಮುಕ್ತಿಲಾಭವಿಲ್ಲ.

ಭೂತ—ಮಹಾಶಯ! ಕಮಲಾಕಾಂತನ ಮನೆಯಲ್ಲಿ ಮದಯಂತಿಯೆಂಬ ಹೆಂಗುಸೊಬ್ಬಳು ವಾಸವಾಗಿರುವಳು. ಆಕೆಯು ಸಾಮಾನ್ಯೆಯಾದ ಹೆಂಗುಸಲ್ಲ. ಅವಳ ಚರಿತ್ರೆಯು ಅತಿ ಭಯಂಕರವಾದುದು. ಅವಳಂತಹ ಸ್ವಾರ್ಥಪರಾಯಣೆಯಾದ ಮತ್ತೊಬ್ಬ ಹೆಂಗುಸು ಈ ಲೋಕದಲ್ಲಿ ಹುಡುಕಿದರೆ ಎಲ್ಲಿಯೂ ದೊರೆಯಲಾರಳು. ಕಮಲಾಕಾಂತನ ಹತ್ಯೆಯು ಸ್ವಾರ್ಥತೆಯಿಂದಲ್ಲದೆ ಮತ್ತಾವುದರಿಂದಲೂ ನಡೆದಿಲ್ಲ. ತಾವು ಒಂದು ಸಲ ಆಕೆಯನ್ನು ನೋಡೋಣವಾಗಲಿ. ಆಕೆಯಿಂದಲೂ ಅನೇಕ ಹೊಸ ಸಂಗತಿಗಳು ಹೊರಬಿದ್ದರೂ ಬೀಳಬಹುದು. ನಿರ್ದೋಷಿಯಾದ ನನ್ನನ್ನು ವ್ಯರ್ಥವಾಗಿ ಹಿಂಡಿದರೆ ನಿಮಗೆ ಆವ ಪ್ರಯೋಜನವೂ ದೊರೆಯಲಾರದು.

## ಹದಿನಾಲ್ಕನೆಯ ಸಂಧಿ

### ಮದಯಂತಿಯ ಕೌಶಲ

ಪರಂತಪನು ಠಾಣೆಯಿಂದ ಹೊರಗೆ ಹೊರಟವನು ನೆಟ್ಟಗೆ ಕಮಲಾಕಾಂತನ ಮನೆಗೆ ಬಂದನು ; ಬಂದ ಕೂಡಲೆ ಮದಯಂತಿಯನ್ನು ನೋಡಿದನು.

ಮದಯಂತಿಯು ಮೊದಲಿಗಿಂತಲೂ ಕಾಂತಿಹೀನೆಯಾಗಿ ಮಾಲಿನ್ಯವನ್ನು ತಾಳಿರುವಳು. ಆಕೆಯ ಕಣ್ಣುಗಳಲ್ಲಿ ಸರ್ವಜನವಶೀಕಾರಲಕ್ಷಣವುಳ್ಳ ಆ ತೇಜಸ್ಸಿರಲಿಲ್ಲ ; ಮುಖದಲ್ಲಿ ಎಂತಹ ಋಷಿಗಳನ್ನಾದರೂ ಬೆರಗು ಮಾಡಿಬಿಡುವ ಆ ಜಗನ್ಮೋಹಕವಾದ ಮುಗುಳು ನಗೆಯಿಲ್ಲ ; ಆಕೆಯ ದೇಹದಲ್ಲಿ ಸರ್ವಾಂಗ ಸುಂದರವಾದ ಘಟನಾ ವಿಶೇಷವುಳ್ಳ ತಾರುಣ್ಯವು ನೋಟಕರ ಕಾರುಣ್ಯಕ್ಕೆ ಈಡಾಗಿಹೋಗಿದ್ದಿತು. ಆಕೆಯು ಆವಾಗಲೂ ಮುಖವನ್ನು ಜೋಲು ಹಾಕಿ ಕೊಂಡು ಕುಳಿತಿರುವಳೇ ಹೊರತು ಆರೊಡನೆಯೂ ಮಾತನಾಡಲೊಲ್ಲಳು. ಆಕೆಗೆ ಉನ್ಮಾದವೇನಾದರೂ ಆವರಿಸಿತೋ ಎಂಬಂತೆ ಆಗಿಂದಾಗ ಹುಚ್ಚು ಹುಚ್ಚಾಗಿ ಮಾತನಾಡಿಕೊಳ್ಳುತ್ತಲೂ, ಒಂದೊಂದು ವೇಳೆ ನಗುತ್ತಲೂ, ಒಂದೊಂದು ವೇಳೆ ಅಳುತ್ತಲೂ, ಒಂದೊಂದು ವೇಳೆ ಭಯಂಕರವಾದ ಬಿರುನೋಟವನ್ನು ಬೀರುತ್ತಲೂ ಕುಳಿತಲ್ಲಿಯೇ ಕುಳಿತಿರುವಳು.

ಮದಯಂತಿಯು ಕಮಲಾಕಾಂತನ ಮನೆಗೆ ಬಂದ ಕೂಡಲೆ, ನಂದಕುಮಾರ ನನ್ನು ಮೋಹಿಸುವುದಕ್ಕೆ ಮೊದಲು ಮಾಡಿದಳು. ಆವ ಉಪಾಯವನ್ನು ಅವ ಲಂಬಿಸಿದರೂ ಆತನು ಸ್ವಾಧೀನವಾಗಲಿಲ್ಲ. ನಂದಕುಮಾರನು ತನಗೆ ಒಲಿಯ ಲಿಲ್ಲವೆಂದು ಆಗ್ರಹಗೊಂಡವಳಾಗಿ ಮದಯಂತಿಯು ಭೇದೋಪಾಯವನ್ನು ಅವಲಂಬಿಸಿ ನಂದಕುಮಾರನನ್ನು ಮನೆಯಿಂದ ಓಡಿಸಿ ಬಿಟ್ಟಳು.

ನಂದಕುಮಾರನನ್ನು ಓಡಿಸಿದ ಬಳಿಕ ಮಾರಕುಮಾರನನ್ನಾದರೂ ಆಶ್ರಯಿಸಿಕೊಳ್ಳೋಣವೆಂದು ಆಲೋಚಿಸಿ ಇವರಿಬ್ಬರನ್ನೂ ತೂಗಿ ನೋಡಿದಳು. ನರದೇವತೆಯಾದ ನಂದಕುಮಾರನೆಲ್ಲಿ ? ನರರಾಕ್ಷಸನಾದ ಮಾರಕುಮಾರನೆಲ್ಲಿ ? ಮಾರಕುಮಾರನಲ್ಲಿ ಆಕೆಯ ಮನವು ಒಡಂಬಡುವುದು ಹಾಗಿರಲಿ ; ಆಕೆಯು ಆತನನ್ನು ಅಂತರ್ಯದಲ್ಲಿ ದ್ವೇಷಿಸುವುದಕ್ಕೆ ಮೊದಲು ಮಾಡಿದಳು. ಒಂದೊಂದು ವೇಳೆ ಮದಯಂತಿಯು ಮಾರಕುಮಾರನ ರೂಪದಲ್ಲಿ ಬೆರಗಾಗಿ ಸೋತುಹೋಗು ವಳು ; ಆದರೂ ಆತನೊಡನೆ ಮುಖಕೊಟ್ಟು ಮಾತನಾಡುವುದಕ್ಕೆ ಅವಳಿಗೆ ಇಷ್ಟವುಂಟಾಗುತ್ತಿರಲಿಲ್ಲ. ಮೇಲೆ ಎಷ್ಟು ವಿಶ್ವಾಸವನ್ನು ನಟನೆ ಮಾಡು ತ್ತಿದ್ದರೂ, ಅಂತರ್ಯದಲ್ಲಿ ಒಬ್ಬರನ್ನೊಬ್ಬರು ದ್ವೇಷಿಸುತ್ತಾ ಒಬ್ಬರಿಗೊಬ್ಬರು

ಕಿಡುಕನ್ನೇ ಮಾಡಬೇಕೆಂದು ಸಮಯವನ್ನು ನಿರೀಕ್ಷಿಸಿಕೊಂಡಿರುತಿದ್ದರು. ಸಮಯ ಬಂದಾಗಲೆಲ್ಲಾ ತಮ್ಮ ತಮ್ಮ ಕೈ ತೋರಿಸಿಯೇ ಬಿಡುತ್ತಿದ್ದರು.

ಕಮಲಾಕಾಂತನ ವೈಕುಂಠಸಮಾರಾಧನೆಯ ದಿನ ಉಯಿಲು ಓದಿದುದನ್ನು ಕೇಳಿ ಮದಯಂತಿಯು ನೆಲಕ್ಕೆ ಇಳಿದೇ ಹೋದಳು. ಆಕೆಯ ಹೃದಯದಲ್ಲಿ ದಾರುಣವಾದ ಸಂಶಯವು ಪದಾರ್ಪಣಮಾಡಿ ಮದಯಂತಿಯನ್ನು ಅಲ್ಲಾಡಿಸಿ ಬಿಟ್ಟಿತು.

ಕಮಲಾಕಾಂತನು ಮದಯಂತಿಯನ್ನು ಅಧಿಕವಾಗಿ ಪ್ರೀತಿಸುತ್ತಿದ್ದನು. ಆ ಪ್ರೀತಿಯ ಮಹಿಮೆಯಿಂದ ಆತನು ಆಕೆಗೆ ಆಗಿಂದಾಗ ಸಂಸಾರದ ಗುಟ್ಟೆಲ್ಲವನ್ನೂ ತಿಳಿಸಿಬಿಡುತ್ತಿದ್ದನು. ಒಂದು ಸಲ ಮದಯಂತಿಯು ನಂದಕುಮಾರನ ವಿಷಯವಾಗಿ ಮಾತನಾಡುತ್ತಿರುವಲ್ಲಿ, ಕಮಲಾಕಾಂತನು ಅಭಿಪ್ರಾಯ ಪಟ್ಟುದೇನೆಂದರೆ :—

"ನಂದಕುಮಾರನು ಒಳ್ಳೆಯ ಸ್ವಭಾವದ ಹುಡುಗನು. ಅವನು ನನ್ನನ್ನು ಪರಿಪರಿಯಾಗಿ ಸೇವಿಸುತ್ತಿದ್ದನು. ಆತನನ್ನು ಕಂಡರೆ ನನಗೆ ಎಷ್ಟೋ ಸಂತೋಷವಾಗಿರುತ್ತಿದ್ದಿತು. ನಾನು ವಿವೇಕವಿಲ್ಲದೆಯೇ ಆತನನ್ನು ಮನೆಯಿಂದ ಓಡಿಸಿ ಬಿಟ್ಟೆನು. ಆಗಿನಿಂದಲೂ ನನ್ನ ಮನವು ಪಶ್ಚಾತ್ತಾಪದಿಂದ ಬೆಂದು ಹೋಗುತ್ತಿರುವುದು. ನಾನು ಮಾಡಿದ ತಪ್ಪಿಗೆ ಪ್ರತಿಫಲವಾಗಿ ಆತನಿಗೆ ನನ್ನ ಸಂಪತ್ತಿನಲ್ಲಿ ಅಧಿಕಾಂಶವನ್ನೇ ಕೊಡುವವನಾಗಿರುವೆನು."

ಕಮಲಾಕಾಂತನ ಮನೋಭಿಪ್ರಾಯವನ್ನು ಕಿವಿಯಾರೆ ಕೇಳಿದ್ದ ಮದಯಂತಿಯು ಸಭೆಯಲ್ಲಿ ಓದಿದ ಉಯಿಲಿನ ಒಕ್ಕಣೆಯನ್ನು ಕೇಳಿದಾಕ್ಷಣವೇ "ಇದು ಮೋಸದ ಉಯಿಲು," ಎಂದು ನಿರ್ಧರಮಾಡಿಕೊಂಡಳು ; ಆದರೆ ಇದರ ತತ್ತ್ವವನ್ನು ಕಂಡು ಹಿಡಿಯುವ ಬಗೆ ಹೇಗೆ? ಮದಯಂತಿಯು ತನ್ನ ಸಾಹಸವೆಲ್ಲವನ್ನೂ ವೆಚ್ಚಮಾಡಿ ನೋಡಿದರೂ ಆವ ಪ್ರಯೋಜನವೂ ಕಂಡು ಬಾರದುದರಿಂದ, "ಮಾರಕುಮಾರನನ್ನೇ ಬುಟ್ಟಿಯೊಳಗೆ ಹಾಕಿಕೊಂಡು ಬಿಟ್ಟರೆ ತನ್ನ ರೊಟ್ಟಿಯು ಜಾರಿ ತುಪ್ಪದಲ್ಲಿ ಬಿದ್ದಂತಾಗುವುದು," ಎಂದು ಸಿದ್ಧಾಂತ ಮಾಡಿಕೊಂಡು ಆತನನ್ನೇ ಹೊಂದಿಕೊಂಡಳು.

ಮೊದಲಿನಿಂದಲೂ ಮದಯಂತಿಯು ಮಾರಕುಮಾರನಿಂದ ಆವ ಪ್ರಯೋಜನವೂ ದೊರೆಯಲಾರದೆಂದು ತಿಳಿದು, ಅವನೊಡನೆ ವಿಶೇಷವಾಗಿ ಮಾತನಾಡುತ್ತಿರಲಿಲ್ಲ ; ಈಗ ಆತನೊಡನೆ ಮಾತನಾಡುವಾಗಲೆಲ್ಲಾ ಪ್ರೇಮಕಟಾಕ್ಷವನ್ನು ಬೀರಿ ತನ್ನ ಒಯ್ಯಾರಗಳನ್ನು ತೋರಿ ಮಂದಹಾಸದೊಡನೆ ಅಂದವಾದ ರೀತಿಯಲ್ಲಿ ಮಾತನಾಡುವಳು ; ನಿಷ್ಕಾರಣವಾಗಿ ಆತನ ಬಳಿಗೆ ಹೋಗಿ ನಿಲ್ಲುವಳು ;

ಆತನ ಯೋಗಕ್ಷೇಮವನ್ನು ತಾನೇ ವಹಿಸಿಕೊಂಡು ಬಲು ಅಕ್ಕರೆಯಿಂದ ಆತನ ಕೆಲಸವೆಲ್ಲವನ್ನೂ ನಿಮಿಷಮಾತ್ರದಲ್ಲಿ ನೆರವೇರಿಸುವಳು.

ಮಾರಕುಮಾರನು ಇದೆಲ್ಲವನ್ನೂ ನೋಡಿ ಮದಯಂತಿಯು ತನಗೆ ಒಲಿದ ಳೆಂದು ತಿಳಿದು ತನ್ನೊಳಗೆ ತಾನೇ ಆನಂದ ಪಟ್ಟುಕೊಳ್ಳುತಿದ್ದನು. ಕಮಲಾ ಕಾಂತನ ಜೀವದ್ದಶೆಯಲ್ಲಿ ಮದಯಂತಿಯು ಆವ ಮಾರಕುಮಾರನನ್ನು ತನ್ನ ಪಾದಾಕ್ರಾಂತನನ್ನಾಗಿ ಮಾಡಿಕೊಳ್ಳಬೇಕೆಂದು ಯತ್ನಮಾಡುತ್ತಿದ್ದಳೋ ಆಕೆಯೇ ಕಮಲಾಕಾಂತನ ಮರಣಾನಂತರದಲ್ಲಿ, ಆ ಮಾರಕುಮಾರನಿಗೆ ಪಾದಾ ಕ್ರಾಂತೆಯಾಗಿದ್ದುಕೊಂಡು ಸ್ವಾರ್ಥವನ್ನು ಸಾಧಿಸಿಕೊಳ್ಳಬೇಕೆಂದು ಪ್ರಯತ್ನ ಪಡುತ್ತಿರುವುದು ಆ ಕಾಮಾಂಧನಾದ ಮಾರಕುಮಾರನಿಗೆ ಹೇಗೆ ತಾನೇ ಗೊತ್ತಾ ದೀತು !

ಒಂದು ದಿನ ಮಾರಕುಮಾರನು ವಿಪರೀತವಾಗಿ ಮದ್ಯವನ್ನು ಸೇವಿಸಿ ಮದ ಯಂತಿಯ ಕೋಣೆಗೆ ಪ್ರವೇಶ ಮಾಡಿದನು. ಕಮಲಾಕಾಂತನ ಕಾಲವಾಗಿದ್ದರೆ, ಮದಯಂತಿಯು ಆತನನ್ನು ಕುತ್ತಿಗೆ ಹಿಡಿದು ತಳ್ಳಿಸಿ ಬಿಡುತ್ತಿದ್ದಳು. ಈಗ ಆ ಕಾಲವಲ್ಲ; ಆ ಕಾಲವು ಅಂದಿಗೇ ತೀರಿತು. ಮದಯಂತಿಯು ಸ್ವಾರ್ಥಸಿದ್ಧಿಗೆ ಕಾಲವು ಒದಗಿಬಂದಿತೆಂದು ತಿಳಿದು ಸಂತೋಷಪಟ್ಟವಳಾಗಿ ಮತ್ತಾರೂ ಇಲ್ಲ ದಿರುವುದನ್ನು ನೋಡಿ ಮಾರಕುಮಾರನನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಅವನಿಗೆ ವೀಳಯವನ್ನು ಮಡಿಸಿ ಕೊಟ್ಟಳು. ಮಾರಕುಮಾರನು ಅದನ್ನು ಆನಂದದಿಂದ ಮೆಲ್ಲುತ್ತಿರುವಾಗ, ಮದಯಂತಿಯು ಮುಗುಳು ನಗೆಯಿಂದ ಆತನ ಗಲ್ಲವನ್ನು ಹಿಡಿದು—ಪ್ರಭೂ ! ಇಂದು ನನ್ನ ಕೋಣೆಯಲ್ಲಿ ಪೂರ್ಣಚಂದ್ರನೇ ಉದಯಿಸಿದಂತಾಯಿತು, ಎಂದು ನುಡಿದಳು.

ಮದ್ಯಪಾನದಿಂದ ಮೊದಲೇ ಮದಿಸಿದ್ದ ಮಾರಕುಮಾರನು ಮದಯಂತಿಯ ಮಂದಹಾಸ ಪರಿಪೂರಿತವಾದ ಪ್ರಣಯ ಕಟಾಕ್ಷದ ಸಾನ್ನಿಧ್ಯದಿಂದ ಮತ್ತಷ್ಟು ತಲೆದಿರುಗಿದವನಾಗಿ—ಪ್ರಿಯೆ, ಮದಯಂತಿ ! ನಿನಗೆ ನನ್ನಲ್ಲಿ ಇನ್ನೂ ದಯೆ ಬರಲಿಲ್ಲವೇ ? ಎಷ್ಟು ದಿವಸ ನೀನು ನನ್ನನ್ನು ಹೀಗೆ ವಿರಹತಾಪದಿಂದ ತಲ್ಲಣಿ ಸುತ್ತಿರುವಂತೆ ಮಾಡಬೇಕೆಂದು ಎಣಿಸಿರುವೆ ? ಎಂದು ಬೆಸಗೊಂಡನು.

ಮದಯಂತಿಯು ತನ್ನ ಹಾವಭಾವಗಳಿಂದ ಕುಲುಕುತ್ತಾ—ಹಾಗೆಂದ ರೇನು, ಪ್ರಭೂ ? ತಾವು ಈಗ ಅಗಾಧವಾದ ಸಂಪತ್ತಿಗೆ ಅಧಿಕಾರಿಗಳು ; ತಮ್ಮಂ ತಹ ಅಸಹಾಯ ಶೂರರಿಗೆ ನನ್ನಂತಹ ಪಾಮರಳಾದ ಹೆಂಗುಸು ತೊಂದರೆಯ ನ್ನುಂಟುಮಾಡುವುದೆಂದರೇನು ? ಎಂದು ಮೃದುಮಧುರವಾಗಿ ಮಾತನಾಡಿದಳು.

ಮಾರ—ಈ ಸಂಪತ್ತು ನನಗೆ ಸುಲಭವಾಗಿ ಕೈ ಸೇರಿತೆಂದು ತಿಳಿದೆಯಾ? ಪ್ರಿಯೆ! ಕಷ್ಟ, ಕಷ್ಟ, ಬಲುಕಷ್ಟ!

ಮದ—ಇದೆಂತಹ ಮಾತು? ತಮಗೆ ಕಷ್ಟವೆಂದರೇನು? ಕಷ್ಟವೆಂಬುದೇ ಕಾಣಿಸುವುದಿಲ್ಲವಲ್ಲಾ! ನಿಮ್ಮ ತಾತನವರು ಹೊಟ್ಟೇ ಕಟ್ಟಿ ಬಟ್ಟೇ ಕಟ್ಟಿ ಎಷ್ಟೋ ಶ್ರಮಪಟ್ಟು ಹಣವನ್ನು ಸಂಪಾದಿಸಿದರು. ಅನಾಯಾಸವಾಗಿ ಆ ಸಂಪತ್ತು ನಿಮ್ಮ ಕೈ ಸೇರಿದುದಕ್ಕಾಗಿ ನಿಮಗೆ ತುಂಬಾ ಶ್ರಮವಾಗಿರ ಬಹುದಲ್ಲವೇ?

ಮಾರ—ಇದಕ್ಕಾಗಿ ಎಷ್ಟು ಜನರ ಕೈಕಾಲು ಕಟ್ಟಬೇಕಾಯಿತೋ! ಎಷ್ಟು ಜನರಿಗೆ ತಿನ್ನಿಸಿ ಉಣ್ಣಿಸಿ ಸಂತೋಷಪಡಿಸಬೇಕಾಯಿತೋ! ಈ ಶ್ರಮವೆಲ್ಲವೂ ನಿನಗೆ ಹೇಗೆ ಗೊತ್ತಾಗಬೇಕು, ಮದಯಂತಿ?

ಮದ—ಪ್ರಿಯನೇ! ಇದಕ್ಕಾಗಿ ಕಂಡವರ ಕೈಕಾಲು ಕಟ್ಟಬೇಕೇಕೆ? ಇತರರಿಗೆ ತಿನ್ನಿಸಿ ಉಣ್ಣಿಸಬೇಕೇಕೇ? ನಿಮ್ಮ ಪಿತಾಮಹನು ನಿಮ್ಮನ್ನು ಅತಿಶಯವಾಗಿ ಪ್ರೀತಿಸುತ್ತಿದ್ದನು. ಆ ಪ್ರೀತಿಗೆ ಫಲವಾಗಿ ಆತನು ತನ್ನ ಸಂಪತ್ತೆಲ್ಲವನ್ನೂ ಉಯಿಲಿನ ಮೂಲಕವಾಗಿ ನಿಮಗೆ ಸಲ್ಲಿಸಿರುವನು. ಇದಕ್ಕಾಗಿ ಇಷ್ಟೆಲ್ಲಾ ಶ್ರಮವೇಕೆ?

ಮಾರ—ಹಾಗಲ್ಲಾ, ಮದಯಂತಿ! ಅದರ ವಿಷಯವೇ ಬೇರೆ; ಅದು ನಿನಗೆ ತಿಳಿಯದು.

ಮದ—ತಿಳಿಸಿದರಾಯಿತು; ನನಗೆ ತಿಳಿಸಿದರೂ ಗೊತ್ತಾಗುವುದಿಲ್ಲವೇ?

ಮಾರ—ತಿಳಿಸುವುದಕ್ಕೆ ಭಯವಾಗುವುದು; ಅದನ್ನು ಮಟ್ಟಿಗೆ ತಿಳಿಸಲಾರದವನಾಗಿರುವೆನು. ನೀನು ಒಂದಾನೊಂದು ಕಾಲದಲ್ಲಿ ನಂದಕುಮಾರನನ್ನು ಪ್ರೀತಿಸುತ್ತಿರಲಿಲ್ಲವೇ? ಒಂದಾನೊಂದು ಕಾಲದಲ್ಲಿ ನನ್ನ ವಿಷಯದಲ್ಲಿಯೂ ನಿನಗೆ ವಿರಸವುಂಟಾಗುವುದಾದರೆ, ನನಗೆ ಸರ್ವನಾಶವೇ ಆಗಿಹೋಗುವುದು. ಇಲ್ಲ, ಇಲ್ಲ, ನಾನೆಂದಿಗೂ ತಿಳಿಸಲಾರೆನು.

ಮದ—ಹಾಗೆಂದರೇನು, ಪ್ರಿಯ? ನಾನು ಆ ಸೊಟ್ಟ ಮೋರೆಯ ನಂದಕುಮಾರನನ್ನು ಆವಾಗ ಪ್ರೀತಿಸುತ್ತಿದ್ದೆನು? ಅವನು ಆವಾಗಲೂ ನನಗೆ ಹೃದಯಶೂಲನಾಗಿಯೇ ಇದ್ದನು. ಆತನು ನನಗೆ ಆಮರಣದ್ವೇಷಿಯು. ನನ್ನಿದಿರಿನಲ್ಲಿ ತಾವು ಆ ಸುಟ್ಟ ಮೋರೆಯುವನ ಹೆಸರನ್ನೂ ಎತ್ತಬಾರದು.

ಈ ಮಾತನ್ನು ಕೇಳಿದ ಮಾರಕುಮಾರನು ನಿಜವಾಗಿಯೂ ಮದಯಂತಿಯು ನಂದಕುಮಾರನನ್ನು ದ್ವೇಷಿಸುತ್ತಿರುವಳೆಂದು ನಂಬಿಕೊಂಡವನಾಗಿ—ಪ್ರಿಯೆ! ನನ್ನ ಉಪಾಯವು ಹೇಗೆ ಫಲಿಸುವುದೆಂಬುದನ್ನು ಮೊದಲು ನನಗೆ ತಿಳಿಸು, ಬಳಿಕ ನಾನು ಎಲ್ಲವನ್ನೂ ತಿಳಿಸುವೆನು, ಎಂದನು.

ಮದ—ಇದಾರಾಡುವ ಮಾತು? ವಿಷಯವು ಮೊದಲು ತಿಳಿದರಲ್ಲವೇ, ಏನನ್ನಾದರೂ ಮಾತನಾಡಬಹುದು. ವಿಷಯವು ಗೊತ್ತಾಗುವುದಕ್ಕೆ ಮೊದಲೇ ನಾನೇನು ಉತ್ತರಕೊಡಲಿ?

ಮಾರ—ಮದಯಂತಿ! ನಾನು ಈ ವಿಷಯವನ್ನು ಕುರಿತು ಮತ್ತಾವ ಮಾತನ್ನೂ ಆಡುವುದಿಲ್ಲ. ಇದೆಲ್ಲಾ ಹಾಗಿರಲಿ; ನೀನು ದೊಡ್ಡ ಮನಸ್ಸುಮಾಡಿ ನನ್ನ ಮನೋರಥವನ್ನು ಆವಾಗ ಪೂರ್ಣಮಾಡುವೆ? ತಿಳಿಸು.

ಮದ—ನನ್ನ ಅಭಿಲಾಷೆಯು ಪೂರ್ಣವಾದಾಗ; ಅದು ಕಂಡ ವಿಷಯವೇ ಆಗಿರುವುದು. ಇದಕ್ಕಾಗಿ ತಾವು ಇಷ್ಟು ಚಿಂತಿಸುವುದೇತಕೆ?

ಮಾತುಕತೆಗಳು ಈ ರೀತಿಯಾಗಿ ನಡೆಯುತ್ತಿರುವ ಸಮಯಕ್ಕೆ ಸರಿಯಾಗಿ ಸೇವಕನೊಬ್ಬನು ಅಲ್ಲಿಗೆ ಬಂದು—ಬುದ್ಧೀ! ತಮ್ಮನ್ನು ನೋಡಬೇಕೆಂದು ಇಬ್ಬರು ಪೋಲೀಸಿನವರು ಬಂದಿರುವರು, ಎಂದು ಹೇಳಿ ಅಲ್ಲಿ ನಿಲ್ಲದೆಯೇ ಹೊರಟು ಹೋದನು.

ಮಾರಕುಮಾರನು ಪೋಲೀಸಿನವರ ಹೆಸರನ್ನು ಕೇಳಿದೊಡನೆಯೇ ಕಂಗೆಟ್ಟವ ನಾಗಿ ಅವರನ್ನು ನೋಡದೆಯೇ ತನ್ನ ಕೋಣೆಗೆ ಹೊರಟುಹೋದನು.

---

## ಹದಿನೈದನೆಯ ಸಂಧಿ

### ಮೋಸದ ಉಯಿಲು

ಪರಂತಪನು ಕಮಲಾಕಾಂತನ ಮನೆಯಿಂದ ಹೊರಗೆ ಬಂದು, ಅನಂತ ರತ್ನನು ಹೊರಗೆ ಬಂದು ನಿಂತಿರುವುದನ್ನು ನೋಡಿ—ಅನಂತ ಮಹಾಶಯ! ತಾವು ಈ ಸಮಯದಲ್ಲಿ ಆವ ಕಾರ್ಯವನ್ನು ನಿಮಿತ್ತಮಾಡಿಕೊಂಡು ಇಲ್ಲಿಗೆ ಬರೋಣ ವಾಯಿತು? ಎಂದು ಕೇಳಿದನು.

ಅನಂತರತ್ನನು ನಗುತ್ತಾ—ಕಮಲಾಕಾಂತನ ಮನೆಯು ಜೂಜಿನ ಕಟ್ಟೆ ಯಾಗಿ ಹೋಗಿರುವುದು. ಇಲ್ಲಿ ಇಬ್ಬರು ಜೂಜುಗಾರರು ಸೇವಾವೃತ್ತಿಯನ್ನು

ಅವಲಂಬಿಸಿಕೊಂಡು ವಾಸವಾಗಿರುವರಂತೆ, ನಾನು ಅವರೊಡನೆ ಮಾತನಾಡ ಬೇಕೆಂದು ಬಂದೆನು, ಎಂದನು.

ಪರಂ—ಅವರನ್ನು ನೋಡಿದುದಾಯಿತಷ್ಟೇ ?

ಅನಂತ—ನೋಡಿದುದಾಯಿತು.

ಹೀಗೆಂದು ಹೇಳಿ ಪರಂತಪನ ಕಿವಿಯಲ್ಲಿ ಪಿಸುಪಿಸನೆ ಮಾತನಾಡಿದ ಬಳಿಕ—ಮಹಾಶಯ ! ಆವುದಕ್ಕಾಗಿ ತಾವು ಬಿಜಯ ಮಾಡಿಸೋಣವಾಯಿತು ? ಎಂದು ಕೇಳಿದನು.

ಪರಂ—ಮದಯಂತಿಗಾಗಿ.

ಅನಂತ—ಮದಯಂತಿಯೇ ? ಆಕೆಯು ಸಾಮಾನ್ಯೆಯಾದ ಹೆಂಗುಸಲ್ಲ. ಇಷ್ಟು ವಯಸ್ಸಿನಲ್ಲಿ ಆಕೆಯು ಮಾಡದ ಅಸಾಧ್ಯವಾದ ಕೆಲಸವಾವುದೂ ಇಲ್ಲ. ಆಕೆಯು ಈ ಮನೆಯಲ್ಲಿ ಕಾಲಿಟ್ಟಂದಿನಿಂದಲೂ ನಮಗೆ ಆವುದಾದರೊಂದು ತೊಂದರೆ ಇದ್ದೇ ಇರುವುದು.

ಪರಂ—ಹಾಗಾದರೆ, ಅವಳಿಂದ ವಿಷಯವನ್ನು ತಿಳಿದುಕೊಳ್ಳದೆಯೇ ನಾನು ಆವ ಅಭಿಪ್ರಾಯವನ್ನೂ ಬಹಿರಂಗ ಪಡಿಸಲಾರೆನು.

ಬಳಿಕ ಅನಂತರತ್ನ ಪರಂತಪರಿಬ್ಬರೂ ಸೇರಿಕೊಂಡು ಮದಯಂತಿಯ ಬಳಿಗೆ ಹೊದರು. ಅಲ್ಲಿ ಆಕೆಯು ಚಿಂತೆಯಲ್ಲಿ ಮೈಮರೆತು ಕುಳಿತಿದ್ದಳು. ಆಕೆಯು ಇಬ್ಬರು ಅಧಿಕಾರಿಗಳನ್ನು ನೋಡಿದ ಕೂಡಲೆ—ಪೂಜ್ಯಮಹಾಶಯರಿರಾ ! ತಾವು ಇಲ್ಲಿಗೆ ಬಂದುದೇನು ? ಕೊಲೆ ವಿಷಯದಲ್ಲಿ ತಮಗೆ ಸುಳಿವೇನಾದರೂ ಗೊತ್ತಾಯಿತೇ ? ಎಂದು ಪ್ರಶ್ನೆಮಾಡಿದಳು.

ಪರಂತಪನು ಗಂಭೀರಭಾವವನ್ನು ತಾಳಿ—ತಾಯೆ ! ನಿನ್ನ ಸಾಹಾಯ್ಯವಿಲ್ಲದೆಯೇ ನಾವು ಏನ ಮಾಡುವುದಕ್ಕಾದೀತು ?

ಮದ—ನನ್ನ ಸಾಹಾಯ್ಯವೇ ! ನನಗೇನು ಗೊತ್ತು ?

ಪರಂ—ಈ ಮನೆಯಲ್ಲಿ ನಿನಗೆ ಗೊತ್ತಾಗದ ಹಾಗೆ ಆವ ಕೆಲಸವೂ ನಡೆಯುವ ಹಾಗಿಲ್ಲ. ಆದುದರಿಂದ ನಿನಗೆ ಎಲ್ಲವೂ ಗೊತ್ತುಂಟು.

ಮದ—ಅದೇನೋ ಸರಿ.

ಪರಂ—ಹಾಗಾದರೆ ಹೇಳು; ಕಮಲಾಕಾಂತನನ್ನು ಕೊಂದವರಾರು? ಒಬ್ಬ ದೊಡ್ಡ ಮನುಷ್ಯನ ಜೀವನ ಮರಣಗಳು ನಿನ್ನ ಮಾತಿನ ಮೇಲೆ ನಿಂತಿರುವುವು. ಎಚ್ಚರಿಕೆಯಿಂದ ಮಾತನಾಡು.

ಮದ—ನಿಮಗೆ ಇಷ್ಟು ಗುಟ್ಟುಗಳು ಬಹಿರಂಗ ಪಟ್ಟಿರುವಲ್ಲಿ, ನಾನು ಸುಳ್ಳ ಹೇಳಿದರೆ ಸಾಗೀತೇ?

ಪರಂ—ನಮಗೆ ಗೊತ್ತಿರುವುದಾದರೂ ನಿನ್ನ ಮಾತನ್ನೂ ಕೇಳ ಬೇಕೆಂದು ಬಂದಿರುವೆವು. ನಿನ್ನ ರಹಸ್ಯವೆಲ್ಲವನ್ನೂ ಭೇದಿಸಿ ತಿಳಿದು ಕೊಳ್ಳುವುದಕ್ಕಾಗಿಯೇ ನಾವೀಗ ಇಲ್ಲಿಗೆ ಬಂದಿರುವುದು.

ಮದ—ಹಾಗಾದರೆ ಕೇಳೋಣವಾಗಲಿ; ನಾನೇ ಕಮಲಾಕಾಂತನನ್ನು ಕೊಂದವಳು. ಈಗಳಾದರೂ ಗೊತ್ತಾಯಿತೇ?

ಇಲ್ಲಿಯ ವರೆಗೂ ಆವ ಮಾತನ್ನೂ ಆಡದೆಯೇ ಬಾಯ ಮುಚ್ಚಿಕೊಂಡು ಸುಮ್ಮನೆ ಕೇಳುತ್ತಿದ್ದ ಅನಂತರತ್ನನು ಹೇಳಿದುದೇನೆಂದರೆ:—

"ಪರಂತಪ ಮಹಾಶಯ! ನಾವು ಪೋಲೀಸಿನವರು; ನಾವು ಆವಾಗಲೂ ನ್ಯಾಯಕ್ಕೆ ದಾಸರು. ಈಗ ಮದಯಂತಿಯು ಕಮಲಾಕಾಂತನ ಹತ್ಯೆಯನ್ನು ತಾನೇ ಒಪ್ಪಿಕೊಂಡಿರುವುದರಿಂದ, ನಾವು ಈಕೆಯನ್ನೇ ಆ ತಪ್ಪಿಗಾಗಿ ಹಿಡಿದು ಕೊಂಡು ಹೋಗುವೆವು. ತಾವು ಏನನ್ನು ಬೇಕಾದರೂ ಹೇಳೋಣವಾಗಲಿ. ನಾವು ಮಟ್ಟಿಗೆ ಈಕೆಯನ್ನು ಎಂದಿಗೂ ಬಿಟ್ಟು ಹೋಗತಕ್ಕವರಲ್ಲ."

ಪರಂ—ಮಹಾಶಯ! ತಾವು ತಪ್ಪಾಗಿ ಭಾವಿಸೋಣವಾಯಿತು. ಮದಯಂತಿಯು ಅಪರಾಧಿನಿಯಲ್ಲ. ಈಕೆಯು ಕಮಲಾಕಾಂತನನ್ನು ಎಂದಿಗೂ ಕೊಂದವಳಲ್ಲ.

ಅನಂತ—ಹಾಗೆಂದರೇನು, ಮಹಾಶಯ? ಈಕೆಯು ಕೆಟ್ಟ ಸ್ವಭಾವದವಳು. ಈಕೆಯು ಮಾಡದ ಕೆಟ್ಟಕೆಲಸವಾವುದೂ ಇಲ್ಲ.

ಪರಂ—ಹಾಗೆ ತಾವು ಹೇಳುವುದಾದರೂ, ಪ್ರಕೃತ ಸಂದರ್ಭದಲ್ಲಿ ಈಕೆಯು ತಾವು ಹೇಳುವ ದೋಷದಿಂದ ದುಷ್ಟೆಯಲ್ಲ.

ಅನಂತ—ಅದು ಹೇಗೆ? ತಿಳಿಸೋಣವಾಗಲಿ.

ಪರಂ—ಕಮಲಾಕಾಂತನು ಬದುಕಿದಷ್ಟೂ ಈಕೆಗೆ ಲಾಭವು.

ಅನಂತ—ಹಾಗಾದರೆ ಈಕೆಯು ಹೀಗೆ ಹೇಳುವುದಕ್ಕೆ ಕಾರಣವೇನು?

ಪರಂ—ತಾವು ಈಕೆಯನ್ನು ಪೋಲೀಸುಠಾಣೆಗೆ ಕರೆದುಕೊಂಡು ಹೋಗುವುದಿಲ್ಲವೆಂದು ನನಗೆ ನಂಬುಗೆ ಕೊಡುವುದಾದರೆ, ನಾನು ಕಾರಣವನ್ನು ತಿಳಿಸುವೆನು.

ಅನಂತ—ನಾನು ನಂಬುಗೆಯನ್ನು ಕೊಡಲಾರೆನು. ಈಕೆಯು ನಿಜವಾಗಿಯೂ ನಿರಪರಾಧಿನಿಯಾಗಿರುವುದಾದರೆ, ಈಕೆಗೆ ಆವ ಅನಿಷ್ಟವೂ ಉಂಟಾಗಲಾರದೆಂದು ಮಟ್ಟಿಗೆ ನಾನು ಹೇಳಬಲ್ಲೆನು.

ಪರಂ—ಒಪ್ಪತಕ್ಕ ಮಾತು. ಮದಯಂತಿಯು ಕಮಲಾಕಾಂತನನ್ನು ವಿವಾಹವಾಗಲು ಇಷ್ಟಪಟ್ಟಿದ್ದರೂ, ನಂದಕುಮಾರನನ್ನು ಅಂತರ್ಯದಲ್ಲಿ ಪ್ರೀತಿಸುತ್ತಿರುವಳು. ಈಗ ನೀವು ನಂದಕುಮಾರನನ್ನು ಕರೆದುಕೊಂಡು ಹೋಗಿರುವುದರಿಂದ, ಆತನಿಗೆ ಅನ್ಯಾಯವಾಗಿ ದಂಡನೆಯಾದೀತೆಂಬ ಭಯದಿಂದ, ತನ್ನ ಪ್ರಣಯಿಯನ್ನು ಹೇಗಾದರೂ ರಕ್ಷಿಸಬೇಕೆಂದು ಆ ತಪ್ಪನ್ನು ತನ್ನ ಮೇಲೆ ಒರಗಿಸಿಕೊಂಡಿರುವಳು. ಈಗ ತಾವು ಏನ ಮಾಡಬೇಕೆಂದಿರುವಿರಿ, ಮಹಾಶಯ?

ಅನಂತ—ಮದಯಂತಿಯನ್ನು ಠಾಣೆಗೆ ಕರೆದುಕೊಂಡು ಹೋಗುವುದು ಯುಕ್ತಿಯುಕ್ತವಾಗಿರುವುದು.

ಪರಂ—ಅನಂತರತ್ನ ಮಹಾಶಯ! ಹಾಗಾದರೆ, ನೀವು ಮುಂದೆ ಪಶ್ಚಾತ್ತಾಪ ಪಡಬೇಕಾದೀತು.

ಅನಂತ—ಆಗ ನೋಡಿ ಕೊಳ್ಳುವ.

ಹೀಗೆ ಹೇಳಿ ಅನಂತರತ್ನನು ಹೊರಡುವುದಕ್ಕೆ ಸಿದ್ಧನಾಗಿ, ಉಯಿಲಿನ ತತ್ತ್ವಾನ್ವೇಷಣದಲ್ಲಿ ಪರಂತಪನನ್ನು ನಿಯೋಗಿಸಿದ ಬಳಿಕ, ಬಂಡಿಯೊಂದನ್ನು ಬರಮಾಡಿಕೊಂಡು ಅದರಲ್ಲಿ ಮದಯಂತಿಯನ್ನು ಕುಳ್ಳಿರಿಸಿ ಬಂಡಿಯನ್ನು ಠಾಣೆಗೆ ಹೊಡೆಯಿಸಿಕೊಂಡು ಹೊರಟು ಹೋದನು.

---

## ಹದಿನಾರನೆಯ ಸಂಧಿ

### ದಿವೋದಾಸನ ಹೇಳಿಕೆ

ಅನಂತರತ್ನನು ಹೊರಟುಹೋದ ಅರ್ಧಘಂಟೆಯಾದ ಬಳಿಕ ಸೇವಕನೊಬ್ಬನು ಪರಂತಪನ ಬಳಿಗೆ ಬಂದು—ಸ್ವಾಮಿ! ಅನಂತರತ್ನಮಹಾಶಯರು ಎಲ್ಲಿರುವರು? ಎಂದು ಕೇಳಿದನು.

ಪರಂ—ಅವರು ಠಾಣೆಗೆ ಹೊರಟುಹೋದರು. ನಿನ್ನ ಹೆಸರೇನು?

ಸೇವಕ—ನನ್ನ ಹೆಸರು ಭೀರು ಸಿಂಹ.

ಪರಂ—ನೀನು ಇಲ್ಲಿ ಎಷ್ಟು ದಿನಗಳಿಂದಿರುವೆ?

ಸೇವಕ—ಎರಡು ವರ್ಷಗಳಿಂದಲೂ ಇರುವೆನು.

ಪರಂ—ಉಯಿಲಿನ ವಿಷಯವಾಗಿ ನಿನಗೇನಾದರೂ ಗೊತ್ತೇ?

ಸೇವಕ—ಗೊತ್ತು; ಕಮಲಾಕಾಂತನ ಉಯಿಲು ಮೋಸವಾಗಿರುವುದು.

ಪರಂ—ಪ್ರಮಾಣಮಾಡ ಬಲ್ಲೆಯಾ?

ಸೇವಕ—ಮಾಡಬಲ್ಲೆನು; ನಾನು ಅದಕ್ಕಾಗಿಯೇ ಹೋಗಿದ್ದೆನು.

ಪರಂ—ಎಲ್ಲಿಗೆ?

ಸೇವಕ—ಮೋಸದ ಉಯಿಲನ್ನು ಬರೆದುಕೊಟ್ಟವನಲ್ಲಿಗೆ.

ಪರಂ—ಆತನಿರುವುದೆಲ್ಲಿ?

ಸೇವಕ—ಹತ್ತಿರದಲ್ಲಿಯೇ ಇರುವನು. ಅಪ್ಪಣೆಯಾದರೆ, ನಾನು ಆತನನ್ನು ಇಲ್ಲಿಗೆ ಕರೆತರುವೆನು.

ಪರಂತಪನು ಅಪ್ಪಣೆಯನ್ನಿತ್ತನು. ಭೀರು ಸಿಂಹನು ಬೇಗನೆ ಹೋಗಿ ಒಬ್ಬ ಮುದುಕನನ್ನು ಕರೆತಂದು—ಸ್ವಾಮಿ! ಈತನೇ ಆತನು, ಎಂದನು.

ಪರಂತಪನು ಆ ಮುದುಕನನ್ನು ಬಲ್ಲವನಾಗಿದ್ದನು. ಆತನು ಪತ್ರಗಳನ್ನು ಸೃಷ್ಟಿಮಾಡುವುದರಲ್ಲಿ ಸಿದ್ಧಹಸ್ತನೆನಿಸಿಕೊಂಡಿದ್ದನು. ಇದರ ಪ್ರಭಾವದಿಂದ ಆ ವೃದ್ಧನು ಸರಕಾರದ ದೊಡ್ಡ ಮನೆಯನ್ನು ಅನೇಕ ವೇಳೆ ಪ್ರವೇಶಮಾಡಿ ಬಂದಿದ್ದನು. ಪರಂತಪನು ಇಂತಹ ಮಹನೀಯನನ್ನು ನೋಡಿ—ದಿವೋದಾಸ!

ಇಷ್ಟು ವಯಸ್ಸಾದರೂ ನಿನ್ನ ಚರ್ಯೆಯನ್ನು ನೀನು ಮಾರ್ಪಡಿಸಿಕೊಳ್ಳಲಾರದೇ ಹೋದೆಯಾ ? ಎಂದು ತಿರಸ್ಕಾರ ಸೂಚಕವಾಗಿ ಮಾತನಾಡಿದನು.

ದಿವೋದಾಸನು ಅರ್ಥವಿಲ್ಲದ ನಗೆಯನ್ನು ನಕ್ಕು—ಪ್ರಭೂ! ಮನೆತುಂಬಾ ಚಿಳ್ಳೆಪಿಳ್ಳೆಗಳು. 'ದಾರಿದ್ರ್ಯಕ್ಕೆ ಕೂರೆ ಹೆಚ್ಚು' ಎನ್ನುವ ಗಾದೆಯು ನನ್ನಲ್ಲಿಯೇ ಅನ್ವಯಿಸುವುದು. ಒಳ್ಳೆಯ ಮಾರ್ಗದಿಂದ ಜೀವನವು ನಡೆಯುವುದೇ ಕಷ್ಟವಾದುದರಿಂದ, ನಾನು ಹೇಗಾದರೂ ಬದುಕಲೇ ಬೇಕಾಗಿರುವುದು. ಬಾಲ್ಯದಲ್ಲಿ ಅಭ್ಯಾಸಮಾಡಿದ ವಿದ್ಯೆಯೇ ಕೊನೆಯ ವರೆಗೂ ನಿಲ್ಲಬೇಕಾದುದು. ಕಾಲವಾದರೋ ಸೂಕ್ಷ್ಮವಾಗಿ ಹೋಗಿರುವುದು ; ಅದಕ್ಕೆ ಸರಿಯಾಗಿ ನನಗೆ ವಯಸ್ಸೂ ಆಗಿರುವುದು ; ಯುದ್ಧಕಾಲದಲ್ಲಿ ಶಸ್ತ್ರಾಭ್ಯಾಸವೆನ್ನುವಂತೆ ನಾನು ಬೇರೆಯ ವಿದ್ಯೆಯನ್ನು ಕಲಿಯುವುದಾದರೆ ಅದು ಫಲಿಸುವು ದೆಂದಿಗೆ? ಸರಕಾರವು ನನಗೆ ತೆರತೆರನಾಗಿ ಬುದ್ಧಿಗಲಿಸಿದ್ದುದರಿಂದ,—ಸರಕಾರಕ್ಕೆ ವಿಜಯವಾಗಲಿ! ನಾನು ದುರ್ಮಾರ್ಗವನ್ನು ಬಿಟ್ಟು ಬಿಟ್ಟಿದ್ದೆನು. ಆದರೆ ಮಾರಕುಮಾರ ಮಹಾಶಯನು ನನಗೆ ಬೇಕಾದ ಹಾಗೆ ಹಣದ ಆಸೆಯನ್ನು ತೋರಿದನು. ಹಣವೆಂದರೆ ಹೆಣವೂ ಬಾಯಬಿಡುವುದಲ್ಲವೇ? ಮಕ್ಕಳು ಹೊಟ್ಟೆಗಿಲ್ಲದೆ ಅಳುವುದನ್ನು ಕೇಳಿದ ಕೂಡಲೆ, ನನಗೆ ಹಣದ ಆಸೆಯು ಇಮ್ಮಡಿಸಿತು. ಮಾಡುವುದೇನು? ನಾನು ಮನವನ್ನು ಸೋಲು ಬಿಟ್ಟೆನು. ಇದೇ ಕೊನೆಯ ಪ್ರಯತ್ನವು. ಈಶ್ವರ ಸಾಕ್ಷಿಯಾಗಿಯೂ ಇನ್ನು ಮೇಲೆ ನಾನು ಈ ಕೆಲಸಕ್ಕೆ ಕೈಹಾಕುವುದಿಲ್ಲ. ನಾನು ಈ ಮಾತಿಗೆ ತಪ್ಪಿನಡೆಯುವುದಾದರೆ, ನನ್ನ ಕೈಗಳನ್ನೇ ಕತ್ತರಿಸಿಹಾಕಬಹುದು, ಎಂದು ವಿನಯದಿಂದ ಮಾತನಾಡಿದನು.

ಪರಂ—ಹಾಗಾದರೆ, ನೀನೇ ಬಂದು ಈ ಸಂಗತಿಯನ್ನು ತಿಳಿಸುವುದಕ್ಕೆ ಕಾರಣವೇನು ?

ದಿವೋ—ಇದಕ್ಕೆ ಮೂರು ಕಾರಣಗಳುಂಟು ; ಪಶ್ಚಾತ್ತಾಪವೇ ಪ್ರಾಯಶ್ಚಿತ್ತವೆಂಬುದು ಮೊದಲನೆಯದು ; ತಪ್ಪು ಮಾಡಿದವರಿಗೆ ಶಿಕ್ಷೆಯಾಗುವುದೆಂಬ ಭಯವು ಎರಡನೆಯದು ; ನಾನು ಈ ಕೆಲಸ ಮಾಡಿ ಹೀಗೂ ಕೆಟ್ಟೆನು, ಹಾಗೂ ಕೆಟ್ಟೆನು— ಇದು ಮೂರನೆಯ ಕಾರಣವು.

ಪರಂ—ನೀನು ಕೆಟ್ಟುದು ಹೇಗೆ ?

ದಿವೋ—ನನಗೆ ಬರಬೇಕಾದ ಹಣವು ಬಾರದಿರುವುದರಿಂದ, ನಾನು ಹೊಟ್ಟೆಗಿಲ್ಲದೆಯೇ ಸಾಯಬೇಕಾಗಿರುವುದು.

ಪರಂ—ಇದರಲ್ಲಿ ಭೀರು ಸಿಂಹನು ಹೇಗೆ ಸಂಬಂಧಪಟ್ಟಿರುವನು ? ಅವನೂ ಈ ಕೆಲಸ ಮಾಡುವನೇ ?

ದಿವೋ—ಇಲ್ಲ; ಅವನು ಮಧ್ಯಸ್ಥನು. ಅವನಿಗೆ ಇದರಲ್ಲಿಯೂ ಭಾಗ ವುಂಟು.

ಪರಂ—ಈ ವ್ಯಾಪಾರದಲ್ಲಿ ಅವನಿಗೂ ಪ್ರಯೋಜನವಾಗಿರಲಿಕ್ಕಿಲ್ಲ.

ದಿವೋ—ಇಲ್ಲ; ಒಂದೂ ಕಾಸೂ ಸಿಕ್ಕಿಲ್ಲ. ಮಾರಕುಮಾರನು ಎಲ್ಲರಿಗೂ ಚೊಳ್ಳೆಯ ಹಣ್ಣನ್ನು ತಿನ್ನಿಸತಕ್ಕ ಮೋಸಗಾರನು. ಆತನು ಕೆಲಸವಾಗುವ ವರೆಗೂ ಅತಿ ವಿನಯದಿಂದ ವರ್ತಿಸುತ್ತಿದ್ದು, ಬಳಿಕ ಎಲ್ಲರಿಗೂ ನಾಮವನ್ನು ತಿದ್ದಿದನು. ನಾನು ತೆರತೆರನಾಗಿ ನನ್ನ ಬಡತನವನ್ನು ಅವನ ಮುಂದಿಟ್ಟೆನು. ಅವನು ನನ್ನಲ್ಲಿ ಕೊಂಚವಾದರೂ ಕನಿಕರ ಗೊಳ್ಳದೆಯೇ, ನನ್ನನ್ನು ಎಡಗಾಲಿನಿಂದ ಒದೆದು ತಳ್ಳಿಬಿಟ್ಟನು. ಪ್ರಭೂ! ನಾನು ಎಲ್ಲವನ್ನೂ ತಮ್ಮಲ್ಲಿ ತಿಳಿಸಿಕೊಂಡೆನು. ನಾನು ಮಾಡಿದ ತಪ್ಪಿಗೆ ನನಗೆ ಸರಿಯಾದ ಶಿಕ್ಷೆಯೂ ಆಯಿತು. ತಾವು ನನಗೆ ಅಭಯವನ್ನು ಕೊಡೋಣವಾದರೆ, ನಾನು ಕಾಶೀಧಾಮದಲ್ಲಿ ವಿಶ್ವೇಶ್ವರ ಮೂರ್ತಿಯನ್ನು ಆರಾಧಿಸುತ್ತಾ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳುವೆನು.

ಪರಂ—ದಿವೋದಾಸ! ನಿನಗೆ ಸಂಪೂರ್ಣವಾದ ಮುಕ್ತಿಲಾಭವು ದೊರೆಯಲಾರದು. ನಿನಗೆ ಹೆಚ್ಚಿನ ಶಿಕ್ಷೆಯಾಗದಂತೆ ನಾನು ನೋಡಿಕೊಳ್ಳುವೆನು. ಆದರೆ ಈ ಸೇವಕನಿಗೆ ಶಿಕ್ಷೆಯು ತಪ್ಪಲಾರದು.

ಪರಂತಪನು ಹೀಗೆ ಹೇಳಿ ಅವರಿಬ್ಬರನ್ನೂ ಕಳುಹಿಸಿ ತಾನೂ ಬೇರೊಂದೆಡೆಗೆ ತೆರಳಿದನು.

---

## ಹದಿನೇಳನೆಯ ಸಂಧಿ

### ಅಪರಾಧಿ

ಅನಂತರತ್ನನು ಠಾಣೆಗೆ ಮದಯಂತಿಯನ್ನು ಕರೆದುಕೊಂಡು ಹೋದ ಬಳಿಕ, ನಂದಕುಮಾರನನ್ನು ಬಿಟ್ಟುಬಿಟ್ಟನು. ಮದಯಂತಿಯು ಈ ಅಪರಾಧವನ್ನು ತಾನೇ ಮಾಡಿದವಳೆಂದು ಒಪ್ಪಿಕೊಂಡುದೇ ಇದಕ್ಕೆ ಕಾರಣವು.

ನಂದಕುಮಾರನು ಮುಕ್ತಿಲಾಭವನ್ನು ಪಡೆದುಕೊಂಡು ಪರಂತಪನ ಬಳಿಗೆ ಬಂದು ಉಯಿಲ ವಿಚಾರವಾಗಿ ಮಾತನಾಡಿದನು. ಪರಂತಪನು ಹೇಳಿದುದೇನೆಂದರೆ:—

"ನಂದ ಕುಮಾರ! ನಿನ್ನ ಮಾತಾಮಹನ ಉಯಿಲು ಮಾರ್ಪಟ್ಟು ಅದರ ಸ್ಥಾನದಲ್ಲಿ ಹೊಸದ ಉಯಿಲು ತಲೆದೋರಿರುವುದು. ಪತ್ರವನ್ನು ಸೃಷ್ಟಿಮಾಡಿದವನೇ ಈ ವಿಷಯುವನ್ನು ನನಗೆ ತಿಳಿಯ ಹೇಳಿದನು. ನನ್ನಲ್ಲಿಗೆ ಬರುವಂತೆ ಮಾರಕುಮಾರನಿಗೆ ಹೇಳಿಕಳುಹಿರುವೆನು. ಪ್ರಾಯಿಕವಾಗಿ ಆತನು ಈ ರಾತ್ರಿಯಲ್ಲಿ ನಮ್ಮ ಮನೆಗೆ ಬರಬಹುದು. ನೀನೂ ಅಲ್ಲಿಯೇ ಇದ್ದುಕೊಂಡಿರು."

ನಂದಕುಮಾರನು ಪರಂತಪನ ಮನೆಯಲ್ಲಿಯೇ ಇದ್ದುಕೊಂಡು ಭೋಜನಾದಿಗಳನ್ನು ನೆರವೇರಿಸಿದ ಬಳಿಕ ರಾತ್ರಿಯಾಗುವುದನ್ನೇ ಇದಿರುನೋಡುತ್ತಿದ್ದನು. ಆ ಸಮಯದಲ್ಲಿ ನಂದನು ಪರಂತಪನನ್ನು ಕುರಿತು—ಮಹಾಶಯ! ಒಂದು ವಿಷಯವನ್ನು ಕೇಳುವುದಕ್ಕೆ ಮರೆತಿದ್ದೆನು. ನನಗೆ ಇಷ್ಟು ಬೇಗನೆ ಬಿಡುಗಡೆಯಾಗುವುದಕ್ಕೆ ಕಾರಣವೇನು? ಎಂದನು.

ಪರಂ—ಅನಂತರತ್ನನು ಭ್ರಮೆಯಲ್ಲಿ ಬಿದ್ದಿರುವನು. ನಿಮ್ಮ ಮನೆಯಲ್ಲಿ ಮದಯಂತಿಯೆಂಬುವಳು ಇರುವುದು ನಿನಗೆ ಗೊತ್ತುಂಟಷ್ಟೇ?

ನಂದ—ಚೆನ್ನಾಗಿಯೂ ಗೊತ್ತು.

ಪರಂ—ಕಮಲಾಕಾಂತನನ್ನು ಕೊಲೆ ಮಾಡಿದವಳು ತಾನೇ ಎಂದು ಅವಳೇ ಒಪ್ಪಿರುವಳು.

ನಂದ—ಇದು ನಿಜವೇ? ಆಕೆಯು ಕೊಲೆಯನ್ನು ಮಾಡಲೇತಕೆ? ಅದರಿಂದ ಅವಳಿಗೆ ಲಾಭ ತಾನೇ ಏನು?

ಪರಂ—ನಿನ್ನನ್ನು ಬಂಧನದಿಂದ ಬಿಡಿಸುವುದಕ್ಕಿಂತಲೂ ಅಧಿಕವಾಗಿ ಅವಳಿಗೇನೂ ಪ್ರಯೋಜನವಿಲ್ಲ.

ನಂದ—ನನ್ನನ್ನು ಬಿಡಿಸುವುದಕ್ಕಾಗಿಯೇ! ಆಶ್ಚರ್ಯದ ಸುದ್ದಿಯೇ ಸರಿ. ಆ ಮದಯಂತಿಯು ಮೊದಲಿನಲ್ಲಿ ನನ್ನನ್ನು ಮನೆಯಿಂದ ಓಡಿಸಿ ಬಿಟ್ಟಿದ್ದಳು; ಈಗ ಆಕೆಯು ನನ್ನಮೇಲೆ ಇಷ್ಟು ದಯೆಯನ್ನು ತೋರಿರುವುದಕ್ಕೆ ಕಾರಣವೇನೋ ಗೊತ್ತಾಗಲೊಲ್ಲದು.

ಪರಂ—ನಿನಗೆ ಗೊತ್ತಿಲ್ಲದೆಯೇ ಇರಬಹುದು; ಆದರೆ ಅದು ನನಗೆ ಚೆನ್ನಾಗಿಯೂ ಗೊತ್ತು. ಆಕೆಯು ನಿನ್ನನ್ನು ಮನವಾರೆ ಪ್ರೀತಿಸುತ್ತಿರುವಳು.

ನಂದ—ಇದ್ದರೂ ಇರಬಹುದು; ಆಕೆಯೇ ಈ ಯಭಿಪ್ರಾಯವನ್ನು ನನಗೊಂದು ಸಲ ಬಾಯಿ ಬಿಟ್ಟು ತಿಳಿಸಿದ್ದಳು.

ಪರಂ—ಆಗ ನೀನು ಅದಕ್ಕೆ ಸಮ್ಮತಿಸಲಿಲ್ಲವೆಂದು ತೋರುವುದು.

ನಂದ—ಸಮ್ಮತಿಸಲಿಲ್ಲ.

ಪರಂ—ಅದಕ್ಕಾಗಿಯೇ ನಿನಗೆ ಉಚ್ಚಾಟನೆ.

ನಂದ—ಈಗಳೂ ನನಗೆ ಸಮ್ಮತಿಯಿಲ್ಲ.

ಪರಂ—ನೀನು ಸಮ್ಮತಿಸದೇ ಹೋದರೂ, ಆಕೆಯು ನಿನ್ನನ್ನು ಪ್ರೀತಿಸುತ್ತಿರುವುದನ್ನು ಜನರು ಅರಿತುಕೊಂಡು ಆಕೆಯನ್ನು ದೇವತಾಮೂರ್ತಿಯೆಂದು ಹೊಗಳಬೇಕೆಂಬುದೇ ಆಕೆಯ ಮನೋಗತವು.

ನಂದ—ಆಕೆಯು ತಪ್ಪು ಮಾಡದೆಯೇ ದಂಡನೆಯನ್ನು ಅನುಭವಿಸುವಳೇ ?

ಪರಂ—ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂದಿರುವಾಗ, ಆಕೆಯು ಒಪ್ಪಿದ ಮಾತ್ರಕ್ಕೆ ಆಗುವುದೇನು ? ದೋಷವು ಸಪ್ರಮಾಣವಾಗಿ ಆಕೆಯ ಮೇಲೆ ಓಲಬೇಕು. ಆಗಳೇ ಅವಳಿಗೆ ಶಿಕ್ಷೆಯುಂಟು. ವ್ಯರ್ಥವಾಗಿ ಆರೂ ಆರನ್ನೂ ಶಿಕ್ಷಿಸುವುದಿಲ್ಲ.

ನಂದ—ಅನಂತರತ್ನನಿಗೆ ಇಷ್ಟು ಗೊತ್ತಾಗಲಿಲ್ಲವೇ ?

ಪರಂ—ನಾನು ಆತನಿಗೆ ಎಷ್ಟೋ ತಿಳಿಯ ಹೇಳಿದೆನು, ಆದರೂ ಆತನು ನನ್ನನ್ನು ಪರಿಹಾಸಕ್ಕೀಡು ಮಾಡಿ ಮದಯಂತಿಯನ್ನು ಠಾಣೆಗೆ ಕರೆದುಕೊಂಡು ಹೊರಟೇ ಹೊರಟನು. ಈ ಕೊಲೆಯ ವಿಚಾರದಲ್ಲಿ ಮೂವರು ದಸ್ತಗಿರಿಯಾದರು. ನೀನು ಮೊದಲನೆಯವನು, ರಾಮರಮಾರಮಣನೆಂಬ ಹೆಸರಿನ ಭೂತನಾಥನು ಎರಡನೆಯವನು, ಮದಯಂತಿಯು ಮೂರನೆಯವಳು. ಇದರಲ್ಲಿ ತತ್ತ್ವವೇನೆಂದರೆ—ಈ ಮೂವರೂ ಕೊಲೆ ಮಾಡಿದವರಲ್ಲ. ನೀನು ಕೊಂಚ ಕಾಲ ಹಲ್ಲನ್ನು ಕಚ್ಚಿಕೊಂಡಿರು. ಈ ಸ್ಥಲದಲ್ಲಿಯೇ ಹತ್ಯಾಕಾರಿಯಾರೆಂಬುದನ್ನು ನೀನೇ ನಿನ್ನ ಕಣ್ಣಾರೆ ನೋಡುವೆ.

ನಂದ—ಹತ್ಯಾಕಾರಿಯು ತಾನಾಗಿಯೇ ನಿಮ್ಮಲ್ಲಿಗೆ ಬಂದು ನಿಲ್ಲುವುದೆಂದರೇನು ? ಇದನ್ನು ನೀವೂ ನಂಬತಕ್ಕವರಾಗಿರುವಿರಾ ?

ಪರಂ—ಇದೆಲ್ಲವೂ ನನ್ನ ಕಲಾಕೌಶಲವು. ಇದಕ್ಕೆ ಮೊದಲು ನಾನು ಅನೇಕ ವೇಳೆಗಳಲ್ಲಿ ನಿಮ್ಮ ಮನೆಗೆ ಹೋಗಿ ಬರುತ್ತಿದ್ದೆನು. ನನ್ನ ಅನುಸಂ

ಧಾನದ ಕ್ರಮದಲ್ಲಿ ಈ ಅಪರಾಧವು ಒಂದು ವ್ಯಕ್ತಿಯ ಮೇಲೆ ಒರಗಿರುವುದು. ಇದು ಸನ್ನಿವೇಶದ ಬಲದಿಂದಲೂ, ಸ್ಥಿತಿಗತಿಗಳಿಂದಲೂ, ಕಾರ್ಯಕಾರಣಗಳಿಂದಲೂ ಸಿದ್ಧಾಂತಕ್ಕೆ ಬರುತ್ತಿರುವುದು. ನಾನು ಆ ವ್ಯಕ್ತಿಯೊಡನೆ ಒಳ್ಳೆಯ ಮಾತುಗಳನ್ನಾಡಿಕೊಂಡಿರುವುದರಿಂದ, ಹತ್ಯಾದೋಷವು ಆರಿಗೂ ಗೊತ್ತಿಲ್ಲವೆಂದು ಆತನು ತಿಳಿದುಕೊಂಡಿರುವನು. ಇಂತಹವನನ್ನು ನಾನು ಮನೆಗೆ ಬರುವ ಹಾಗೆ ಹೇಳಿಕೊಂಡಿರುವೆನು.

ನಂದ—'ಕಳ್ಳನ ಮನಸ್ಸು ಹುಳ್ಳಗೆ' ಎನ್ನುವಂತೆ ಆತನು ಸಂಶಯಪಟ್ಟುಕೊಂಡು ಎಲ್ಲಿಗಾದರೂ ಓಡಿ ಹೋಗುವುದಾದರೆ ನೀವು ಮಾಡುವುದೇನು?

ಪರಂ—ಆತನು ಎಲ್ಲಿಗೂ ಓಡಿಹೋಗಲಾರನು. ಒಂದು ವೇಳೆ ನೀನು ಹೇಳಿದಂತೆ ಆತನು ಓಡಿಹೋಗುವುದಾದರೆ, ಸುತ್ತಲೂ ಗೂಢಚಾರರು ಹಗಲಿರುಳೂ ಕಾದುಕೊಂಡಿರುವುದರಿಂದ, ಆತನು ಅವರ ಕೈಗೆ ಸಿಕ್ಕಿಬೀಳುವನು. ಬಳಿಕ ಅವನ ವಿಪತ್ತು ಅಪರಿಹಾರ್ಯವಾದೀತು.

ನಂದ—ಮೊದಲೇ ಅವನು ಕೊಲೆಗಾರನು—ಎಂದ ಮೇಲೆ, ಅವನಿಗೆ ಗಲ್ಲಿಗೇರಿಸುವ ದಂಡನೆಯು ಸಿದ್ಧವಾಗಿಯೇ ಇರುವುದು. ಹೀಗಿರುವಲ್ಲಿ ನೀವು ಹೇಳುವ ಮತ್ತಾವ ವಿಪತ್ತು ಅವನನ್ನು ಏನು ಮಾಡೀತು?

ಪರಂ—ನಾನು ಅವನನ್ನು ಉದ್ಧಾರಮಾಡಬೇಕೆಂದೆಣಿಸಿರುವೆನು. ಅದಕ್ಕಾಗಿಯೇ ನಾನು ಅವನನ್ನು ಇಲ್ಲಿಗೆ ಬರಹೇಳಿರುವುದು. ನನ್ನ ಮಾತಿನಿಂದಲೇ ಪೋಲೀಸಿನವರು ಅವನಿಗೆ ಇನ್ನೂ ತೊಂದರೆ ಕೊಡುವುದಕ್ಕೆ ತೊಡಗಿಲ್ಲ. ಪೋಲೀಸಿನವರ ಕೈಗೆ ಸಿಕ್ಕುವುದೂ ಒಂದೇ, ಪ್ರತ್ಯಕ್ಷದಲ್ಲಿ ನರಕಯಾತನೆಯನ್ನು ಅನುಭವಿಸುವುದೂ ಒಂದೇ.

ನಂದ—ಹಾಗಾದರೆ ಪೋಲೀಸಿನವರ ಅತ್ಯಾಚಾರಗಳನ್ನು ತಿಳಿತಿಳಿದೂ, ಮದಯಂತಿಯು ಅವರ ಕೈಯಲ್ಲಿ ಅದೇಕೆ ಸಿಲುಕಿಕೊಂಡಳು?

ಪರಂ—ಅದರ ಕಾರಣವನ್ನು ನಾನು ಮೊದಲೇ ಹೇಳಿರುವೆನು. ಪ್ರಣಯವೆಂಬುದು ಆವ ಯಾತನೆಯನ್ನೂ ಲೆಕ್ಕಿಸದು. ಇದು ಸ್ವಾರ್ಥವು; ನಿನ್ನ ಉದ್ಧಾರಕ್ಕಾಗಿ ಆಕೆಯು ಆತ್ಮಸಮರ್ಪಣೆ ಮಾಡಿರುವಳು, ಇದು ಪರಾರ್ಥವು. ಆಕೆಯು ಒಂದು ಕಾರ್ಯವನ್ನೆಸಗಿ ಸ್ವಾರ್ಥಪರಾರ್ಥಗಳೆಂಬ ಇಬ್ಬಗೆಯ ಫಲವನ್ನು ಪಡೆಯಬೇಕೆಂದು ಬಯಸಿರುವಳು.

ನಂದ—ಆಕೆಗೆ ಪೋಲೀಸಿನವರ ಕಿರುಕುಳದಿಂದ ನಿಷ್ಕೃತಿಯಾಗುವ ಬಗೆ ಹೇಗೆ?

ಪರಂ—ತಾನೇ ಅಪರಾಧಿನಿಯೆಂದು ಅವಳೇ ಒಪ್ಪಿಕೊಂಡಿರುವಲ್ಲಿ, ಪೋಲೀಸಿನವರು ಅವಳಿಗೆ ಮತ್ತೇಕೆ ತೊಂದರೆಯನ್ನು ಕೊಟ್ಟಾರು? ತಪ್ಪುಮಾಡಿ ಅಪಲಪಿಸುವವರ ವಿಷಯದಲ್ಲಿ ಪೋಲೀಸಿನವರು ತಮ್ಮ ಕೈವಾಡವನ್ನು ತೋರುವರು. ಅವರೂ ಭೂತದಯಾ ಪಶ್ಚಾತ್ತಾಪದಿಂದ ಕೂಡಿರುವವರೇ ಆಗಿರುವುದರಿಂದ ವ್ಯರ್ಥವಾಗಿ ಆರನ್ನೂ ಹಿಂಸಿಸರು.

ನಂದ—ಪ್ರಕೃತ ಹತ್ಯಾಕಾರಿಯು ಪೋಲೀಸಿನವರ ಕೈಗೆ ಸಿಕ್ಕದೇ ಹೋಗುವುದಾದರೆ, ಮದಯಂತಿಯ ಪರಿಣಾಮವಾದರೂ ಏನು? ಮದಯಂತಿಗೆ ಪ್ರಕೃತದ ಹತ್ಯಾಕಾರಿಯಾರೆಂಬುದು ಗೊತ್ತಿಲ್ಲವೆಂದು ತೋರುತ್ತಿರುವುದು.

ಪರಂ—ಮದಯಂತಿಯು ನಮ್ಮ ಬಾಯಿಂದ ಎಲ್ಲಾ ವಿಷಯಗಳನ್ನೂ ಕೇಳಿ ತಿಳಿದು ಕೊಂಡಿರುವಳು. ನಾವು ನಿಮ್ಮ ಮನೆಯನ್ನು ಹುಡುಕುವುದಕ್ಕೆ ತೊಡಗಿದಾಗಳೇ, ಅವಳಿಗೆ ಅನೇಕ ಸಂಗತಿಗಳು ತಿಳಿವಿಗೆ ಬಂದುವು. ಆಕೆಗೆ ಹತ್ಯಾಕಾರಿಯಾರೆಂಬುದು ಮೊದಲಿನಿಂದಲೂ ಚೆನ್ನಾಗಿಯೂ ಗೊತ್ತು. ನಾವು ತತ್ತ್ವವನ್ನು ಅರಿವುದಕ್ಕಾಗಿ, ಆಕೆಯ ಮೇಲೆ ತಪ್ಪನ್ನು ಹೊರಿಸಿ ನೋಡಿದೆವು. ಆಗ ಆಕೆಯು ಅನೇಕ ಸಂಗತಿಗಳನ್ನು ಮುಚ್ಚುಮರೆಯಿಲ್ಲದೆಯೇ ನಮಗೆ ತಿಳಿಸಿಬಿಟ್ಟಳು. ಆಕೆಯು ಪೋಲೀಸಿನವರ ನಿರ್ಬಂಧದಲ್ಲಿ ಬಹುಕಾಲವಿರುವುದಿಲ್ಲವೆಂದೂ ಅರಿತುಕೊಂಡಿರುವಳು. ಇದಕ್ಕಾಗಿ ಅವಳು ವ್ಯಸನ ಪಟ್ಟವಳಲ್ಲ. ಅವಳು ನಿನ್ನ ಪ್ರೇಮಭಿಕ್ಷೆಗಾಗಿ ಕಾದಿರುವಳು.

ಪರಂತಪನು ಹೀಗೆ ಹೇಳುತ್ತಾ ಕುಳಿತಿರುವಲ್ಲಿ, ಸೇವಕನೊಬ್ಬನು ಬಂದು, 'ಆರೋ ಬಂದಿರುವರು' ಎಂದು ಹೇಳಿ ಹೊರಟು ಹೋದನು. ಪರಂತಪನು ನಂದ ಕುಮಾರನನ್ನು ಕುರಿತು—ನಂದ ಮಹಾಶಯ! ನೀನು ಈ ಸಣ್ಣ ಕೋಣೆಯಲ್ಲಿ ಅವಿತುಕೊಂಡಿರು. ನೀನು ಇಲ್ಲಿಯೇ ಇರುವುದಾದರೆ, ಕೆಲಸವು ಕೆಟ್ಟರೂ ಕೆಡಬಹುದು. ನೀನು ಕೋಣೆಯೊಳಗಿದ್ದುಕೊಂಡೇ ಇಲ್ಲಿ ನಡೆಯುವ ಸಂಭಾಷಣೆಯನ್ನು ಆಲಿಸಿ ಕೇಳುತ್ತಿರು, ಎಂದು ಹೇಳಿ, ಆ ವ್ಯಕ್ತಿಯನ್ನು ಕರೆತರಲು ಹೊರಟನು.

## ಹದಿನೆಂಟನೆಯ ಸಂಧಿ

### ವಿಷದ ಭರಣಿ

ಪರಂತಪನು ಮಾರಕುಮಾರನನ್ನು ಕರೆದುಕೊಂಡು ಬಂದು ಒಂದು ಆಸನದ ಮೇಲೆ ಕುಳ್ಳಿರಿಸಿ—ಮಾರ ಮಹಾಶಯ ! ಎಲ್ಲವೂ ಮಂಗಳವಷ್ಟೇ ? ಎಂದನು.

ಮಾರಕುಮಾರನು ನಗುತ್ತಾ ಇಂತೆಂದನು :—

"ಪರಂತಪ ಮಹಾಶಯ ! ಇದು ಉಪಹಾಸಕ್ಕೆ ಸಮಯವಲ್ಲಾ. ನನಗೆ ಮಂಗಳವೇ ? ಎಲ್ಲಿಂದ ಬರಬೇಕು ? ತಾವು ಇಲ್ಲಿಗೆ ಬರಬೇಕೆಂದು ಹೇಳಿದುದರಿಂದ ಬಂದೆನು. ಇಲ್ಲದಿದ್ದರೆ, ನಾನು ಮನೆಯನ್ನೇ ಬಿಟ್ಟು ಹೊರಗೆ ಬರುತ್ತಿರಲಿಲ್ಲ. ನನ್ನ ಶರೀರದಲ್ಲಿ ಆಧಿವ್ಯಾಧಿಗಳೆರಡೂ ಸೇರಿಕೊಂಡು ಒಂದಕ್ಕೊಂದು ಹೋರಾಡುತ್ತಿರುವುವು."

ಪರಂತಪನು ಈ ಮಾತನ್ನು ಕೇಳಿ ಮರುಕಗೊಂಡವನಾಗಿ—ಮಾರ ಮಹಾಶಯ ! ತಾವು ಮೊದಲಿಗಿಂತಲೂ ಎಚ್ಚರಿಕೆಯಿಂದ ಇರೋಣವಾಗಿದೆ, ಎಂದನು.

ಮಾರ—(ಆಶ್ಚರಿಯಿಂದ) ತಾವು ಹೇಳುವುದೇನು ?

ಪರಂ—ತಮ್ಮ ಕಯ್ಯಲ್ಲಿರುವುದೇನು ?

ಮಾರ—ಇದೊಂದು ಭರಣಿ.

ಪರಂ—ಉಂಗುರವನ್ನು ಭರಣಿಯೆಂದು ನನಗೆ ಉಪದೇಶಮಾಡುವಿರೇನು ? ನಾನು ನಿಮ್ಮಲ್ಲಿಗೆ ಬಂದಿದ್ದಾಗ ಈ ಯುಂಗುರವಿರಲಿಲ್ಲ. ಈಗ ಹೊಸದಾಗಿ ಕೈಗೆ ಬಂದಂತಿದೆ.

ಮಾರ—ಅಧಿಕಾರ ಸಂಪತ್ತು ಬಂದ ಮೇಲೆ ನಾನು ಇದನ್ನು ಕೊಂಡುಕೊಂಡೆನು.

ಪರಂ—ಇದಕ್ಕಾಗಿಯೇ ನೀವು ಮೊದಲಿಗಿಂತಲೂ ಎಚ್ಚರಿಕೆಯಿಂದಿರುವಿರೆಂದು ನಾನು ಮೊದಲೇ ಹೇಳಿದುದು.

ಮಾರ—ಇದಕ್ಕೂ ಎಚ್ಚರಿಕೆಗೂ ಏನು ಸಂಬಂಧ ?

ಪರಂ—ನನ್ನನ್ನು ನೀವು ಮೂರ್ಖರೆಂದು ತಿಳಿದಿರುವಂತಿದೆ. ಇದು ಉಂಗುರದ ಆಕಾರದಲ್ಲಿನ ವಿಷದ ಭರಣಿ. ನಾನು ಇಂಥವುಗಳನ್ನು ಎಷ್ಟೋ ನೋಡಿರುವೆನು.

ಮಾರ—ತಮಗೆ ಅಸಾಧ್ಯವಾದ ಕಾರ್ಯವಾವುದು ? ತಮಗೆ ತಿಳಿಯದ ದ್ರವ್ಯವಾವುದು, ಮಹಾಶಯ ? ನನ್ನ ಅಪರಾಧವನ್ನು ಕ್ಷಮಿಸೋಣವಾಗಲಿ.

ಪರಂ—ಆಗ ಬಹುದು. ಎಲ್ಲಿ ! ಆ ಉಂಗುರದ ಸೊಬಗನ್ನಾದರೂ ನೋಡುವ.

ಮಾರ ಕುಮಾರನು ಆ ಉಂಗುರವನ್ನು ತೆಗೆದು ಪರಂತಪನ ಕೈಗೆ ಕೊಟ್ಟನು. ಬಳಿಕ—ಮಹಾಶಯ ! ನನ್ನ ಬಾಲ್ಯ ಮಿತ್ರನಾದ ರಾಮರಮಾರಮಣರಾಯನ ವಿಷಯವೇನು ? ಆತನ ವಿಷಯವನ್ನು ಮುಂದೆ ತಿಳಿಸುವುದಾಗಿ ತಾವು ಹೇಳೋಣ ವಾಗಿದ್ದಿತು, ಎಂದು ಕೇಳಿದನು.

ಪರಂ—ನಿಜ ; ನಿಮ್ಮ ಬಂಧುವು ಸಂಪೂರ್ಣವಾಗಿಯೂ ನಿರ್ದೋಷಿಯು. ಇದು ನಿಮಗೂ ಚೆನ್ನಾಗಿ ಗೊತ್ತುಂಟು. ಅಂದು ನಾನು ನಿಮ್ಮೊಡನೆ ಈತನ ವಿಷಯವಾಗಿ ಮಾತನಾಡುತ್ತಿರುವಾಗ, ನೀವು ಎಲ್ಲವನ್ನೂ ಅರಿತವರಾಗಿದ್ದರೂ ಮೌನದಿಂದದ್ದುಬಿಟ್ಟರಿ. ಹತ್ಯಾಕಾರಿಯು ಎಲ್ಲಿಗಾದರೂ ಪಲಾಯನ ಸೂಕ್ತಪಾರಾಯಣ ಮಾಡಿಬಿಡಲೆಂದು ನಾನು ಹನ್ನೆರಡು ಗಂಟೆಗಳ ಕಾಲಾವಧಿಯನ್ನು ಕೊಟ್ಟಿದ್ದುದು ನಿಮಗಿನ್ನೂ ಜ್ಞಾಪಕದಲ್ಲಿರಬಹುದು.

ಮಾರ—ತಾವು ಆ ದಿನ ಸ್ಪಷ್ಟವಾಗಿ ಆವುದನ್ನೂ ಹೇಳಿದಂತೆ ಜ್ಞಾಪಕ ವಿಲ್ಲ. ಇಂದು ಎಲ್ಲವನ್ನೂ ಸ್ಪಷ್ಟವಾಗಿ ತಿಳಿಸಿ ಬಿಡೋಣವಾಗಲಿ.

ಪರಂ—ಹೇಳುವೆನು ಕೇಳೋಣವಾಗಲಿ. ನಿಮ್ಮ ಪಿತಾಮಹನು ಕೊಲೆಯಾದ ಮೇಲೆ ನಾನು ಆ ಕೋಣೆಗೆ ಹೋಗಿ ಚೆನ್ನಾಗಿ ಪರೀಕ್ಷಿಸಲಾರಂಭಿಸಿದೆನು. ಆಗ ರಕ್ತದ ಕಲೆಗಳು ಚೆದರಿ ಬಿದ್ದಿದ್ದುವು. ಆ ಕಲೆಗಳ ಮೇಲೆ ಒಂದೊಂದೆಡೆಯಲ್ಲಿ ಕಾಲಿನ ಗುರುತು ಕಾಣಿಸುತ್ತಿದ್ದಿತು. ಆಗ ನನಗೆ ಸಂಶಯ ತೋರಿಬಂದು ನಿಮ್ಮ ಮಿತ್ರನಿದ್ದ ಕೋಣೆಗೆ ಬಂದು ನೋಡಿದೆನು. ಅಲ್ಲಿ ರಕ್ತದ ಸಮಾಚಾರವೇ ಇರಲಿಲ್ಲ. ಬಳಿಕ ತಾವಿಲ್ಲದಿರುವಾಗ ಒಬ್ಬ ಭೃತ್ಯನ ಸಾಹಾಯ್ಯದಿಂದ ತಮ್ಮ ಕೋಣೆಗೆ ಬಂದು ಚೆನ್ನಾಗಿ ಪರೀಕ್ಷಿಸಿ ನೋಡಲಾಗಿ ರಕ್ತದ ಗುರುತುಗಳು ನಯನ ಗೋಚರವಾದುವು.

ಮಾರಕುಮಾರನು ಈ ಮಾತನ್ನು ಕೇಳಿ ಚಕಿತ ಚಕಿತನಾಗಿ ಕುಳಿತನು. ಮುಖದಲ್ಲಿ ವೈವರ್ಣ್ಯವು ಕಾಲಿಟ್ಟಿತು. ಮಾರಕುಮಾರನು ಇದನ್ನು ಮರೆಮಾಡಿ ಕೊಂಡು ಅಸ್ಫುಟಸ್ವರದಿಂದ "ಆಮೇಲೆ, ಆಮೇಲೆ," ಎಂದನು.

ಪರಂ—ಆ ಪರೀಕ್ಷೆಯಾದ ಮೇಲೆ ನನ್ನ ಸಂದೇಹವು ನಿಮ್ಮ ಮೇಲೆ ಬಿದ್ದಿತು. ನನಗೆ ಸಂದೇಹ ಹುಟ್ಟುವುದಕ್ಕೆ ಮೊದಲೇ ನಿಮ್ಮ ವಿಷಯವಾಗಿ ಅನೇಕ ಸಂಗತಿಗಳು ತಿಳಿದು ಬಂದುವು. ಅವುಗಳ ಸಾರಾಂಶವೇನೆಂದರೆ—ಕಮ ಲಾಕಾಂತನು ಕೊಲೆಯಾದ ದಿನದ ಪ್ರಾತಃಕಾಲದಲ್ಲಿ ನೀವು ಕಾಶಿಗೆ ಹೋಗುವು ದಕ್ಕೆ ಟಿಕೆಟನ್ನು ಕೊಂಡಿರಿ. ಇದು ರೈಲಿನ ಅಧಿಕಾರಿಯಿಂದ ನನಗೆ ಗೊತ್ತಾ ಯಿತು. ಅದೇ ರಾತ್ರಿ ಹತ್ತುಗಂಟೆಯ ಬಂಡಿಯಲ್ಲಿ ಹಿಂದಿರುಗಿ ಬಂದಿರಿ. ಆದರೆ ನೀವು ಕಾಲಾಂಜನದಲ್ಲಿ ಇಳಿಯುವುದಕ್ಕೆ ಬದಲಾಗಿ ಅದರ ಹಿಂದಣ ನಿಲ್ದಾಣದಲ್ಲಿ ಳಿದು ಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಇಲ್ಲಿಗೆ ಬರೋಣವಾಯಿತು. ಈ ವಿಷಯವೂ ನಿಮ್ಮ ಬಂಡಿಯವನಿಂದಲೇ ನನಗೆ ಗೊತ್ತಾದುದು. ತಾವು ಹೀಗೆ ಮಾಡುವುದಕ್ಕೆ ಕಾರಣವಿದ್ದಿತು. ಕೊಲೆಯಾದ ವೇಳೆಯಲ್ಲಿ ನೀವು ಇಲ್ಲಿರಲಿಲ್ಲವೆಂಬುದನ್ನು ಸಮರ್ಥನ ಮಾಡುವುದಕ್ಕಾಗಿಯೇ ನೀವು ಹೀಗೆ ಮಾಡಿ ದುದು. ಒಂದು ಕೆಲಸಮಾಡಬೇಕಾದರೆ ಮನುಷ್ಯನಿಗೆ ಎಷ್ಟೋ ಬುದ್ಧಿಯಿರ ಬೇಕು. ನೀವೂ ಸಾಧ್ಯವಾದುದನ್ನೆಲ್ಲಾ ಮಾಡಿನೋಡಿದಿರಿ. ಅಯ್ಯೋ ಪಾಪ! ಗುಟ್ಟು ರಟ್ಟಾಗುವುದಾದರೆ, ಅದರಲ್ಲಿ ನಿಮ್ಮ ದೋಷವೇನಿರುವುದು?

ಮಾರಕುಮಾರನು ಇದೆಲ್ಲವನ್ನೂ ಕಿವಿಯಾರೆ ಕೇಳಿದನು. ಬಳಿಕ ನಿಟ್ಟು ಸಿರನ್ನು ಬಿಟ್ಟು, "ಈತನು ಮನುಷ್ಯನಲ್ಲ; ಮನುಷ್ಯರೂಪದ ದೇವತೆ. ಇಲ್ಲ ದಿದ್ದರೆ, ಈತನಿಗೆ ಇಷ್ಟೆಲ್ಲಾ ಗೊತ್ತಾಗಲು ಕಾರಣವೆಲ್ಲಿಂದ ಬರಬೇಕು?" ಎಂದು ಆಲೋಚಿಸುತ್ತಿರುವಷ್ಟರಲ್ಲಿಯೇ, ಮಾರಕುಮಾರನು ಭಯಚಿಂತೆಗಳಿಂದ ಆವರಿಸಲ್ಪಟ್ಟವನಾಗಿ ಕುಳಿತಿರುವಷ್ಟರಲ್ಲಿಯೇ, ಆತನು ಬಾಹ್ಯಜ್ಞಾನಶೂನ್ಯ ನಾಗಿ ದುಪ್ಪೆಂದು ಪರಂತಪನ ಕಾಲುಗಳ ಮೇಲೆ ಬಿದ್ದುಬಿಟ್ಟನು.

ಕೋಣೆಯೊಳಗಿದ್ದುಕೊಂಡೇ ನಂದಕುಮಾರನು ಇವರಿಬ್ಬರ ಸಂಭಾಷಣೆ ಯನ್ನು ಆದ್ಯೋಪಾಂತವಾಗಿ ಕೇಳಿದನು. ಪರಂತಪನ ಮಾತಿನ ಸಂದರ್ಭ ಗಳಲ್ಲಿ ಮಾರಕುಮಾರನ ಮುಖದಲ್ಲಿ ಉಂಟಾಗುತ್ತಿದ್ದ ಭಾವಭಂಗಿಗಳು ಮರೆ ಯಲ್ಲಿ ನಿಂತು ನೋಡುತ್ತಿದ್ದ ನಂದಕುಮಾರನಿಗೆ ಗೋಚರವಾಗದೇ ಇರಲಿಲ್ಲ. ಈ ಕಾರಣಗಳಿಂದ ಮಾರಕುಮಾರನೇ ದೋಷಿಯೆಂದು ನಂದನು ತಿಳಿದು ದುಃಖ ಗೊಂಡನು.

---

## ಹತ್ತೊಂಬತ್ತನೆಯ ಸಂಧಿ

### ಅಪರಾಧ ಸ್ವೀಕಾರ

ಪ್ರಾಯಿಕವಾಗಿ ಒಂದು ಗಂಟೆಯ ಕಾಲದ ವರೆಗೂ ಮಾರಕುಮಾರನಿಗೆ ಜ್ಞಾನೋದಯವಾಗಲಿಲ್ಲ. ಪರಂತಪನು ಬಲು ಹೊತ್ತು ಆತನ ಸೇವೆಯನ್ನು ಮಾಡಿದನು. ಇದೆಲ್ಲವನ್ನೂ ದೂರದಿಂದಲೇ ನೋಡುತ್ತಿದ್ದ ನಂದಕುಮಾರನು ಮಾರಕುಮಾರನ ದುರವಸ್ಥೆಗಾಗಿ ಅತಿಯಾಗಿ ದುಃಖಗೊಂಡವನಾದರೂ, ತನ್ನ ಇರುವಿಕೆಯು ಮಾರಕುಮಾರನಿಗೆ ಎಲ್ಲಿ ಗೊತ್ತಾಗುವುದೋ ಎಂಬ ಭಯದಿಂದ ಕೋಣೆಯನ್ನು ಬಿಟ್ಟು ಹೊರಗೆ ಬಂದು ಅಣ್ಣನ ಸೇವೆಗಾಗಿ ನಿಲ್ಲಲಾರದವನಾದನು.

ಮಾರಕುಮಾರನು ಬಲು ಹೊತ್ತಿನ ಮೇಲೆ ಎಚ್ಚರಗೊಂಡವನಾಗಿ ಪರಂತಪನನ್ನೇ ಎವೆಯಿಕ್ಕದೆ ನೋಡುತ್ತಾ—ನನಗೇನಾಯಿತು? ನನಗೆ ಜ್ಞಾನ ತಪ್ಪಲು ಕಾರಣವೇನು? ಎಂದು ಪ್ರಶ್ನೆಮಾಡಿದನು.

ಪರಂತಪನು ನಗುತ್ತಾ—ಆಧಿವ್ಯಾಧಿಗಳಿಂದ ತಮಗೆ ತುಂಬಾ ಆಯಾಸವಾಗಿದ್ದಿತು. ಅದರಿಂದಲೇ ತಮಗೆ ಹೀಗಾಗಿರಬೇಕು? ಈಗ ಮತ್ತಾವ ತೊಂದರೆಯೂ ಇಲ್ಲವಷ್ಟೇ? ಎಂದನು.

ಮಾರಕುಮಾರನು ಮತ್ತಾವ ಮಾತನ್ನೂ ಆಡಲಿಲ್ಲ. ಆತನಿಗೆ ಜ್ಞಾನೋದಯವಾದ ಕೂಡಲೆ ಹಿಂದಣ ವಿದ್ಯಮಾನಗಳೆಲ್ಲವೂ ಒಂದೊಂದಾಗಿ ಜ್ಞಾಪಕಕ್ಕೆ ಬರಲಾರಂಭಿಸಿದುವು. ಚಿಂತಾಭಾರದಿಂದ ತಲೆಯು ಬಗ್ಗಿತೋ ಎಂಬಂತೆ, ಮಾರಕುಮಾರನು ಅವನತಮುಖನಾಗಿ ಕುಳಿತುಬಿಟ್ಟನು. ನಾಚುಗೆಯಿಂದಲೂ, ಭಯದಿಂದಲೂ, ದುಃಖದಿಂದಲೂ ಅವನ ಹೃದಯವು ಸುಟ್ಟು ಬೂದಿಯಾಯಿತು.

ಪರಂತಪನು ಇಂತಹ ದುರವಸ್ಥೆಯಿಂದ ಸಂಕಟಪಡುತ್ತಿದ್ದ ಮಾರಕುಮಾರನನ್ನು ನೋಡಿ—ಈಗ ವ್ಯರ್ಥವಾಗಿ ಆವ ಚಿಂತೆ ಮಾಡಿಯೂ ಪ್ರಯೋಜನವಿಲ್ಲ. ಈಗ ಹುಟ್ಟಿದ ವಿವೇಕವು ನಿಮ್ಮಲ್ಲಿ ಮೊದಲೇ ಜನಿಸಿದ್ದರೆ ಎಲ್ಲವೂ ಚೆನ್ನಾಗಿಯೇ ಇರುತ್ತಿದ್ದಿತು. ಮಾಡುವ ಕೆಲಸವನ್ನು ಮಾಡಿ ಪಶ್ಚಾತ್ತಾಪ ಪಡುವುದರಿಂದ ಪ್ರಯೋಜನವೇನು? ಎಂದನು.

ಮಾರಕುಮಾರನು ಭ್ರಾಂತನಾಗಿ—ಈಗ ತಾವು ನನ್ನನ್ನು ಏನು ಮಾಡಬೇಕೆಂದಿರುವಿರಿ? ಎಂದು ಕೇಳಿದನು.

ಪರಂ—ನನ್ನ ಮಾತನ್ನು ಕೇಳುವುದಾದರೆ, ನಿಮಗೆ ಮಂಗಳವಹುದು ; ಇಲ್ಲದೇ ಹೋದರೆ, ಹತ್ಯಾಪರಾಧಕ್ಕೆ ನಿಮ್ಮನ್ನು ಗಲ್ಲಿಗೇರಿಸಿ ಬಿಡುವರು.

ಮಾರ—ನಾನು ಏನ ಮಾಡಲಿ ?

ಪರಂ—ನಾನು ಆವ ರೀತಿಯಲ್ಲಿ ವಿದ್ಯಮಾನಗಳೆಲ್ಲವನ್ನೂ ವಿಮರ್ಶೆ ಮಾಡಿದೆನೋ ಅದೆಲ್ಲವನ್ನೂ ಪತ್ರದಲ್ಲಿ ಬರೆದಿರುವೆನು. ಇದನ್ನು ಓದಿ ನೋಡಿ, ನಿಜವೇ ಸುಳ್ಳೇ ಎಂಬುದನ್ನು ತಿಳಿಸಿರಿ.

ಮಾರ—(ಪತ್ರವನ್ನು ಓದಿ ನೋಡಿ) ಮಹಾಶಯ ! ಇದರಲ್ಲಿ ಒಂದೊಂದು ವರ್ಣವೂ ಸತ್ಯವಾದುದು ; ಇದು ಆವ ಭಾಗದಲ್ಲಿಯೂ ಸುಳ್ಳಲ್ಲ.

ಪರಂ—ಹಾಗಾದರೆ ನೀವು ಈ ಪತ್ರಕ್ಕೆ ಸ್ವನಾಮಧಾಮಗಳನ್ನು ಅರ್ಪಿಸಬಹುದಷ್ಟೇ ?

ಮಾರ—ಆಗಬಹುದು ; ನನ್ನ ಹಸ್ತಾಕ್ಷರದಿಂದ ತಮಗುಂಟಾಗುವ ಪ್ರಯೋಜನವೇನು ?

ಪರಂ—ಅದರ ಲಾಭಾಲಾಭಗಳನ್ನು ಮುಂದೆ ತಿಳಿಸುವೆನು. ನೀವು ಇದನ್ನು ಒಪ್ಪಿರುವಿರಾ ?

ಮಾರಕುಮಾರನು ಆ ಪತ್ರವನ್ನು ತೆಗೆದುಕೊಂಡು, ಆ ಪತ್ರದ ಅಡಿಯಲ್ಲಿ, " ಇದರಲ್ಲಿ ಕಂಡ ವಿಷಯಗಳೆಲ್ಲವೂ ನನ್ನ ಬುದ್ಧಿಗೆ ತಿಳಿದ ಹಾಗೆ ಸತ್ಯವಾದುವು ; ಇದರಲ್ಲಿ ಅಸತ್ಯವೆಂಬುದು ಒಂದೂ ಇಲ್ಲ. ನಾನು ಪರ ಪ್ರೇರಣೆಯಿಲ್ಲದೆಯೇ ತ್ರಿಕರಣಶುದ್ಧಿಯಿಂದ ಇದರಡಿಯಲ್ಲಿ ಸ್ವನಾಮ ಧಾಮಗಳನ್ನು ಅರ್ಪಿಸುವವ ನಾಗಿರುವೆನು," ಎಂದು ಬರೆದು ಅದರಡಿಯಲ್ಲಿ ತನ್ನ ಹೆಸರನ್ನು ರುಜುಮಾಡಿದನು.

ಬಳಿಕ ಪರಂತಪನು ಆ ಪತ್ರವನ್ನು ಭದ್ರಪಡಿಸಿಟ್ಟುಕೊಂಡು—ಮಹಾ ಶಯ ! ತಾವು ಮುಕ್ತಿಲಾಭವನ್ನು ಬಯಸುವಿರಾ ? ಎಂದು ಪ್ರಶ್ನೆ ಮಾಡಿದನು.

ಮಾರ—ಸ್ವಾತಂತ್ರ್ಯವು ಆರಿಗೆ ಪ್ರಾರ್ಥನೀಯವಲ್ಲ ?

ಪರಂ—ಹಾಗಾದರೆ, ಈರಾತ್ರಿಯೊಳಗಾಗಿ ನಿಮಗೆ ಇಷ್ಟವಾದ ಪ್ರದೇಶ ವನ್ನು ಕುರಿತು ಪಲಾಯನಮಾಡಬಹುದು. ನಾನು ನಾಳೆಯ ಬೆಳಗಾಗುವ ವರೆಗೂ ಈ ವಿಷಯವನ್ನು ಗೋಪ್ಯವಾಗಿಯೇ ಇಟ್ಟುಕೊಂಡಿರುವೆನು.

ಮಾರ—ನಾನು ಓಡಿ ಹೋಗಲಾರೆನು. ತಾವು ದಯಾಮಯರಾದುದ ರಿಂದ, ನನ್ನಲ್ಲಿ ಕನಿಕರವಿಟ್ಟು ಈ ಮಾರ್ಗವನ್ನು ತೋರೋಣವಾಯಿತು. ನಾನು ಹೇಡಿಯಂತೆ ಓಡಿಹೋಗಿ ಸಾಯುವ ವರೆಗೂ ತಲೆಯನ್ನು ಮರೆಮಾಚಿಕೊಂಡು ಬದುಕಿರಲಾರೆನು. ನನ್ನನ್ನು ತಾವು ನೀಚನೆಂದು ಭಾವಿಸೋಣವಾಯಿತೇನು?

ಪರಂ—ತಮ್ಮನ್ನು ನಾನು ಹಾಗೆ ಭಾವಿಸುವೆನೇ? ನಾನು ಹೇಳಿದುದು ತಮ್ಮ ಕ್ಷೇಮಕ್ಕಾಗಿಯೇ.

ಮಾರ—ಪಲಾಯನ! ಪಲಾಯನ!! ಚೀಃ ಚೀಃ ಆರು ಮಾಡುವ ಕೆಲಸ? ನನಗಾಗಿ ಇಬ್ಬರು ಪ್ರಾಣಬಿಡುತ್ತಿರುವಲ್ಲಿ ನಾನು ಪಲಾಯನ ಮಾಡಿ ಬದುಕಲೇ! ನಾನು ಪಲಾಯನ ಮಾಡಿದರೂ ಆ ಸಂಕಟವು ನನ್ನನ್ನು ಬಿಟ್ಟು ಹೋದೀತೇ?

ಪರಂ—ಹಾಗಾದರೆ ತಮ್ಮ ಇಷ್ಟವೇನು?

ಮಾರ—ನನ್ನ ಇಷ್ಟವೇ? ಅದನ್ನು ತಮ್ಮಲ್ಲಿ ಅರುಹುವುದಕ್ಕೆ ನನಗೆ ಸಾಹಸವಿಲ್ಲ. ನಾನು ಪೋಲೀಸಿನವರ ಕೈಗೆ ಸಿಲುಕಿಕೊಂಡು, ಪ್ರತಿನಿತ್ಯವೂ ಅವರಿಂದ ನೂತನ ಯಾತನೆಗಳನ್ನು ಅನುಭವಕ್ಕೆ ತಂದುಕೊಂಡು ಇಹಲೋಕ ದಲ್ಲಿಯೇ ನರಕಯಾತನೆಯನ್ನು ಅನುಭವಿಸುವುದಕ್ಕೆ ಎಂದಿಗೂ ಇಷ್ಟಪಡೆನು. ನಾನು ಪಲಾಯನ ಮಾಡುವುದೂ ಇಲ್ಲ; ಎಲ್ಲರ ಇದಿರಿನಲ್ಲಿಯೂ ನನ್ನ ದೋಷ ವನ್ನು ಒಪ್ಪಿಕೊಳ್ಳುವುದೂ ಇಲ್ಲ. ನನಗೆ ಆವ ಉಪದ್ರವವನ್ನೂ ಮಾಡುವು ದಿಲ್ಲವೆಂದು ತಾವು ಅಭಯ ಕೊಡುವುದಾದರೆ, ನನ್ನ ಉದ್ದೇಶವನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುವೆನು. ತಾವು ಈಶ್ವರ ಸಾಕ್ಷಿಯಾಗಿಯೂ ನನ್ನ ವಿಚಾರ ವನ್ನು ಮತ್ತೊಬ್ಬರಲ್ಲಿಯೂ ಹೇಳುವುದಿಲ್ಲವೆಂದು ಮಾತ ಕೊಡುವುದಾದರೆ, ನಾನು—

ಪರಂ—(ಅಡ್ಡಗಿಸಿ) ಮಾರಮಹಾಶಯ! ನಾನು ಸತ್ಯವಾಗಿಯೂ ನಿಮ್ಮ ವಿಷಯವನ್ನು ಆರ ಮುಂದೆಯೂ ಹೇಳುವುದಿಲ್ಲ. ನೀವು ಹೇಳುವುದಕ್ಕಿಂತಲೂ ಮೊದಲೇ ನಾನು ನಿಮ್ಮ ಆಂತರ್ಯವನ್ನು ಬಲ್ಲೆನು.

ಮಾರ—ನಾನು ಹಾಗೆ ಮಾಡದಿದ್ದರೆ, ತಮ್ಮ ಖ್ಯಾತಿಯು ಲೋಕ ದಲ್ಲಿ ಹರಡುವ ಬಗೆ ಹೇಗೆ? ನಾನು ಆಲೋಚಿಸಿರುವ ಮಾರ್ಗವನ್ನು ಬಿಟ್ಟರೆ ನನಗೆ ಬೇರೊಂದರಿಂದಲೂ ನಿಷ್ಕೃತಿಯೆಂಬುದೇ ಇರುವುದಿಲ್ಲ. ಅದೊಂದು ಮಾರ್ಗವೇ ನನಗೆ ಆನಂದದಾಯಕವಾಗಿರುವುದು. ನಾನು ಹಾಗೆ ಮಾಡುವು ದಾದರೆ, ನನ್ನ ನಂದಕುಮಾರನಿಗೆ ಕ್ಷೇಮವುಂಟಾಗುವುದು. ಇದಕ್ಕಿಂತಲೂ

ಸನಗೆ ಸಂತೋಷವೇನಿರುವುದು? ನಿರಪರಾಧಿನಿಯಾದ ಮದಯಂತಿಯೂ ಮುಕ್ತಿ ಲಾಭವನ್ನು ಪಡೆವಳು. ಮಹಾಶಯ! ನಾನು ಕೇಳಿದುದರಲ್ಲಿ ನಂದಕುಮಾರನು ಬಿಡುಗಡೆಯಾದನೆಂದು ತಿಳಿದು ಬಂದಿತು. ಇದು ಸತ್ಯವೇ?

ಪರಂ—ಇದು ಸತ್ಯ; ಸಂಪೂರ್ಣವಾಗಿಯೂ ಸತ್ಯ. ನಿಮ್ಮ ಮಿತ್ರನಾದ ರಾಮರಮಾರಮಣನೆಂಬ ಹೆಸರಿನ ಭೂತನಾಥನು ದಸ್ತಗಿರಿಯಾದಾಗಲೇ ನಿಮ್ಮ ನಂದಕುಮಾರನಿಗೆ ಬಿಡುಗಡೆಯಾಯಿತು.

ಮಾರ—ಆತನೆಲ್ಲಿ?

ಪರಂ—ಆ ಮೇಲೆ ಗೊತ್ತಾಗುವುದು.

ಮಾರ—ಮದಯಂತಿಯನ್ನು ಹಿಡಿದುಕೊಂಡು ಹೋಗಿರುವುದೇಕೆ?

ಪರಂ—ಕಮಲಾಕಾಂತನನ್ನು ಕೊಂದವಳು ತಾನೇ ಎಂದು ಹೇಳಿ ಪೋಲೀಸಿನವರ ಕೈಗೆ ಸಿಕ್ಕಿಬಿದ್ದಿರುವಳು.

ಮಾರ—(ಆಶ್ಚರ್ಯದಿಂದ) ಅವಳ ಉದ್ದೇಶವಾದರೂ ಏನು?

ಪರಂ—ತಮ್ಮನ್ನು ಹತ್ಯಾಕಾರಿಯೆಂದು ಪ್ರಮಾಣದೊಡನೆ ನಿರ್ಧರ ಮಾಡುವುದಕ್ಕಾಗಿ, ಮದಯಂತಿಯು ತಾನಾಗಿಯೇ ಠಾಣೆಗೆ ಹೋಗಿರುವಳು.

---

## ಇಪ್ಪತ್ತನೆಯ ಸಂಧಿ

### ಸಹೋದರರು

ಮಾರಕುಮಾರನು ಬಲು ಹೊತ್ತು ಚಿಂತಿಸಲಾರಂಭಿಸಿದನು. ಅವನು ತನ್ನ ಅದೃಷ್ಟದ ಫಲವನ್ನು ಚಿಂತಿಸಿ ಚಿಂತಿಸಿ ಶೋಕಸಾಗರದಲ್ಲಿ ಮುಳುಗಿಬಿಟ್ಟನು. ಆತನ ಕಣ್ಣುಗಳಿಂದ ನೀರು ಸಂತತವಾಗಿ ಹರಿದು ಬಂದು ಆತನ ವಸ್ತ್ರವೆಲ್ಲವನ್ನೂ ತೋಯಿಸಿಬಿಟ್ಟಿತು. ಆತನು ಉಕ್ಕಿ ಬರುತ್ತಿದ್ದ ದುಃಖವನ್ನು ಎಷ್ಟು ಬಗೆಯಲ್ಲಿ ಅಡಗಿಸಬೇಕೆಂದು ಪ್ರಯತ್ನ ಮಾಡಿದರೂ ಸಾಧ್ಯವಾಗಲಿಲ್ಲ.

ಮಾರಕುಮಾರನನ್ನು ನೋಡಿ ಪರಂತಪನ ಮನವು ಚಲಿಸಿತು. ಮನುಷ್ಯನ ಸ್ವಭಾವವನ್ನು ಬೇರ್ಪಡಿಸುವುದಕ್ಕೆ ಆರಿಗೆ ತಾನೇ ಸಾಧ್ಯವು? ಅದರಲ್ಲಿಯೂ ಪರಂತಪನು ಹೆಂಗರುಳಿನಂಥವನು. ಅದು ಕಾರಣವೇ, ಮಾರಕುಮಾರನ ದುಃಖವನ್ನು ನೋಡಿ ಪರಂತಪನು ಅತ್ತುಬಿಟ್ಟನು.

ಕೊಂಚ ಹೊತ್ತಿನ ಮೇಲೆ ಪರಂತಪನು ಚೇತರಿಸಿಕೊಂಡು, ಮಾರ ಕುಮಾರನನ್ನು ಸಂಬೋಧಿಸಿ—ಮಾರ ಮಹಾಶಯ! ನನ್ನದೊಂದು ಪ್ರಶ್ನೆ? ಎಂದನು.

ಮಾರಕುಮಾರನು ಗದ್ಗದ ಸ್ವರದಿಂದ—ಅದೇನು? ಎಂದನು.

ಪರಂ—ನಿಮ್ಮ ಪಿತಾಮಹರ ನಿಜವಾದ ಉಯಿಲು ಎಲ್ಲಿ? ಆ ಸಭೆಯಲ್ಲಿ ಓದಿದುದು ಮೋಸದ ಉಯಿಲು.

ಮಾರ—ತಮ್ಮ ಊಹೆಯು ನಿಜವಾದುದು. ನನ್ನ ಪಾಪಗಳಿಗೆ ಪ್ರಾಯಶ್ಚಿತ್ತವೆಂಬುದೇ ಇಲ್ಲ. ನಾನು ಮಾಡಿದ ಪಾಪಗಳನ್ನು ಹೇಳುವುದಕ್ಕೆ ಕೂಡ ಆಗಲಾರದು. ತಮಗೆ ಮೋಸದ ಉಯಿಲಿನ ವಿಚಾರವು ಆರಿಂದ ತಿಳಿಯಿತು?

ಪರಂ—ಇದನ್ನು ನೀವು ಕೇಳಿ ತಿಳಿಯದಿರುವುದೇ ಮೇಲು. ತಿಳಿಸುವುದೂ ಯುಕ್ತವಾಗಿಲ್ಲ.

ಮಾರ—ತಾವು ನನ್ನ ಇಚ್ಛೆಯನ್ನು ಪೂರ್ಣ ಮಾಡೋಣವಾಗಲಿ. ತಾವು ನನಗೆ ಎಲ್ಲವನ್ನೂ ತಿಳಿಸೋಣವಾಯಿತು—ಎಂದ ಮೇಲೆ, ಇದೊಂದು ದೊಡ್ಡ ವಿಚಾರವೇ? ಹೇಳಿದವರಾರು? ಮಹಾಶಯ!

ಪರಂ—ನಿಮ್ಮವರೇ!

ಮಾರ—ನಮ್ಮವರೇ?

ಪರಂ—ಆರು ಈ ಕೆಲಸವನ್ನು ಮಾಡಿಕೊಟ್ಟರೋ ಅವರೇ!

ಮಾರ—ಕಾರಣ?

ಪರಂ—ನಿಮ್ಮಿಂದ ಆವ ಬಗೆಯ ಪುರಸ್ಕಾರವೂ ದೊರೆಯಲಿಲ್ಲವೆಂದು ಅವರೇ ನನ್ನಲ್ಲಿಗೆ ಬಂದು ಹೇಳಿದರು. ಈಗ ನನ್ನ ಪ್ರಶ್ನೆಗೆ ಉತ್ತರ ಕೊಡೋಣವಾಗಲಿ.

ಮಾರ—ತಾವು ಈ ಪ್ರಶ್ನೆಯನ್ನು ಮಾಡದಿದ್ದರೂ ನಾನೇ ತಿಳಿಸಿಬಿಡುವುದರಲ್ಲಿದ್ದೆನು. ಆ ನಿಜವಾದ ಉಯಿಲು ನನ್ನಲ್ಲಿಯೇ ಇರುವುದು. ಅದನ್ನು ನಾನು ತಮ್ಮ ಕೈಯಲ್ಲಿ ಸಮರ್ಪಣಮಾಡುವುದಕ್ಕಾಗಿಯೇ ಇಲ್ಲಿಗೆ ಬಂದುದು.

ಮಾರಕುಮಾರನು ಹೀಗೆ ಹೇಳಿ ತನ್ನ ಕಿಸೆಯಿಂದ ಒಂದು ಪತ್ರವನ್ನು ತೆಗೆದು ಪರಂತಪನ ಕೈಗೆ ಕೊಟ್ಟನು. ಪರಂತಪನು ಅದನ್ನು ಓದಿ ನೋಡಿದನು. ಅವರಲ್ಲಿ ಕಮಲಾಕಾಂತನ ಸಂಪತ್ತಿನಲ್ಲಿ ಮುಕ್ಕಾಲು ಪಾಲು ನಂದಕುಮಾರನಿಗೇ ಸೇರತಕ್ಕುದೆಂದು ಬರೆಯಲ್ಪಟ್ಟಿದ್ದಿತು. ಪರಂತಪನು ಇದನ್ನು ಓದಿಕೊಂಡ ಬಳಿಕ—ಮಾರ ಮಹಾಶಯ! ಈ ಉಯಿಲಿನಿಂದ ತಮಗೆ ಮತ್ತಾವ ಪ್ರಯೋಜನವುಂಟು? ಎಂದು ಪ್ರಶ್ನೆ ಮಾಡಿದನು.

ಮಾರ—ನನಗದರಿಂದಾಗುವುದೇನು? ತಾವು ಇದನ್ನು ನಂದಕುಮಾರನಿಗೆ ಸಲ್ಲಿಸೋಣವಾಗಲಿ. ನಾನು ನಂದಕುಮಾರನನ್ನು ನೋಡಿ ಆತನೊಡನೆ ಕೊಂಚ ಹೊತ್ತಾದರೂ ಸಂಭಾಷಣೆ ಮಾಡಿ ಆತನ ಬಳಿಯಲ್ಲಿ ಕ್ಷಮೆಯನ್ನು ಬೇಡಬೇಕೆಂಬ ಬಯಕೆಯು ನನಗಿದ್ದಿತು. ಇದು ಆತನಿಗೆ ಇಷ್ಟವೋ ಇಲ್ಲವೋ ನನಗೆ ತಿಳಿಯದು. ನನ್ನಂತಹ ಪರಮ ಚಂಡಾಲನನ್ನು ಆರು ತಾನೇ ನೋಡಲು ಇಷ್ಟಪಡುವರು?

ಪರಂ—ತಾವು ನಂದಕುಮಾರನನ್ನು ನೋಡಬೇಕೆಂಬ ಆಸೆಯು ಬಲವತ್ತರವಾಗಿರುವುದಾದರೆ, ನಾನು ಆತನನ್ನು ಈಗಳೇ ಇಲ್ಲಿಗೆ ಕರೆಯಿಸುವೆನು.

ಮಾರ—ತಾವು ನನ್ನ ವಿಷಯದಲ್ಲಿ ಇನ್ನು ಸಂಶಯಪಡಬೇಕಾದುದೇನೂ ಇರುವುದಿಲ್ಲ. ನನ್ನ ಆಸೆಯು ಇಂದಿಗೆ ತೀರಿತು.

ಪರಂ—ನಂದಕುಮಾರನು ಇಲ್ಲಿಯೇ ಇರುವನು. ಆತನು ಒಳಗೆ ಇದ್ದುಕೊಂಡೇ ನಮ್ಮಿಬ್ಬರ ಸಂಭಾಷಣೆಯೆಲ್ಲವನ್ನೂ ಕೇಳುತ್ತಿದ್ದನು.

ಮಾರ—ಹಾಗಾದರೆ ಆತನೆಲ್ಲಿ? ಕರೆಯಿಸೋಣವಾಗಲಿ.

ಪರಂತಪನು ಸೈಗೆ ಮಾಡಿದನು. ಅದರ ಉತ್ತರ ಕ್ಷಣದಲಿಯೇ ನಂದಕುಮಾರನು ಮಾರಕುಮಾರನ ಇದಿರಿನಲ್ಲಿ ಬಂದು ನಿಂತನು.

ಮಾರಕುಮಾರನು ನಂದಕುಮಾರನನ್ನು ನೋಡಿದನು; ನಂದಕುಮಾರನೂ ಮಾರಕುಮಾರನನ್ನು ನೋಡಿದನು. ಇವರಿಬ್ಬರ ಕಣ್ಣುಗಳಲ್ಲಿಯೂ ನೀರು ತುಂಬಿತು. ಆರ ಬಾಯಿಂದಲೂ ಆವ ಮಾತೂ ಹೊರಡಲಿಲ್ಲ. ಕಡೆಗೆ ಮಾರಕುಮಾರನು ನಂದಕುಮಾರನ ಕಾಲಿನ ಮೇಲೆ ಬಿದ್ದು ಕ್ಷಮೆಯನ್ನು ಬೇಡಿದನು.

ನಂದಕುಮಾರನು ಅಣ್ಣನನ್ನು ಹಿಡಿದೆತ್ತಿ—ಅಣ್ಣಾ! ನಾನು ಎಲ್ಲವನ್ನೂ ಕೇಳಿರುವೆನು. ನೀನು ಇಲ್ಲಿರದೇ ಎಲ್ಲಿಗಾದರೂ ಓಡಿಹೋಗು. ತಲೆಯನ್ನು

ತಪ್ಪಿಸಿಕೊಂಡಾದರೂ ಬದುಕಿರು. ಈ ದುಃಖವು ಚಿರಕಾಲವಿರುವುದಿಲ್ಲ. ನೀನು ಬದುಕಿರುವುದಾದರೆ, ಎಂದಾದರೊಂದು ದಿನ ಒಬ್ಬರನ್ನೊಬ್ಬರು ನೋಡಬಹುದು. ನೀನು ಹಠಹಿಡಿಯದೆಯೇ ನಮ್ಮ ಪರಂತಪ ಮಹಾಶಯರ ಮಾತಿನಂತೆ ಆಚರಿಸು. ಈ ರಾತ್ರಿಯೇ ಹೊರಡು, ಅಣ್ಣಾ! ಎಂದು ಬೆಸಗೊಂಡನು.

ಮಾರ—ನಂದ! ನೀನು ಇನ್ನೂ ಹುಡುಗ; ಆದುದರಿಂದಲೇ ನೀನು ಹೀಗೆಲ್ಲಾ ಹೇಳುತ್ತಿರುವೆ. ನನ್ನ ಹೃದಯವು ನಿನಗೆ ಗೊತ್ತಾಗಿದ್ದಿದ್ದರೆ, ನೀನು ಇಂತಹ ಮಾತುಗಳನ್ನು ಎಂದಿಗೂ ಆಡುತ್ತಿರಲಿಲ್ಲ. ನಾನು ಮಹಾಪಾಪಿ. ನಾನು ಆರಿಂದ ಪೋಷಿಸಲ್ಪಡುತ್ತಿದ್ದೆನೋ ಆತನನ್ನೇ ಕೊಂದೆನು. ನಾನು ಆರೊಡನೆ ಬಾಲ್ಯದಿಂದಲೂ ಒಡನಾಡಿಕೊಂಡಿರುತ್ತಿದ್ದೆನೋ ಅಂತಹ ನಿನಗೇ ಮೋಸಮಾಡಲು ಯತ್ನಮಾಡಿದೆನು. ನಂದ! ನೀನೇ ಹೇಳು; ನನಗಿಂತಲೂ ಪಿಶಾಚವು ಮತ್ತಾವುದಿರುವುದು? ನನ್ನ ಮಾತನ್ನು ಕೇಳು.

ನಾನು ಓಡಿಹೋಗುವುದಿಲ್ಲ. ನಾನು ಪೋಲೀಸಿನವರ ಕೈಗೆ ಸಿಲುಕಿ ನರಳುವುದೂ ಇಲ್ಲ. ನಾನು ಮಾಡುವುದು ನಾಳೆ ಬೆಳಗಾಗುವುದರೊಳಗಾಗಿ ಎಲ್ಲರಿಗೂ ಗೊತ್ತಾಗುವುದು. ಪರಂತಪ ಮಹಾಶಯ! ಮದಯಂತಿಯು ನನ್ನನ್ನು ಹತ್ಯಾಕಾರಿಯೆಂದು ತಿಳಿದಿದ್ದರೆ, ಅವಳು ಪೋಲೀಸಿನವರ ಕೈಗೆ ಅದೇಕೆ ಸಿಲುಕಿ ಕೊಂಡಳು? ಇದರ ತತ್ತ್ವವನ್ನಾದರೂ ತಿಳಿಸೋಣವಾಗಲಿ.

ಪರಂ—ಆಕೆಗೆ ಪ್ರಯೋಜನವುಂಟು. ಮದಯಂತಿಯು ನಂದಕುಮಾರನನ್ನು ಮೊದಲಿನಿಂದಲೂ ಪ್ರೀತಿಸುತ್ತಿರುವಳು. ಆಕೆಯು ನಂದಕುಮಾರನ ದುರವಸ್ಥೆಯನ್ನು ನೋಡಿ, ಆತನಿಗೆ ಬಿಡುಗಡೆ ಮಾಡಿಸುವುದಕ್ಕಾಗಿ ಆತ್ಮಸಮರ್ಪಣ ಮಾಡಿರುವಳು.

ಮಾರ—ನಮ್ಮ ನಂದಕುಮಾರನು ಆಕೆಯನ್ನು ಎಂದಿಗೂ ಪ್ರೀತಿಸಿದವನಲ್ಲ. ಆಕೆಯನ್ನು ಕಂಡರೆ ಅವನಿಗೆ ಮೊದಲಿನಿಂದಲೂ ಆಗುತ್ತಿರಲಿಲ್ಲ; ಹೀಗಿರುವಲ್ಲಿ ಮದಯಂತಿಗೆ ಈತನಲ್ಲಿ ಅಷ್ಟು ಪ್ರೇಮವೇತಕೆ?

ಪರಂ—ಮದಯಂತಿಯು ನಂದನನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿರುವಳು. ಅದಕ್ಕಾಗಿಯೇ ಆತ್ಮಸಮರ್ಪಣೆಯನ್ನೂ ಮಾಡಿದಳು. ಈ ಸ್ವಾರ್ಥತ್ಯಾಗವನ್ನು ನೋಡಿ ನಂದಕುಮಾರನ ಮನವು ಎಂದಾದರೊಂದು ದಿನ ಕರಗಿ ಕರಗಿ ನೀರಾಗಿ ಹರಿದು ಹೋಗಬಹುದು. ಅಂದಾದರೂ ನಂದಕುಮಾರನು ತನ್ನವನಾಗಬಹುದೆಂದು ಅವಳ ದೂರಾಲೋಚನೆಯು.

ಈ ಮಾತನ್ನು ಕೇಳಿ ನಂದಕುಮಾರನು ಸುಮ್ಮನಿರಲಾರದೆ ಇಂತೆಂದನು :—

"ನಾನು ಆಕೆಯನ್ನೂ ಎಂದೂ ಪ್ರೀತಿಸಿದವನಲ್ಲ, ಮುಂದೆಯೂ ಪ್ರೀತಿಸ ತಕ್ಕವನಲ್ಲ. ಇದು ಸಿದ್ಧಾಂತದ ಮಾತು."

ಪರಂತಪನು ಇದನ್ನು ಕೇಳಿ ನಗುತ್ತಾ ಇಂತೆಂದನು :—

"ನನಗೂ ಈ ವಿಷಯವೆಲ್ಲವೂ ಚೆನ್ನಾಗಿಯೂ ಗೊತ್ತು. ಮದಯಂತಿಯು ಇನ್ನೂ ರೂಪ ಯೌವನ ಶಾಲಿನಿ. ಇಂಥವಳು ಸ್ವಸುಖಕ್ಕಾಗಿ ಯತ್ನಮಾಡ ಬಾರದೇನು ? ಇದರಲ್ಲಿ ದೋಷವೇನೂ ಕಂಡು ಬರುವುದಿಲ್ಲ.

ನಾನು ವಿಚಾರ ಮಾಡಿದುದರಲ್ಲಿ ಮದಯಂತಿಯ ವಿಷಯವಾಗಿ ಅನೇಕ ಸಂಗತಿಗಳನ್ನು ಅರಿತುಕೊಂಡಿರುವೆನು. ಆಕೆಯು ರಾಮರಮಾರಮಣನನ್ನು ನೋಡಿದ ಕೂಡಲೆ ಮೂರ್ಛೆಗೊಳ್ಳಲಿಲ್ಲವೇ ? ಇದರ ಕಾರಣವೆಲ್ಲವೂ ನನಗೆ ಗೊತ್ತು. ಆದರೆ ಈಗ ಅದನ್ನು ಎತ್ತಿ ಆಡುವುದರಿಂದ ನಿಮಗೆ ವ್ಯಸನವುಂ ಟಾಗಬಹುದು."

ನಂದ—ಮಹಾಶಯ ! ಅದನ್ನು ಕೇಳುವುದಕ್ಕೆ ನನಗೆ ತುಂಬಾ ಕುತೂ ಹಲವಿರುವುದು. ತಾವು ನನ್ನಲ್ಲಿ ಪೂರ್ಣ ಕಟಾಕ್ಷವಿಟ್ಟು ಅದನ್ನು ತಿಳಿಸೋಣ ವಾಗಲಿ.

ಪರಂ—ಇದರಲ್ಲಿ ನನ್ನದೇನೂ ತಪ್ಪಿರುವುದಿಲ್ಲ. ಮದಯಂತಿಯು ನಿಮ್ಮ ಜಾತಿಯವಳು. ಆಕೆಯ ಕಳಂಕವೇ ನಿಮ್ಮೆಲ್ಲರಿಗೂ ಸುತ್ತಿಕೊಳ್ಳುವುದು. ನಿಮಗೆ ನಿಜವಾಗಿಯೂ ಆಕೆಯ ವಿಷಯವನ್ನು ತಿಳಿಯಬೇಕೆಂಬ ಅಭಿಲಾಷೆ ಯಿರುವುದಾದರೆ ತಿಳಿಸುವೆನು. ದುಷ್ಟರ ಸ್ವಭಾವವನ್ನು ಎಲ್ಲರೂ ತಿಳಿದಿರುವುದೇ ಮೇಲು.

ಮದಯಂತಿಯು ವಿಧವೆಯಾದ ಒಂದು ವರ್ಷದೊಳಗಾಗಿ ರಾಮರಮಾ ರಮಣನೆಂಬ ಹೆಸರಿನ ಭೂತನಾಥನನ್ನು ಕಟ್ಟಿಕೊಂಡಳು. ಆಕೆಗೆ ಒಂದು ಗಂಡು ಗೂಸಾಯಿತು. ಆಕೆಯು ಅದನ್ನು ದೂರ ಮಾಡಿಬಿಟ್ಟಳು. ಬಳಿಕ ನಿಮ್ಮ ಅಜ್ಜ ನಿಗೆ ಸರ್ವನಾಶವನ್ನುಂಟುಮಾಡುವುದಕ್ಕೋಸ್ಕರ ಕೆಟ್ಟ ಮುಹೂರ್ತದಲ್ಲಿ ನಿಮ್ಮ ಮನೆಯಲ್ಲಿ ಕಾಲಿಟ್ಟಳು. ಆಕೆಯು ರಾಮರಮಾರಮಣ (ಭೂತನಾಥ) ನನ್ನು ನೋಡಿದ ಕೂಡಲೆ, ಭೂತವು ಇಲ್ಲಿಗೂ ಬಂದಿತಲ್ಲಾ ! ಎಂಬ ಭಯದಿಂದ ಮೂರ್ಛೆಗೊಂಡಳು. ಬಳಿಕ ಇಬ್ಬರೂ ಏಕಾಂತದಲ್ಲಿ ಸೇರಿಕೊಂಡು ಒಂದು ಬಗೆಯಾಗಿ ಸಿದ್ಧಾಂತ ಮಾಡಿಕೊಂಡರು.

---

## ಇಪ್ಪತ್ತೊಂದನೆಯ ಸಂಧಿ

### ಪಾಪ ಪರಿಣಾಮ

"ಅಣ್ಣಾ! ಚೆನ್ನಾಗಿ ಆಲೋಚಿಸಿ ನೋಡು; ಈಗ ನೀನು ಓಡಿ ಹೋಗುವುದೇ ಮೇಲು," ಎಂದು ಹೇಳಿ ನಂದಕುಮಾರನು ಪ್ರತ್ಯುತ್ತರವನ್ನು ಬಯಸುತ್ತಾ ಮಾರಕುಮಾರನನ್ನು ನೋಡಿದನು.

ಮಾರಕುಮಾರನು ನಕ್ಕು—ನಂದ! ನನ್ನ ವಿಷಯವೆಲ್ಲವನ್ನೂ ಅರಿತಿರುವೆ. ನನ್ನ ಮನವು ಈಗ ಹೇಗಿರುವುದೆಂಬುದನ್ನೇನಾದರೂ ನೀನು ಬಲ್ಲೆಯಾ? ನಿಜವಾಗಿಯೂ ಅದು ನಿನಗೆ ಗೊತ್ತಿದ್ದಿದ್ದರೆ, ನೀನು ಇಂತಹ ಪ್ರಲೋಭನದ ಮಾತನ್ನಾಡುತ್ತಿರಲಿಲ್ಲ; ನೀನು ಇನ್ನೂ ಹುಡುಗ, ಎಂದು ಉತ್ತರ ಕೊಟ್ಟನು.

ನಂದ—ಪೋಲೀಸಿಗೆ ಸಿಲುಕುವುದಕ್ಕೂ ಇಷ್ಟವಿಲ್ಲ, ಪರದೇಶಕ್ಕೆ ಪಲಾಯನ ವಾಗುವುದಕ್ಕೂ ಇಷ್ಟವಿಲ್ಲ; ಹಾಗಾದರೆ ಏನ ಮಾಡಬೇಕೆಂದಿರುವೆ?

ಮಾರ—ಆ ಮಹಾಪುರುಷನನ್ನು ಕೇಳು. ಅವರಿಗೆ ಇದು ಮೊದಲಿನಿಂದಲೂ ಗೊತ್ತು.

ನಂದ—ಅಣ್ಣಾ! ನೀನೇ ಹೇಳಬಾರದೇಕೆ? ಪರಂತಪ ಮಹಾಶಯರಿಗೆ ಗೊತ್ತಿರಬಹುದು, ಆದರೂ ನಾನು ನಿನ್ನ ಬಾಯಿಂದಲೇ ಕೇಳಬೇಕು.

ಮಾರ—ಈಶ್ವರ ಸಾಕ್ಷಿಯಾಗಿಯೂ ಆರ ಮುಂದೂ ಹೇಳುವುದಿಲ್ಲವೆಂದು ಶಪಥಮಾಡು.

ನಂದ—ಸತ್ಯವಾಗಿಯೂ ನಾನು ಆರ ಮುಂದೂ ಹೇಳುವುದಿಲ್ಲ.

ಮಾರ—ನನ್ನ ಕೆಲಸಕ್ಕೆ ಅಡ್ಡಿಯಾಗಿ ಬರುವುದಿಲ್ಲವೆಂದೂ ಪ್ರತಿಜ್ಞೆ ಮಾಡು. ಸಹೋದರ ಪ್ರೀತಿಯಿಂದ ಮನಸ್ಸು ಬದಲಾಯಿಸ ಬಹುದು, ಕಂಡವರಾರು?

ನಂದ—ಅಣ್ಣಾ! ನನ್ನಲ್ಲಿ ಇನ್ನೂ ಅವಿಶ್ವಾಸವೇ? ನಾನು ಆವಾಗ ನಿನ್ನ ಮಾತಿಗೆ ಪ್ರತಿಯಾಗಿ ಹೇಳಿರುವುದು. ನನ್ನನ್ನು ನಿಷ್ಕಾರಣವಾಗಿ ಮನೆಯಿಂದ ಹೊರಡಿಸಿದ ಮಾತಾಮಹನಿಗೆ ನಾನು ಪ್ರತಿಯಾಗಿ ಆಡಿದವನಲ್ಲ. ಅಣ್ಣನೂ ತಂದೆಗೆ ಸಮಾನನಾದುದರಿಂದ, ನಿನಗೂ ಪ್ರತಿಯಾಗಿ ಆಡುವುದಿಲ್ಲ.

ಮಾರ—ಪರಂತಪ ಮಹಾಶಯ! ತಾವು ಹೇಳುವುದಾದರೂ ಏನು?

ಪರಂ—ತಾವು ತುಂಬಾ ಆಯಾಸಪಟ್ಟಿರುವಿರಿ. ತಮಗೆ ಈಗ ನಿದ್ರೆಯ ಆವಶ್ಯಕವಿರುವುದು. ನಿಮ್ಮ ವ್ಯವಹಾರವೆಲ್ಲವೂ ನಿದ್ರೆಯ ಚೇಷ್ಟೆಯಾಗಿರುವುದು.

ಮಾರ—ತಮ್ಮ ಅನುಮಾನವು ಸತ್ಯವಾದುದು. ಇದಕ್ಕಾಗಿಯೇ ನಾನು ತಮ್ಮನ್ನು ಮಹಾಪುರುಷರೆಂದು ತಿಳಿದು ಕೊಂಡಿರುವುದು.

ಕೇಳು—ನಂದಕುಮಾರ! ಅಪರಾಧವಿಲ್ಲದೆಯೇ ನಿನ್ನನ್ನು ಆವಾಗ ಬಂಧ ಸಾಲಕ್ಕೆ ಕೊಂಡೊಯ್ದರೆಂದು ಕೇಳಿದೆನೋ, ನನ್ನ ಅಪರಾಧಕ್ಕಾಗಿ ಮತ್ತೊಬ್ಬ ನಿರೀಹ ವ್ಯಕ್ತಿಯನ್ನು ಆವಾಗ ಬಂಧನದಲ್ಲಿಟ್ಟರೋ, ಆವಾಗಲೇ ನನ್ನ ಮನವು ತಲ್ಲಣಿಸಲಾರಂಭಿಸಿತು. ನಾನೇ ಹೋಗಿ ಪೋಲೀಸಿನವರ ಮುಂಗಡೆಯಲ್ಲಿ ನನ್ನ ತಪ್ಪನ್ನು ಒಪ್ಪಿಕೊಂಡು ನಿಮ್ಮಗಳನ್ನು ಬಿಡುಗಡೆ ಮಾಡಬೇಕೆಂದು ತೋರಿತು. ನಾನೇನ ಮಾಡಲಿ? ಪ್ರಾಣದ ಮೇಲಣ ಆಸೆಯು ಸಹಜವಾಗಿ ಬಿಡತಕ್ಕುದಾಗಿರ ಲಿಲ್ಲ. ಹೋಗಲಿ, ಈಗ ಆಮಾತುಗಳಿಂದಾಗುವುದೇನು?

ಪರಂತಪ ಮಹಾಶಯ! ನನ್ನ ಉಂಗುರವನ್ನು ಕೊಡೋಣವಾಗಲಿ; ನಾನು ಹೊರಡುವೆನು. ಇಲ್ಲಿಯೇ ಕಾಲಹರಣಮಾಡುತ್ತಾ ತಮಗೆ ತೊಂದರೆಯನ್ನು ಕೊಡಲು ನನಗೆ ಇಷ್ಟವಿಲ್ಲ.

ನಂದಕುಮಾರ! ನನ್ನದೊಂದು ಚರಮಪ್ರಾರ್ಥನೆ. ಕುಂದನಂದಿನಿಯು ನಿನ್ನನ್ನು ಪ್ರೀತಿಸುವಳು; ನೀನೂ ಆಕೆಯನ್ನು ಚೆನ್ನಾಗಿಯೂ ಪ್ರೀತಿಸುವುದಕ್ಕೆ ಅಭ್ಯಾಸವಮಾಡಿರುವೆ. ನೀವಿಬ್ಬರೂ ವಿವಾಹವಿಧಿಯಿಂದ ಪರಸ್ಪರವಾಗಿ ಬದ್ಧ ರಾಗಿ ಸುಖಶಾಂತಿಗಳಿಂದ ಸಂಸಾರ ಯಾತ್ರೆಯನ್ನು ನಿರ್ವಹಿಸಬೇಕೆಂದು ನನಗೆ ತುಂಬಾ ಇಷ್ಟವಿರುವುದು. ನಿನ್ನ ಅಧಮನಾದ ಅಣ್ಣನ ಚರಮಪ್ರಾರ್ಥನೆ ಯನ್ನಾದರೂ ನಡೆಯಿಸಿಕೊಟ್ಟು ನನ್ನ ಆತ್ಮಕ್ಕೆ ಹಿತವನ್ನು ಬಯಸುವವನಾಗು.

ಪರಂತಪನು ಆ ಉಂಗುರವನ್ನು ಹಿಂದಿರುಗಿ ಕೊಟ್ಟುಬಿಟ್ಟನು. ಮಾರ ಕುಮಾರನು ಪರಂತಪನಿಗೆ ಅನೇಕ ಧನ್ಯವಾದಗಳನ್ನರ್ಪಿಸಿ—ಮಹಾಶಯ! ಇಷ್ಟು ದಿನಗಳ ವರೆಗೂ ನಾನು ಸುಖವಾಗಿ ಕಣ್ಣು ತುಂಬಾ ನಿದ್ದೆ ಮಾಡಲಿಲ್ಲ. ಈಗ ನಾನು ಮನೆಗೆ ಹೋಗಿ ಹಾಸುಗೆಯ ಮೇಲೆ ಮಲಗಿಕೊಂಡು ದೀರ್ಘನಿದ್ರೆಯನ್ನು ಅನುಭವಿಸಬೇಕೆಂದಿರುವೆನು. ಎಲ್ಲರೂ ಅಪ್ಪಣೆಯನ್ನು ಕೊಡುವುದಾದರೆ, ನಾನು ತೆರಳುವೆನು, ಎಂದನು.

ಪರಂತಪನು ಈ ಮಾತಿಗೆ ಅವ ಉತ್ತರವನ್ನೂ ಕೊಡದೆ ಕಣ್ಣುಗಳಿಂದ ಧಾರಾಕಾರವಾಗಿ ನೀರನ್ನು ಸುರಿಸಲಾರಂಭಿಸಿದನು. ಈ ದೃಶ್ಯವನ್ನು ನೋಡಲಾರದವನಾಗಿ ಮಾರಕುಮಾರನು ಅಲ್ಲಿಂದೆದ್ದು ಹೊರಟೇ ಹೋದನು.

ನಂದ—ಅಣ್ಣನ ಮಾತು ಹುಚ್ಚುಹುಚ್ಚಾಗಿ ತೋರಿಬಂದಿತು. ಆತನು ಏನ ಮಾಡಬೇಕೆಂದಿರುವನು? ಉಂಗುರವನ್ನು ಕೇಳಿ ತೆಗೆದುಕೊಂಡನಲ್ಲಾ; ಅದರಿಂದ ಅವನಿಗೇನು ಪ್ರಯೋಜನ?

ಪರಂ—ಅದು ವಿಷದ ಭರಣಿಯು. ಮಾರಕುಮಾರನು ವಿಷವನ್ನು ಪಾನ ಮಾಡಿ ಅಪರಿಮಿತವಾದ ತನ್ನ ದುಃಖದ ಜ್ವಾಲೆಯನ್ನು ನಿವಾರಣೆ ಮಾಡಿಕೊಳ್ಳಬೇಕೆಂದು ಬಯಸಿರುವನು.

---

## ಇಪ್ಪತ್ತೆರಡನೆಯ ಸಂಧಿ

### ಉಪಸಂಹಾರ

"ಮಾರಕುಮಾರನು ವಿಷವನ್ನು ಪಾನಮಾಡಿ ತನ್ನ ಪ್ರಾಣವನ್ನು ಬಿಟ್ಟನು" ಎಂದು ಎಲ್ಲೆಲ್ಲಿಯೂ ಸುದ್ದಿಯು ಹರಡಿಕೊಂಡಿತು.

ಮರುದಿನದ ಪ್ರಾತಃಕಾಲದಲ್ಲಿ ಪರಂತಪನು ಮಾರಕುಮಾರನ ಹಸ್ತಾಕ್ಷರದ ಹೇಳಿಕೆಯ ಪತ್ರವನ್ನೂ ಕಮಲಾಕಾಂತನ ನಿಜವಾದ ಉಯಿಲನ್ನೂ ತೆಗೆದುಕೊಂಡು ಪೋಲೀಸು ಠಾಣೆಗೆ ತೆರಳಿದನು. ಅಲ್ಲಿ ವಿಶೇಷವಾಗಿ ವಿಷಯ ವಿಮರ್ಶೆಯಾದ ಬಳಿಕ, ರಾಮರಮಾರಮಣನ ಹೆಸರಿನ ಭೂತನಾಥನೂ ಮದಯಂತಿಯೂ ಬಿಡುಗಡೆಯಾದರು. ಮದಯಂತಿಯು ಬಳಿಕ ಕಮಲಾಕಾಂತನ ಮನಗೆ ಬಂದಳು, ಆದರೆ ಅವಳ ಮನೋರಥವು ಈಡೇರಲಿಲ್ಲವಾಗಿ ತುಂಬಾ ವ್ಯಸನ ಪಟ್ಟುಕೊಂಡಳು.

ನಂದಕುಮಾರನು ಕಮಲಾಕಾಂತರಾಯನ ಸಮಸ್ತವಾದ ಸಂಪತ್ತಿಗೂ ಉತ್ತರಾಧಿಕಾರಿಯಾದನು. ಆತನು, ಮದಯಂತಿಯು ಮತ್ತೆ ಮನೆಗೆ ಬಂದುದನ್ನು ನೋಡಿ, ಕೋಪಗೊಂಡವನಾಗಿ ಆಕೆಯ ಪೂರ್ವ ವೃತ್ತಾಂತ ವೆಲ್ಲವನ್ನೂ ನಿರ್ಭಯವಾಗಿ ತಿಳಿಸಿಬಿಟ್ಟನು.

ಮದಯಂತಿಯು ತನ್ನ ರಹಸ್ಯದ ವೃತ್ತಾಂತವನ್ನು ನಂದಕುಮಾರನ ಬಾಯಿಂದಲೇ ಕೇಳಿ ಮರ್ಮಾಹತೆಯಾಗಿ ಬಿಟ್ಟಳು. ಬಳಿಕ ಆಕೆಯು ಆರೊಡನೆಯೂ

ಆವ ಮಾತನ್ನೂ ಆಡದೆಯೇ ಆ ಮನೆಯಿಂದ ಹೊರಗೆ ಬಂದುಬಿಟ್ಟಳು. ಬಹುಕಾಲದ ಮೇಲೆ, ಆಕೆಯು ಕಾಶಿಯಲ್ಲಿ ವಾಸವಾಗಿರುವಳೆಂದು ಕಾಶಿಗೆ ಹೋಗಿದ್ದವರು ತಿಳಿಸಿದರು.

ರಾಮರಮಾರಮಣ (ಭೂತನಾಥ) ನು ಬಿಡುಗಡೆಯಾದ ಬಳಿಕ ಪರಂತಪನ ಬಳಿಗೆ ಬಂದು—ಮಹಾಶಯ ! ತಮ್ಮ ದಯೆಗೆ ನಾನು ತುಂಬಾ ಕೃತಜ್ಞನಾಗಿರುವೆನು. ಇನ್ನು ಮುಂದೆ ನಾನು ಆವ ದುಷ್ಕಾರ್ಯಕ್ಕೂ ಹೋಗದೆ, ಸದ್ಗೃಹಸ್ಥನಂತೆ ಜೀವಿತ ಶೇಷವನ್ನು ಕಳೆಯುವೆನು. ನಾನು ಪ್ರಾಚೀನ ಕರ್ಮಶೇಷವನ್ನು ಕಳೆದುಕೊಳ್ಳುವುದಕ್ಕಾಗಿ ದುರ್ಮಾರ್ಗದಲ್ಲಿ ಸಂಚರಿಸಬೇಕಾಯಿತು. ಈಗ ನನಗೆ ಜ್ಞಾನೋದಯವಾಯಿತು. ಇನ್ನು ಮುಂದೆ ನಾನು ಪರಲೋಕ ಸಾಧನೆಗೆ ದಾರಿಯನ್ನು ನೋಡಿಕೊಳ್ಳುವೆನು, ಎಂದು ಹೇಳಿ ಪರಂತಪನ ಅಪ್ಪಣೆಯನ್ನು ಪಡೆದುಕೊಂಡು ತನ್ನ ನೈಜವಾದ ಹೆಸರನ್ನು ತಾಳಿ ಹೈಮವತಿಯ ಬಳಿಗೆ ಬಂದು ನಿಂತನು.

ಹೈಮವತಿಯು ಪೆಟ್ಟಿನಿಂದ ತುಂಬಾ ಆಯಾಸ ಪಡುತ್ತಿದ್ದು, ದಿನ ದಿನಕ್ಕೆ ಕೃಶವಾಗಿ ಹೋಗುತ್ತಿರುವಳು. ಆಕೆಯು ಬಾಲ್ಯದಿಂದಲೂ ಭೂತನಾಥನನ್ನೇ ಪ್ರೀತಿಸುತ್ತಿದ್ದಳು. ಭೂತನಾಥನೂ ಆಕೆಯನ್ನು ವರಿಸುವುದಾಗಿ ಅನೇಕವೇಳೆ ಆಕೆಗೆ ಆಸೆಯನ್ನು ತೋರುತ್ತಿದ್ದನು. ಇದರಿಂದ ತನ್ನ ಪ್ರಿಯನು ಎಂದಾದರೊಂದು ದಿನ ತನ್ನನ್ನು ವರಿಸಿಯೇ ವರಿಸುವನೆಂದು ಆಕೆಯು ಬಲುವಾಗಿ ನಂಬಿಕೊಂಡಿದ್ದಳು. ಆದರೆ ಭೂತನಾಥನು ಮದುವೆಯಾಗುವ ಮಾತು ಹಾಗಿರಲಿ—ಆ ಮಾತನ್ನು ಎತ್ತಿದ ಕೂಡಲೆ ಆವಾಗ ಬಲವಾಗಿ ಹೊಡೆದು ಆಕೆಯ ಜೀವನವನ್ನೇ ನಾಶಮಾಡುವುದಕ್ಕೆ ಯತ್ನಮಾಡಿದನೋ, ಆಗಳೇ ಆಕೆಗೆ ಆ ಆಸೆಯೆಲ್ಲವೂ ನಿರ್ಮೂಲವಾಗಿ ಹೋಯಿತು. ಆದುದರಿಂದಲೇ ಆಕೆಯು ಪೆಟ್ಟಿನಿಂದ ತುಂಬಾ ಆಯಾಸ ಪಡುತ್ತಿದ್ದು ದಿನ ದಿನಕ್ಕೆ ಕೃಶವಾಗಿ ಹೋಗುತ್ತಿದ್ದಳು.

ಇಂತಹ ಹೈಮವತಿಯು ಭೂತನಾಥನನ್ನು ನೋಡಿ ತನ್ನ ಕ್ಷೀಣವಾಗಿದ್ದ ಅಧರ ಪ್ರಾಂತದಲ್ಲಿ ಕ್ಷೀಣವಾದ ನಗೆಯೊಂದನ್ನು ತೋರ್ಪಡಿಸಿದಳೇ ಹೊರತು, ಆವ ಮಾತನ್ನೂ ಆಡಲಿಲ್ಲ. ಇದನ್ನು ಕಂಡ ಭೂತನಾಥನು ಆಕೆಯ ಮನೋಭಾವವನ್ನು ಅರಿತುಕೊಂಡನು. ಬಳಿಕ ಆಕೆಯ ಹತ್ತಿರದಲ್ಲಿ ಬಂದು ಕುಳಿತುಕೊಂಡು ಆಕೆಯ ಕೋಮಲವಾದ ಕಯ್ಯನ್ನು ತನ್ನ ಎರಡು ಕೈಗಳಲ್ಲಿಯೂ ಇಟ್ಟು—ಹೈಮ ! ನನ್ನನ್ನು ಕ್ಷಮಿಸ ಬಲ್ಲೆಯಾ ? ಎಂದು ನುಡಿದನು.

ಹೈಮವತಿಯು, ಭೂತನಾಥನು ವಿಶ್ವಾಸದಿಂದ ತನ್ನ ಬಳಿಯಲ್ಲಿ ಬಂದು ಕುಳಿತಿರುವುದನ್ನೂ, ಆತನ ಆದರ ಪೂರ್ಣವಾದ ಮಾತನ್ನೂ ಗಮನಕ್ಕೆ ತಂದು ಕೊಂಡು—ಸ್ವಾಮಿಾ! ಕ್ಷಮೆಯೇ? ನಾನೇ? ತಮ್ಮನ್ನು ಕ್ಷಮಿಸುವುದಕ್ಕೆ ನಾನಾರು? ಸಾಮಾನ್ಯವಾಗಿ ಬೀದಿಯ ಬಿಕಾರಿಯಾದ ನಾನು ತಮ್ಮಂತಹ ಪರಾ ಕ್ರಮಶಾಲಿಗಳನ್ನು ಕ್ಷಮಿಸುವುದೆಂದರೇನು? ಇದೇನು, ಎಂದೂ ಇಲ್ಲದ ಹೊಸ ರೀತಿ? ಬೀಸುವ ಕಲ್ಲು ಗಾಳಿಯಲ್ಲಿ ತೂರಿಬಂದಂತೆ, ಇಲ್ಲಿಗೆ ತಮ್ಮ ಆಗಮನವು ಅತಿಶಯವಾದ ಅಚ್ಚರಿಯನ್ನೇ ಉಂಟುಮಾಡುತ್ತಿರುವುದು. ಎಂದು ಸವಿನುಡಿ ಗಳನ್ನಾಡಿದಳು.

ಭೂತ—ನಿನ್ನನ್ನು ನೋಡುವುದಕ್ಕಾಗಿಯೇ ನಾನು ಇಲ್ಲಿಗೆ ಬಂದಿರು ವೆನು. ಹೈಮ! ನಾನು ನನ್ನ ತಪ್ಪನ್ನು ಅರಿತುಕೊಂಡು ಪಶ್ಚಾತ್ತಾಪ ಪಟ್ಟವ ನಾಗಿ ನಿನ್ನ ಬಳಿಯಲ್ಲಿ ಕ್ಷಮೆಯನ್ನು ಬೇಡುವುದಕ್ಕಾಗಿ ಬಂದಿರುವೆನು.

ಹೈಮ—ಇದಕ್ಕಾಗಿಯೇ ತಾವು ಇಷ್ಟು ದೂರ ಬಿಜಯಮಾಡಿಸಿರುವು ದಾದರೆ, ಇದಕ್ಕೆ ಉತ್ತರವನ್ನು ನಾನು ಮೊದಲೇ ಹೇಳಿಬಿಟ್ಟಿರುವೆನು.

ಭೂತ—ಮತ್ತೊಂದು ವಿಷಯ, ಹೈಮವತಿ!

ಹೈಮ—ಅದೇನು, ಪ್ರಭೂ?

ಭೂತ—ಹೈಮ! ಅಂದು ನಾನು ವಿವೇಕವಿಲ್ಲದೆ ನಿನ್ನಲ್ಲಿ ಅಪಚಾರ ವನ್ನೆಸಗಿ, ನಿನಗೆ ಸಲ್ಲದ ಕಿರುಕುಳವನ್ನುಂಟುಮಾಡಿದ ಬಳಿಕ, ನಾನು ಎಷ್ಟು ನೊಂದುಕೊಂಡೆನೆಂಬುದನ್ನು ನೀನೇನು ಬಲ್ಲೆ? ಈಗ ನಾನು ಬಾಯಿಂದ ಹೇಳಿ ಹೇಗೆ ತಿಳಿಯಪಡಿಸಲಿ? ಈಗ ಆ ಮಾತುಗಳಿಂದಾಗುವುದೇನು? ನಾನು ನಿನ್ನನ್ನು ವಿವಾಹವಾಗಬೇಕೆಂದು ಬಯಸಿ ಬಂದಿರುವೆನು. ನೀನು ಬಯಸಿದಾಗ ನಾನು ತಿರಸ್ಕಾರಮಾಡಿದೆನೆಂದು ಜ್ಞಾಪಕದಲ್ಲಿಟ್ಟುಕೊಂಡು, ಈಗ ಮಟ್ಟಿಗೆ ನನ್ನನ್ನು ತಿರಸ್ಕರಿಸ ಬೇಡ, ಕಂಡೆಯಾ? ಒಂದು ಸವಿನುಡಿಯನ್ನಾದರೂ ಆಡು, ನಾನು ಶೀಘ್ರದಲ್ಲಿಯೇ ವಿವಾಹಕ್ಕೆ ತಕ್ಕ ಏರ್ಪಾಡನ್ನು ಮಾಡುವೆನು.

ಹೈಮ—ಇದೇನು ಭೂತನಾಥ! ನಿಮ್ಮ ಜನ್ಮದಲ್ಲಿ ಇಷ್ಟು ಬೇಗನೆ ಇಷ್ಟು ಪರಿವರ್ತನೆ! ಇದರಲ್ಲಿ ಏನೋ ಹೊಸದಾದ ರಹಸ್ಯವು ಅಡಗಿರಬೇಕು.

ಭೂತ—ಹೈಮ! ಸೃಷ್ಟಿಮಾಡಿದ ಭಗವಂತನ ಆಣೆಗೂ, ಜನ್ಮವಿತ್ತ ಮಾತಾಪಿತೃಗಳ ಪಾದದಾಣೆಗೂ ಇದರಲ್ಲಿ ಆವ ರಹಸ್ಯವೂ ಇಲ್ಲ, ಆವ ಚಾತು ರ್ಯವೂ ಇಲ್ಲ. ನಿನ್ನ ಇಷ್ಟವನ್ನು ತಿಳಿಸು.

ಹೈಮ—ನಾಥ! ನನ್ನ ಇಷ್ಟದಿಂದಾಗುವುದೇನು? ನನ್ನ ಹೃದಯವು ತಮಗೆ ತಿಳಿಯದೇ? ನಾನು ತಮಗೆ ಹೊಸಬಳಲ್ಲ.

ಭೂತ—ಹೈಮು! ನಾನು ನಿನ್ನಲ್ಲಿ ಮಾಡಬಾರದ ಕೆಲಸವನ್ನು ಮಾಡಿರುವುದರಿಂದ, ಈ ರೀತಿಯಾಗಿ ಪ್ರಾರ್ಥಿಸಿಕೊಳ್ಳಬೇಕಾಗಿರುವುದು. ನೀನು ನನ್ನಲ್ಲಿ ಪೂರ್ಣ ಕಟಾಕ್ಷವಿಟ್ಟು ನನ್ನ ಮನೋರಥವನ್ನು ಸಲ್ಲಿಸಿಕೊಡಬೇಕು.

ಹೈಮ—ನಾನು ಆ ಆಸೆಗೆ ಎಂದೋ ಜಲಾಂಜಲಿಯನ್ನು ಕೊಟ್ಟು ಬಿಟ್ಟೆನು. ಈಗ ಅದನ್ನು ಕಟ್ಟಿಕೊಂಡು ಅತ್ತರೆ ಪ್ರಯೋಜನವೇನು? ಅಂದಿನ ಕಾಲ ಅಂದಿಗೆ, ಇಂದಿನ ಕಾಲ ಇಂದಿಗೆ.

ಭೂತ—ಹೈಮವತಿ! ನಿನ್ನ ಅಭಿಪ್ರಾಯವು ಹೀಗಿರುವುದಾದರೆ, ಇನ್ನು ನಾನು ಬದುಕಿ ತಾನೇ ಫಲವೇನು? ನಾನು ಆರಿಗಾಗಿ ಈ ಹಾಳ ಜನ್ಮವನ್ನು ಧಾರಣ ಮಾಡಿಕೊಂಡಿರಬೇಕು?

ಹೈಮ—ಪ್ರಭೂ! ತಾವು ಆವಾಗಲೂ ಸಾಹಸಿಗಳು. ನಿಮಗೆ ವಿಪತ್ತುಗಳೇ ಒಡನಾಡಿಗಳು. ಪೋಲೀಸಿನವರ ಕೈಗೆ ಸಿಲುಕಿ ನರಳುವುದೇ ನಿಮಗೆ ಪರಮ ಧ್ಯೇಯವಾಗಿರುವಲ್ಲಿ, ನಿಮ್ಮಂಥವರಿಗೆ ವಿವಾಹದಿಂದ ಸುಖವಿಲ್ಲ. ನಿಮ್ಮಂಥವರ ಕೈ ಹಿಡಿದ ನಮಗಂತೂ "ಸುಖಂ ಸ್ವಪ್ನೇಪಿ ದುರ್ಲಭಂ"

ಭೂತ—ಹೈಮವತಿ! ಈಗ ನನ್ನನ್ನು ಆರೆಂದು ತಿಳಿದು ಮಾತನಾಡುತ್ತಿರುವೆ? ಆ ದರೋಡೆಗಳ್ಳನಾದ ಭೂತನಾಥನು ಮಡಿದು ಇಂದಿಗೆ ಎಷ್ಟೋ ದಿನಗಳಾಗಿ ಹೋದುವು. ಈಗ ನಾನು ದೇಶದ ಸತ್ಪ್ರಜೆ. ಈಗ ನಾನು ನಿನ್ನನ್ನು ವಿವಾಹ ಮಾಡಿಕೊಂಡು ದೂರದೇಶಕ್ಕೆ ಹೋಗಿ ಅಲ್ಲಿ ಸನ್ಮಾರ್ಗಾವಲಂಬನದಿಂದ ಜೀವನವನ್ನು ಸಂಪಾದಿಸಿಕೊಂಡು ಸುಖದಿಂದ ಬಾಳಬೇಕೆಂದು ಸಂಕಲ್ಪ ಮಾಡಿಕೊಂಡಿರುವೆನು. ಪ್ರಮಾಣವಾಗಿ ಹೇಳುವೆನು; ಇದೆಂದಿಗೂ ಸುಳ್ಳಲ್ಲ.

ಹೈಮ—ನಾಥ! ತಮ್ಮ ಹೃದಯದಲ್ಲಿ ಧರ್ಮವು ಅಂಕುರಿಸಿ ತಾವು ಹೇಳುವ ರೀತಿಯಲ್ಲಿ ವರ್ತಿಸುವುದಾದರೆ, ನನಗಿಂತಲೂ ಪುಣ್ಯಾತ್ಮರು ಈ ಲೋಕದಲ್ಲಿ ಮತ್ತಾರೂ ಇಲ್ಲವೆಂದೇ ನನ್ನ ಭಾವನೆಯು. ತಾವು ನನ್ನನ್ನು ವರಿಸಿ ಸನ್ಮಾರ್ಗದಲ್ಲಿ ವರ್ತಿಸುವುದಾದರೆ, ನಮಗೆ ದಾರಿದ್ರ್ಯವೂ ಪರಮಮಂಗಳವು, ಅನ್ನವಿಲ್ಲದೇ ಸಾಯುವುದೂ ಮಹೋಪವಾಸವ್ರತನಿಯಮಗಳು.

ಭೂತನಾಥನು ಈ ಮಾತನ್ನು ಕೇಳಿ ಪರಮಾನಂದ ಭರಿತನಾದನು. ಕೂಡಲೆಯೇ ಆತನು ತಡೆಯಲಾರದೆ ಹೈಮವತಿಯನ್ನು ಅಪ್ಪಿಕೊಂಡು ಪರಿಪರಿಯಾಗಿ

ಚುಂಬಿಸಿದನು. ಹೈಮವತಿಯೂ ಆನಂದದಿಂದ ಮೈಮರೆತವಳಾಗಿ ಆನಂದಾಶ್ರು ವನ್ನು ವರ್ಷಣಮಾಡಿದಳು.

ಒಂದೆರಡು ದಿನಗಳೊಳಗಾಗಿಯೇ ಹೈಮವತೀ ಭೂತನಾಥರಿಗೆ ವಿವಾಹ ವಾಗಿಬಿಟ್ಟಿತು. ಆಗ ವಿಚಾರಮಾಡಿದುದರಲ್ಲಿ, ವೀರಭದ್ರಕಾಲರುದ್ರರು ಗುರು ತರವಾದ ಅಪರಾಧಕ್ಕೆ ಫಲರೂಪವಾಗಿ ಯಾವಜ್ಜೀವವೂ ಕಾರಾಗೃಹವಾಸವೆಂಬ ದಂಡನೆಯನ್ನು ಅನುಭವಿಸುತ್ತಿರುವರೆಂದು ತಿಳಿದು ಬಂದಿತು. ಭೂತನಾಥನು ಇದಕ್ಕಾಗಿ ಪಶ್ಚಾತ್ತಾಪಪಡಲಿಲ್ಲ. ಆತನು ಇನ್ನು ಈ ದೇಶದಲ್ಲಿರುವುದು ತರವಲ್ಲ ವೆಂದು ಪರ್ಯಾಲೋಚಿಸಿ ದೂರದೇಶಕ್ಕೆ ತೆರಳಿಬಿಟ್ಟನು.

ನಂದಕುಮಾರನು ಕಮಲಾಕಾಂತನ ಮನೆಗೆ ಸರ್ವಾಧಿಕಾರಿಯಾದನು. ಕುಂದನಂದಿನಿಯ ಸಂತೋಷಕ್ಕೆ ಪಾರವೇ ಇರಲಿಲ್ಲ. ದಾಸದಾಸಿಯರ ಆನಂದ ವಾದರೋ ವರ್ಣನಾತೀತವಾಗಿದ್ದಿತು.

ಒಂದಾನೊಂದು ದಿನ ಪರಂತಪನು ನಂದಕುಮಾರನ ಮನೆಗೆ ಬಂದು ನಂದ ಕುಮಾರ ಕುಂದನಂದಿನಿಯರನ್ನು ನೋಡಿ ಪರಮಾನಂದಭರಿತನಾಗಿ ಅವರಿಬ್ಬರ ವಿವಾಹಕ್ಕೆ ತಾನೇ ಮುಂದಾಳಾಗಿ ನಿಂತುಕೊಂಡು ಯಥಾರೀತಿಯಾಗಿ ವಿವಾಹ ಮಹೋತ್ಸವವನ್ನು ಅತಿ ವಿಜೃಂಭಣೆಯಿಂದ ನೆರವೇರಿಸಿದನು. ಅನಂತರತ್ನನೂ ಅಲ್ಲಿಗೆ ಬಂದು ಕಮಲಾಕಾಂತನ ನಿಜವಾದ ಉಯಿಲನ್ನು ಎಲ್ಲರ ಇದಿರಿನಲ್ಲಿಯೂ ಗಟ್ಟಿಯಾಗಿ ಓದಿದನು. ಬಂದಿದ್ದವರೆಲ್ಲರೂ ನೂತನ ವಧೂವರರಿಗೆ ಆಶೀರ್ವಾದ ವನ್ನು ಮಾಡಿ ಪುರಸ್ಕಾರದೊಡನೆ ತಮ್ಮತಮ್ಮ ಮನೆಗಳಿಗೆ ತೆರಳಿದರು.

ನಂದಕುಮಾರ ಕುಂದನಂದಿನಿಯರ ಪ್ರಾರ್ಥನೆಯಂತೆ ಪರಂತಪನು ಆ ಮನೆಗೆ ಯಜಮಾನನಾಗಿದ್ದುಕೊಂಡು ಆ ಬಾಲ್ಯಸಂಸಾರವು ಶ್ಲಾಘ್ಯವಾದ ರೀತಿ ಯಲ್ಲಿ ನಡೆದು ಬರುವಂತೆ ತಕ್ಕ ಏರ್ಪಾಡುಗಳನ್ನು ಮಾಡಿ, ತಾನು ಮಾಡಿದ ಕೆಲ ಸವು ಭಗವಂತನಿಗೆ ಪ್ರೀತಿಯಾಯಿತೆಂಬ ಸಂತೋಷವನ್ನೇ ತನ್ನ ಶ್ರಮಕ್ಕೆ ಪುರ ಸ್ಕಾರವನ್ನಾಗಿ ಪಡೆದುಕೊಂಡು ತನ್ನ ಮನೆಗೆ ತೆರಳಿದನು.

ನಂದಕುಮಾರ! ಕುಂದನಂದಿನಿ! ನಾವು ಬಂದು ಹದಿನೈದು ದಿನಗಳಾದುದ ರಿಂದ, ಇನ್ನು ನಾವು ಮುಂದಣ ಕೆಲಸಕ್ಕೆ ತೆರಳುವವರಾಗಿರುವೆವು. ನಿಮಗೆ ಭಗವಂತನು ದೀರ್ಘಾಯುರಾರೋಗ್ಯೈಶ್ವರ್ಯಾಭಿವೃದ್ಧಿಯನ್ನೂ, ಪುತ್ರಪೌತ್ರ, ಬಂಧುಬಾಂಧವ, ದಾಸದಾಸೀ, ಧನಧಾನ್ಯ ಸಂಪತ್ತನ್ನೂ ಅಡಿಗಡಿಗೂ ದಯೆ ಪಾಲಿಸುತ್ತಿರಲಿ.

ಸಂಪೂರ್ಣಂ

